

ಶ್ರೀಯುತ ವಿದ್ವಾನ್ ವಿದ್ಯಾಭೂಷಣ
ಬಾಲಸರಸ್ವತೀ.

## ಶ್ರೀಮತ್ಕರ್ಣಾಟ ದೇಶಭಾಷಾಭಿಮಾನಿ ಮಹಾಶಯರಲ್ಲಿ ವಿಜ್ಞಾಪನೆ.

---

ರಾಣೀ ಚೌಧುರಾಣಿಯೆಂಬುದು ನವನ್ಯಾಸದ ಶೈಲಿಯಿಂದ್ಧ ರಚಿತವಾದ ಒಂದು ಸಾಂಸಾರಿಕವಾದ ದೊಡ್ಡ ಕತೆ. ಚಮತ್ಕಾರಕವಾದ ಅಘಟನ ಘಟನಾ ವಿಶೇಷಗಳಿಂದ ನಮ್ಮ ಪ್ರಿಯಪಾಠಕ ಮಹಾಶಯರ ಚಿತ್ತವನ್ನು ಒಂದು ಕ್ಷಣ ಕಾಲದ ಮಟ್ಟಿಗೆ ಸ್ತಬ್ಧವನ್ನಾಗಿ ಮಾಡಿ ಅನಂತಧಾಮದಲ್ಲಿ ಅಡಗಿ ಹೋಗತಕ್ಕ ಕತೆಯು ಇದಲ್ಲ. ರಾಣೀ ಚೌಧುರಾಣಿಯು ಅನಂತಕಾಲದ ವರೆಗೂ ಸಂಸಾರಿಗಳ ಸಹವಾಸದಲ್ಲಿದ್ದುಕೊಂಡು ಸ್ತ್ರೀಪುರುಷರಿಬ್ಬರಿಗೂ ಯುಕ್ತಾಯುಕ್ತ ವಿವೇಚನೆಯಿಂದ ಬುದ್ಧಿಗಲಿಸುವುದಕ್ಕಾಗಿ ಭೂಲೋಕದಲ್ಲಿ ಅವತರಿಸಿ ಬಂದಿರುವ ತ್ರಿಭುವನೇಶ್ವರಿ. ಈ ನವನ್ಯಾಸದಲ್ಲಿ ಸತ್ಪುರುಷರಿಗೆ ದೈವ ಸಾಹಾಯ್ಯವುಂಟೆಂದೂ, ಕೆಟ್ಟವರಿಗೆ ಮನುಷ್ಯರು ಕೂಡ ಸಹಾಯರಾಗಲಾರರೆಂದೂ, ಶಿಷ್ಟರಿಗೆ ಪ್ರಾರಂಭದಲ್ಲಿ ಕಷ್ಟಪರಂಪರೆ ಯುಂಟಾದರೂ ಪರಿಣಾಮದಲ್ಲಿ ಸುಖವುಂಟೆಂದೂ, ದುಷ್ಟರಿಗೆ ಮೊದಮೊದಲಲ್ಲಿ ಸುಖವು ಕಂಡುಬಂದರೂ ಪರಿಣಾಮದಲ್ಲಿ ದುಃಖವೇ ಉಂಟಾಗುವುದೆಂದೂ ಈ ನವನ್ಯಾಸದಿಂದ ತೋರಿಬರುವ ನೀತಿವಿಶೇಷವು. ಈ ನೀತಿಗೆ ಉದಾಹರಣ ಸ್ವರೂಪವಾಗಿ ಒಂದು ದೊಡ್ಡದಾದ ಸಾಂಸಾರಿಕ ಘಟನಾವಳಿಯು ಕ್ರಮನಿಯಮವನ್ನನುಸರಿಸಿ ಅಭಿವೃದ್ಧಿಗೊಳಿಸಲ್ಪಟ್ಟಿರುವುದು. ಈ ಗ್ರಂಥ ವಿಶೇಷವನ್ನು ಸ್ತ್ರೀಪುರುಷರಲ್ಲಿ ಆ ಬಾಲವೃದ್ಧರೆಲ್ಲರೂ ಅತ್ಯಾದರದಿಂದ ಓದಿ ನೀತಿವಿಶೇಷಗಳನ್ನು ಅರಿತುಕೊಳ್ಳತಕ್ಕುದಿದೆ. ಈ ಭಾಗದ್ವಯಾತ್ಮಕವಾದ ಗ್ರಂಥವನ್ನು ಓದಿ ಸ್ತ್ರೀಪುರುಷರಲ್ಲಿ ಆರೊಬ್ಬರೇ ಆಗಲಿ ಕೊಂಚವಾಗಿಯಾದರೂ ಲೋಕಾನುಭವವನ್ನುಂಟು ಮಾಡಿಕೊಳ್ಳುವುದಾದರೆ, ಅಂದಿಗೆ ಗ್ರಂಥಕಾರರ ಶ್ರಮವು ಸಾರ್ಥಕವೆನಿಸುವುದು.

೨೮ ಆಗಸ್ಟ್,
ಮೈಸೂರು.

ಬಾಲಸರಸ್ವತೀ.

ನತಿಯು ಕಂಡುಬರುವುದು. ಒಬ್ಬನು ಸುಖಪಡುತ್ತಿರುವಲ್ಲಿ ಮತ್ತೊಬ್ಬನು ದುಃಖದಿಂದ ನರಳುತ್ತಿರುವನು. ಒಂದೆಡೆಯಲ್ಲಿ ದರಿದ್ರನು ಹಣಗಾರನಾಗುವುದಕ್ಕೆ ಮಾಡಬಾರದ ಕೆಲಸಗಳನ್ನು ಮಾಡುವನು ; ಮತ್ತೊಂದೆಡೆಯಲ್ಲಿ ಐಶ್ವರ್ಯವಂತನೂ ತನ್ನ ಪಾಡು ನಾಯ ಪಾಡೆಂದು ತಿಳಿದು ಲೋಕದಲ್ಲಿ ದರಿದ್ರನಾಗಿ ಹುಟ್ಟಿದವನೇ ಸುಖಿಯೆಂದು ತಿಳಿದುಕೊಳ್ಳುವನು. ಕೆಲವರು ಸ್ವಾತಂತ್ರ್ಯವನ್ನು ಬಯಸುವರು ; ಕೆಲವರು ಸೇವೆಯನ್ನು ಕೈಕೊಳ್ಳುವರು ; ಕೆಲವರು ಉದಾಸೀನರಾಗಿ ಒಳ್ಳೆಯದು ಕೆಟ್ಟುದು ಎಂಬುದನ್ನೇ ಗಣನೆಗೆ ತಾರರು. ಒಬ್ಬನು ಸುಖವೆನ್ನುವುದನ್ನು ಮತ್ತೊಬ್ಬನು ದುಃಖವೆನ್ನುವನು. ಸುಖದಲ್ಲಿ ದುಃಖವನ್ನೂ ದುಃಖದಲ್ಲಿ ಸುಖವನ್ನೂ ಅನುಭವಿಸುವವರು ಅನೇಕರಿರುವರು ; ಸುಖದಲ್ಲಿಯೂ ದುಃಖದಲ್ಲಿಯೂ ಒಂದೇ ಭಾವದಿಂದಿರತಕ್ಕವರೂ ಕೆಲವರಿರುವರು. ಇವೆಲ್ಲವೂ ಕಾಲದ ಮಹಿಮೆಯೇ ಸರಿ.

ಲೋಕದಲ್ಲಿ ಸೃಷ್ಟವಾದ ವಸ್ತುಗಳೆಲ್ಲವೂ ಕಾಲಾಧೀನಗಳೇ ಆದರೂ ಮನುಷ್ಯನು ಮಟ್ಟಿಗೆ ಕಾಲಕ್ಕೆ ಕೇವಲವಾಗಿ ದಾಸಾನುದಾಸನಾಗಿರುವನು. ಕ್ಷಣಿಕ ಸ್ವಭಾವದವನಾದ ಮನುಷ್ಯನು ವಿವೇಕದಿಂದಲೂ ಅವಿವೇಕದಿಂದಲೂ ಪ್ರತಿಕ್ಷಣದಲ್ಲಿಯೂ ವಿಪರಿಣಾಮವನ್ನು ಹೊದ್ದುತ್ತಲೇ ಇರುವನು. ಈ ಬಗೆಯ ಪರಿಣಾಮಕ್ಕೆ ಮೊದಲಾವುದೋ ತುದಿಯಾವುದೋ ಗೊತ್ತಾಗಲೊಲ್ಲದು. ಮನುಷ್ಯನ ವ್ಯಾಪಾರದಲ್ಲಿ ಇಂದೊಂದು ಬಗೆಯಾದರೆ, ನಾಳೆಯೊಂದು ಬಗೆಯಾಗಿರುವುದು. ಅಂದಿಗೆ ಅದೇ ಸರಿ, ಇಂದಿಗೆ ಇದೇ ಸರಿ, ಎಂದು ವಾದಾನುವಾದಗಳಿಂದ ಸಿದ್ಧಾಂತಪಡಿಸುವ ಮನುಷ್ಯನ ಬುದ್ಧಿಯಲ್ಲಿ ಎಂದಿಗೆ ಯಾವುದು ಸರಿಯೋ ದೇವರೊಬ್ಬನೇ ಬಲ್ಲನು. ಪ್ರಕೃತಿಯ ನಿಯಮದಲ್ಲಿ ಇಂತಹ ಕ್ಷಣಿಕವ್ಯಕ್ತಿಯು ಸಾಮಾನ್ಯವಾಗಿ ಕಂಡುಬರುವುದಿಲ್ಲ. ಪ್ರಕೃತಿಯಲ್ಲಿ ಯಾದರೋ ದೀರ್ಘಾಲೋಚನೆಯಿಂದ ವಿಪರಿಣಾಮ ವ್ಯಾಪಾರವು ನಡೆಯುತ್ತಿರುವುದು. ಪ್ರಕೃತಿಯ ಯಾವ ಕೆಲಸದಲ್ಲಿಯೂ ಪೂರ್ವಾಪರವಿರೋಧಗಳು ಕಂಡುಬರಲಿಕ್ಕಿಲ್ಲ. ಪ್ರಕೃತಿವ್ಯಾಪಾರವು ಅನಂತಕಾಲವನ್ನು ಅವಲಂಬಿಸಿರುವುದರಿಂದ, ಅದರ ವ್ಯಾಪಾರವೇ ಬೇರೆಯಾಗಿರುವುದು, ಅದರ ವಿಪರಿಣಾಮವೇ ಬೇರೆಯಾಗಿರುವುದು. ಇದರ ಮರ್ಮವನ್ನರಿವುದು ಮನುಷ್ಯಮಾತ್ರದವನ ಹಣೆಯಲ್ಲಿಯೇ ಬರೆದಿಲ್ಲ. ಆದರೂ ಮನುಷ್ಯನ ಪ್ರಯತ್ನವನ್ನು ಕುರಿತು ಏನೆಂದು ಹೇಳುವ! ಮನುಷ್ಯನು ಆವಾಗಲೂ ಪ್ರಕೃತಿಯನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದಕ್ಕೆ ಬಗೆಬಗೆಯ ಮಾರ್ಗಗಳನ್ನು ಹುಡುಕುತ್ತಲೇ ಇರುವನು. ಪ್ರಕೃತಿಯು ಮನುಷ್ಯನ ವಶಕ್ಕೆ ಬರಲಿ, ಬಾರದಿರಲಿ ; ಮನುಷ್ಯನ ಪ್ರಯತ್ನವು ಶ್ಲಾಘ್ಯವಾದುದೆಂದೇ ಹೇಳಬೇಕು. ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಭೂತಗಳು ಸೃಷ್ಟಿಸ್ಥಿತಿಲಯಕರ್ತನಾದ ಭಗವಂತನ ಪಂಚಾ

ಯುಧಗಳು. ಈ ಮಹಾಭೂತಗಳು ಅಣುವೆನಿಸಿದ ಮನುಷ್ಯನಿಗೆ ಸ್ವಾಧೀನವಾಗ ತಕ್ಕುವುಗಳೇ? ಪಂಚಭೂತಗಳನ್ನು ನಾವು ಜಯಿಸಿದೆವೆಂದು ಹೆಮ್ಮೆಪಡುವುದು ಯಾರು ಒಪ್ಪತಕ್ಕ ಮಾತು? ನಾನು ನಮ್ಮ ಅನುಕೂಲತೆಗಾಗಿ ಕೆಲ ಕೆಲಸಗಳನ್ನು ಮಾಡಿದಮಾತ್ರಕ್ಕೆ ಪಂಚಭೂತಗಳಿಗೆ ನಾವು ಒಡೆಯರೆಂದು ಹೇಳಿಕೊಳ್ಳುವುದು ಹಾಸ್ಯಾಸ್ಪದವೇ ಸರಿ. ಒಂದು ವೇಳೆ ನಾವೇ ನಮ್ಮನ್ನು ಹೊಗಳಿಕೊಂಡರೆ ಆ ಭೂತಗಳಿಗಾಗುವ ಕಷ್ಟನಷ್ಟಗಳೇನು? ನಾವು ಅಹಂಕಾರ ಮಮಕಾರಗಳಿಂದ ಹೀಗೆಯೇ ದಿನಗಳನ್ನು ಕಳೆಯುತ್ತಿರುವೆವು; ಪಂಚಭೂತಾತ್ಮಕವಾದ ಪ್ರಕೃತಿ ಯಾದರೋ ಗದ್ದಲವಿಲ್ಲದೆಯೇ ತನ್ನ ನಿಯಮಕ್ಕೆ ಅನುಸಾರವಾಗಿ ವಿಪರಿಣಾಮ ವ್ಯಾಪಾರವನ್ನು ನೆರವೇರಿಸುತ್ತಲೇ ಇರುವುದು. ಇದಂತಿರಲಿ.

ಭರತಖಂಡದ ಉತ್ತರಭಾಗದಲ್ಲಿ ಗಂಗಾನದಿಯು ಆರ್ಯಾವರ್ತವನ್ನು ಪವಿತ್ರವನ್ನಾಗಿ ಮಾಡುತ್ತಾ ಅನಂತಕಾಲದಿಂದಲೂ ಪಶ್ಚಿಮದಿಂದ ಪೂರ್ವಾಭಿ ಮುಖವಾಗಿ ಪ್ರವಹಿಸುತ್ತಲೇ ಇರುವುದು. ಇಂದಿನ ವರೆಗೂ ಗಂಗೆಯ ಮಹಾ ಮಹಿಮೆಯನ್ನು ಅರಿಯದವರೇ ಇಲ್ಲ. ತ್ರಿಲೋಕಪಾವನಿಯೆನಿಸಿದ ಅಗಾಧ ಹೃದಯಳಾದ ಗಂಗೆಯೂ ಪ್ರಕೃತಿನಿಯಮವನ್ನನುಸರಿಸಿ ಹಗಲಿರುಳೂ ಸಮುದ್ರ ವನ್ನು ಕುರಿತು ತೆರಳುತ್ತಲೇ ಇರುವಳು. ಈಕೆಯು ಒಂದೊಂದು ವೇಳೆ ಮಹಾ ಡಂಬರದಿಂದ ದನಿಗೆಯ್ಯುತ್ತಿರುವಳು; ಒಂದೊಂದುವೇಳೆ ಕಲಕಲನಾದಿನಿಯಾಗಿ ನಮ್ರತೆಯಿಂದ ಪ್ರವಹಿಸುತ್ತಿರುವಳು. ಪತಿಗೃಹಾಭಿಮುಖವಾಗಿ ತೆರಳುತ್ತಿರುವ ಈಕೆಯ ಮನೋಭಾವವನ್ನು ಅರಿತವರೇ ಇಲ್ಲ. ನಾವು ಆವ ಕಾಲದ ಘಟನಾ ವಳಿಯನ್ನು ಅವಲಂಬಿಸಿ ಈ ನವನ್ಯಾಸ ಗ್ರಂಥವಿಶೇಷವನ್ನು ಬರೆಯಲು ಸಿದ್ಧ ರಾಗಿರುವೆವೋ ಆಗ ಈಗಣಕಾಲದ ನೂತನ ಪರಿವರ್ತನಗಳಾವುವೂ ನಮ್ಮ ದೇಶ ದಲ್ಲಿ ಕಂಡುಬರುತ್ತಿರಲಿಲ್ಲ. ಗಂಗಾ ಮಾತೆಗೂ ಯಾವ ಬಗೆಯ ವಿರೂಪವೂ ಉಂಟಾಗಿರಲಿಲ್ಲ. ಗಂಗಾತೀರದಲ್ಲಿದ್ದ ಅನೇಕ ಗ್ರಾಮಗಳಲ್ಲಿ ಸೌಂದರ್ಯ ಲಕ್ಷ್ಮಿಯೂ ಧನಧಾನ್ಯಲಕ್ಷ್ಮಿಯೂ ಇನ್ನೂ ಕಾಲ ತೆಗೆದು ಹೊರಗಿಟ್ಟಿರಲಿಲ್ಲ. ಇಂತಹ ಸಮಯದಲ್ಲಿ ಗಂಗೆಯ ದಕ್ಷಿಣ ತೀರಕ್ಕೆ ಸೇರಿದ ಹಾಗೆ ಗ್ರಾಮವೊಂದು ಸುಖಸಂಪತ್ತುಗಳಿಂದ ಪ್ರಕಾಶಿಸುತಿದ್ದಿತು. ಈಗ ಆ ಗ್ರಾಮದ ಸುಳಿವೇ ಇಲ್ಲ. ಸರ್ವಭಕ್ಷಕನಾದ ಕಾಲಪುರುಷನು ಆ ಗ್ರಾಮವನ್ನು ಏಕಾಪೋಶನಮಾಡಿ ಬಿಟ್ಟಿದ್ದನು? ಆ ಗ್ರಾಮವು ಇದ್ದ ಸ್ಥಳವನ್ನಾದರೂ ನೋಡಬೇಕೆಂದರೆ, ಅದನ್ನೂ ತೋರಿಸತಕ್ಕವರೇ ಇಲ್ಲ. ಕಾಲಪುರುಷನ ಹಾವಳಿಯನ್ನು ಕುರಿತು ಏನೆಂದು ವರ್ಣಿಸುವ?

ಪೂರ್ವಕಾಲದಲ್ಲಿ ಆ ಗ್ರಾಮವು ಎಲ್ಲಾ ಅನುಕೂಲತೆಯನ್ನೂ ಒಳಗೊಂಡು ಒಳ್ಳೆಯ ಸ್ಥಿತಿಯಲ್ಲಿದ್ದಿತು. ಅಲ್ಲಿ ರಾಯ ಮನೆತನದವರು ಬಹುಕಾಲದಿಂದಲೂ

ವಾಸವಾಗಿರುತಿದ್ದರು. ರಾಯ ಮನೆತನದ ಪೂರ್ವ ಪುರುಷರೇ ಈ ಗ್ರಾಮವನ್ನು ಸ್ಥಾಪಿಸಿದರೆಂದು ಜನರು ಆಡಿಕೊಳ್ಳುತಿದ್ದರು. ಅದರಿಂದಲೇ ಆ ಗ್ರಾಮಕ್ಕೆ ರಾಯಪೇಟೆ ಅಥವಾ ರಾಜನಗರವೆಂದು ಹೆಸರಿದ್ದಿತು. ಅವರ ಹೆಸರಿನಿಂದಲೇ ಗಂಗಾ ತೀರದಲ್ಲಿ ರಾಯಘಟ್ಟವೆಂಬುದಾಗಿ ಒಂದು ಘಟ್ಟವೂ, ಅದರ ಮೇಲೆ ಎರಡು ಪಕ್ಕಗಳಲ್ಲಿಯೂ ಎರಡು ದೇವಮಂದಿರಗಳೂ ಸ್ಥಾಪಿಸಲ್ಪಟ್ಟಿದ್ದುವು.

ಫಾಲ್ಗುನ ಮಾಸ. ಒಂದಾನೊಂದು ದಿನದ ಅಪರಾಹ್ಣ ಕಾಲದಲ್ಲಿ ಸೂರ್ಯದೇವನು ತನ್ನ ನಿತ್ಯ ವ್ಯಾಪಾರವನ್ನು ತೀರಿಸಿಕೊಂಡು ಪಶ್ಚಿಮಾಭಿಮುಖ ವಾಗಿ ತೆರಳುವುದರಲ್ಲಿದ್ದನು. ಆ ಸಮಯದಲ್ಲಿ ರಾಯಘಟ್ಟವು ಜನಶೂನ್ಯವಾ ಗಿದ್ದಿತು. ಆಗ ಹುಡುಗಿಯೊಬ್ಬಳು ಗಂಗೆಯಲ್ಲಿ ಸ್ನಾನಮಾಡಿ ಒದ್ದೆಯ ಬಟ್ಟೆಯ ನ್ನುಟ್ಟು ಸಣ್ಣ ಕೊಡದಲ್ಲಿ ಗಂಗೆಯನ್ನು ತುಂಬಿಕೊಂಡು ಸೋಪಾನಗಳ ಮೇಲೆ ಹತ್ತಿಬರುತಿದ್ದಳು. ಅಷ್ಟು ಹೊತ್ತಿಗೆ ಸರಿಯಾಗಿ ಎಲ್ಲಿಂದಲೋ ಒಂದು ಅಸ್ಫುಟ ವಾದ ವಿಕಟಧ್ವನಿಯು ಹೊರಹೊರಟಿತು. ಇದನ್ನು ಕೇಳಿದ ಕೂಡಲೆ ಹುಡುಗಿ ಯು ಚಕಿತಳಾಗಿ ಗದಗದನೆ ನಡುಗುತ್ತಾ ನಿಂತಳು. ಕತ್ತಲೆಯಲ್ಲಿ ಆ ಬಾಲಿ ಕೆಯು ಇಂತಹ ಧ್ವನಿಯನ್ನು ಕೇಳಿದ್ದಿದ್ದರೆ, ಅವಳ ಪಾಡೇನಾಗುತಿದ್ದಿತೋ ಹೇಳುವುದಕ್ಕೆ ತೀರದು. ಸೂರ್ಯನ ಕಿರಣಗಳು ಇನ್ನೂ ವೃಕ್ಷಾಗ್ರದಲ್ಲಿ ವಿಹರಿಸುತಿದ್ದುದರಿಂದ ಆ ಬಾಲಿಕೆಯು ಕೊಂಚ ಧೈರ್ಯವನ್ನವಲಂಬಿಸಿ ಸೋಪಾನಾವಳಿಗಳನ್ನೇರಿ ಬಂದಳು. ಆಕೆಯು ಇತರ ಸಾಧಾರಣ ಸ್ತ್ರೀಯರಂತೆ ಭೂತಪ್ರೇತ ಪಿಶಾಚಗಳ ಸುದ್ದಿಯನ್ನು ಕೇಳಿ ಬೆಚ್ಚಿ ಬೆದರತಕ್ಕವಳಾಗಿರಲಿಲ್ಲ. ಆದರೂ ಈ ಅಪೂರ್ವ ಚೀತ್ಕಾರ ಧ್ವನಿಯನ್ನು ಬಾಲಿಕೆಯು ಕೇಳಿದ ಕೂಡಲೆ ಆಕೆಯ ಕೌಂಕುಳಲ್ಲಿದ್ದ ಸಣ್ಣ ಕೊಡವು ಕಳಚಿ ಕೆಳಗೆ ಬಿದ್ದಿತು. ಬಾಲಿಕೆಯು ಅದನ್ನು ಮತ್ತೆ ಮೇಲಕ್ಕೆ ಎತ್ತಿಕೊಂಡು ಬಂದು ಭಯಕ್ಕೆ ಕಾರಣವೇನೆಂದು ಸುತ್ತಲೂ ನೋಡಿದಳು. ದೇವಸ್ಥಾನದ ಪಕ್ಕದಲ್ಲಿ ಒಬ್ಬ ವಿದೇಶಿಯಾದ ಮುದುಕನು ನೆಲದ ಮೇಲೆ ಬಿದ್ದು ಒದ್ದಾಡುತಿದ್ದನು. ಆತನ ಬಾಯಿಂದ ಜೊಲ್ಲು ಸುರಿಯುತಿದ್ದಿತು. ತಲೆಯ ಮೇಲಿದ್ದ ಉಷ್ಣೀಷ (ಪಾಗು) ವು ದೂರ ವಾಗಿ ಒಂದೆಡೆಯಲ್ಲಿ ಬಿದ್ದಿದ್ದಿತು. ಇದನ್ನು ನೋಡಿ ಮುದುಕನು ಮರಣ ಸಂಕಟವನ್ನು ಅನುಭವಿಸುತ್ತಿರುವನೆಂದು ಹುಡುಗಿಯು ತಿಳಿದುಕೊಂಡು ದಡ ಬಡನೆ ಮುದುಕನ ಬಳಿಗೈತಂದು ಅತನ ತಲೆಯ ಮೇಲೂ ಎದೆಯ ಮೇಲೂ ನೀರನ್ನು ತಟ್ಟಿದಳು.

ಇಷ್ಟೆನ್ನುವುದರೊಳಗಾಗಿ ಒಬ್ಬ ಹುಡುಗನೂ ಅಲ್ಲಿಗೆ ಬಂದು ಸೇರಿದನು. ಆತನಿಗೆ ಸಾಮಾನ್ಯವಾಗಿ ಇಪ್ಪತ್ತು ವರ್ಷ ವಯಸ್ಸು. ನೋಡುವುದಕ್ಕೆ

ಸರ್ವಾಂಗ ಸುಂದರನು. ಆತನು ಸಾಮಾನ್ಯವಾದ ಕವಚವನ್ನು ತೊಟ್ಟು ಒಂದು ಶುಭ್ರವಾದ ಪಂಚೆಯನ್ನುಟ್ಟಿದ್ದನು. ಅವನ ಕೈಯಲ್ಲಿ ಒಂದು ದಪ್ಪವಾದ ಬೆತ್ತದ ಕೋಲಿದ್ದಿತು. ಆತನನ್ನು ನೋಡಿದವರೆಲ್ಲರೂ ಗಂಡಸರಲ್ಲಿ ಇಂತಹ ರೂಪವಿರುವುದೇ ಅಪೂರ್ವವೆಂದು ತಿಳಿದುಕೊಂಡಿದ್ದರು. ಆರೋಗ ದೃಢಕಾಯನಾದ ಪುರುಷನಲ್ಲಿ ರೂಪವಿರುವುದಾದರೆ, ಆ ರೂಪವೇ ನಿಜವಾದ ರೂಪವೆನಿಸುವುದು. ಇಂತಹ ರೂಪವು ಆತನಲ್ಲಿದ್ದುದರಿಂದಲೇ ಎಲ್ಲರೂ ಆತನನ್ನು ನೋಡಿ ನೋಡಿ ಬೆರಗಾಗುತಿದ್ದರು. ಈ ಯುವಕನು ದಡಬಡನೆ ಓಡಿಬಂದು, "ಕುಮಾರಿ! ವಿಷಯವೇನು?" ಎಂದು ಕೇಳಿದನು.

ಕುಮಾರಿಯು ಚೇತರಿಸಿಕೊಂಡು, "ಮೋಹನ, ಇತ್ತ ಕಡೆ ಬಾ, ಇಲ್ಲಿ ನೋಡು; ಆವನೋ ವಿದೇಶಿಯಾದ ಮುದುಕನು ಏನೋ ಆಗಿ ಬಿದ್ದಿರುವನು. ಅವನಿಗೆ ಏನಾಗಿದೆ, ನೋಡಿ ಹೇಳು," ಎಂದು ಕೇಳಿದಳು.

ಬಳಿಕ ಮೋಹನನು ಮುದುಕನ ಪಕ್ಕದಲ್ಲಿ ಕುಳಿತುಕೊಂಡು ಮುದುಕನಿಗೆ ಶೈತ್ಯೋಪಚಾರ ಮಾಡತೊಡಗಿದನು. ಕೊಂಚ ಹೊತ್ತಿನ ಮೇಲೆ ಇವರಿಬ್ಬರ ಶುಶ್ರೂಷೆಯಿಂದ ಮುದುಕನಿಗೆ ಜ್ಞಾನೋದಯವಾಯಿತು. ಶ್ವಾಸೋಚ್ಛ್ವಾಸಗಳು ಸಹಜವಾದ ಸ್ಥಿತಿಗೆ ಬಂದು ನಿಂತವು. ಬಳಿಕ ಮುದುಕನು ಕೊಂಚಕೊಂಚವಾಗಿ ಚೇತರಿಸಿಕೊಂಡು ಬಾಲಕಬಾಲಿಕೆಯರನ್ನು ಒಂದು ಕ್ಷಣಕಾಲ ನೋಡುತಿದ್ದು, "ನನಗೆ ಹೋದ ಪ್ರಾಣವು ಮತ್ತೆ ಬಂದಿತು. ನಿಮ್ಮ ಉಪಚಾರದಿಂದ ನಾನು ಪುನರ್ಜನ್ಮವನ್ನು ಪಡೆದೆನು. ಇದಕ್ಕಾಗಿ ನಾನು ನಿಮಗೆ ಬಹು ಕೃತಜ್ಞನಾಗಿರುವೆನು. ಇನ್ನು ನೀವು ನಿಮ್ಮ ನಿಮ್ಮ ದಾರಿಯನ್ನು ಹಿಡಿದು ತೆರಳಬಹುದು," ಎಂದುಸುರಿದನು.

ಮೋಹನನು ಮುದುಕನ ಮಾತಿಗೆ ಪ್ರತ್ಯುತ್ತರವಾಗಿ "ಪೂಜ್ಯ ಮಹಾಶಯ, ನೀವು ವೃದ್ಧರು, ಅದರಲ್ಲಿಯೂ ರೋಗಪೀಡಿತರು; ಹೀಗಿರುವಲ್ಲಿ ನಿಮ್ಮನ್ನು ಈ ನಿರ್ಜನವಾದ ಪ್ರದೇಶದಲ್ಲಿ ಒಬ್ಬರನ್ನೇ ಬಿಟ್ಟು ಹೋಗುವುದು ನಮಗೆ ತಕ್ಕುದೇ? ಎಂದ ಬಳಿಕ ಬಾಲಿಕೆಯು, "ಮಹಾಶಯ, ನಮ್ಮ ಮನೆಯು ಇಲ್ಲಿಗೆ ಸಮೀಪವಾಗಿಯೇ ಇರುವುದು. ನಮ್ಮ ಮನೆಗೆ ಬರಲು ನಿಮಗೆ ಯಾವ ತೊಂದರೆಯೂ ಇಲ್ಲದ ಪಕ್ಷದಲ್ಲಿ, ನಾವಿಬ್ಬರೂ ಸೇರಿ ನಿಮ್ಮನ್ನು ನಮ್ಮ ಮನೆಗೆ ಕರೆದುಕೊಂಡು ಹೋಗುವೆವು," ಎಂದು ಹೇಳಿದಳು.

ವೃದ್ಧನು ಬಾಲಕರ ಈ ದಯಾರಸಪೂರಿತವಾದ ಮಾತನ್ನು ಕೇಳಿ, "ಮಕ್ಕಳಿರಾ, ನಿಮ್ಮ ಮನೆಗೆ ಬರಲು ನನಗೆ ತೊಂದರೆಯೆಂದರೇನು? ನಾನು

ರೋಗದಿಂದ ಪೀಡಿತನಾಗಿರುವಾಗ ನಾನು ಎಲ್ಲಿಯಾದರೂ ಆಶ್ರಯವನ್ನು ಹೊಂದ ಲೇಬೇಕಾಗಿರುವುದು. ಆದರೆ ನನಗೆ ನಿಮ್ಮೂರಿನಲ್ಲಿ ಯಾರೂ ಪರಿಚಿತರಿಲ್ಲ. ಅಪರಿಚಯ ಸ್ಥಳಗಳಲ್ಲಿ ಜನರು ಏನೆಂದುಕೊಳ್ಳುವರೋ ಎಂದು ಭಯಪಡು ವೆನು," ಎಂದು ದೀನ ಸ್ವರದಿಂದ ಉತ್ತರವಿತ್ತನು.

ಮೋಹನನು ಇದನ್ನು ಕೇಳಿ, "ಪೂಜ್ಯ ಮಹಾಶಯ, ಈ ಗ್ರಾಮದಲ್ಲಿ ಸರಕಾರವಾಡಿಯು ದೀನಾನಾಥರಿಗೂ, ಅಶಕ್ತರಿಗೂ, ರೋಗಿಗಳಿಗೂ, ಅಂಗ ಹೀನರಿಗೂ ಆಶ್ರಯ ಸ್ಥಾನವಾದುದು. ನಮ್ಮ ಮನೆಯಲ್ಲಿ ಯಾರೂ ಸಂಕಟ ಪಡತಕ್ಕವರಿಲ್ಲ. ನಿಮಗೆ ನಾವು ಹೊಸಬರಾಗಿದ್ದರೂ, ನಮಗೆ ನಿಮ್ಮಂತಹವರು ಹಳಬರಾಗಿಯೇ ಇರುವರು. ನಮ್ಮ ಮನೆಯ ವಿಷಯದಲ್ಲಿ ನಿಮಗೆ ಆವ ಬಗೆಯ ಸಂಶಯವೂ ಬೇಡ. ನಮ್ಮಲ್ಲಿ ಆಚಾರೋಪಚಾರಗಳಿಗೆ ಆವ ಬಗೆಯ ಕುಂದು ಕೊರತೆಗಳೂ ಉಂಟಾಗಲಾರವು. ನಮ್ಮ ಮನೆಯಾದರೂ, ನೀವು ಅದನ್ನು ನಿಮ್ಮ ಮನೆಯೆಂದೇ ಭಾವಿಸತಕ್ಕುದು. ಮನೆಯ ಯಜಮಾನರು ಅತಿಥಿ ಅಭ್ಯಾಗತರ ಸತ್ಕಾರದಲ್ಲಿಯೇ ಆವಾಗಲೂ ನಿರತರಾಗಿರುವರು. ಆದುದರಿಂದ ಬೇರೆಯಾಗಿ ಭಾವನೆ ಮಾಡದೆ ನಮ್ಮ ಮನೆಗೆ ಬಿಜಯಮಾಡಿಸೋಣವಾಗಲಿ," ಎಂದು ಹೇಳುತ್ತಾ ವೃದ್ಧಮಹಾಶಯನನ್ನು ಇಬ್ಬರೂ ಎರಡು ಕಡೆಗಳಲ್ಲಿಯೂ ಹಿಡಿದುಕೊಂಡು ಮನೆಯ ಕಡೆಗೆ ತೆರಳಿದರು. ಮುದುಕನು ಯುವಕನನ್ನು ಕುರಿತು, "ಮಗು, ನನ್ನ ಬಟ್ಟೆಯ ಗಂಟು ಇಲ್ಲೇ ಎಲ್ಲಿಯೋ ಬಿದ್ದಿರುವುದು. ಅದನ್ನು ಯಾರಾದರೂ ತೆಗೆದುಕೊಂಡು ಬಂದಲ್ಲಿ ಉಪಕಾರವಾಗುವುದು," ಎನಲಾಗಿ ಬಾಲಿಕೆಯು ಆ ಕೂಡಲೆ ಹೋಗಿ ಮುದುಕನ ಪಾಗನ್ನೂ ಬಟ್ಟೆಬರೆಯ ಗಂಟನ್ನೂ ತೆಗೆದುಕೊಂಡು ಬಂದಳು. ಕೊಂಚಹೊತ್ತಿನೊಳಗಾಗಿಯೇ ಮೋಹನನೂ ಕುಮಾರಿಯೂ ಮುದುಕನನ್ನು ಹಿಡಿದುಕೊಂಡು ಮನೆಯ ಬಾಗಿಲಿನಲ್ಲಿ ಬಂದು ನಿಂತರು. ಬಾಗಿಲಲ್ಲಿ ಕುಳಿತಿದ್ದ ಮನೆಯ ಯಜಮಾನನಾದ ಚೌಧುರಿ ಮಹಾಶಯನು ಬೇಗನೆ ಎದ್ದು ಬಂದು ಇದರ ಕಾರಣವನ್ನು ತಿಳಿಯಲಾರಂಭಿಸಿದನು. ಮೋಹನನು ನಡೆದುದೆಲ್ಲವನ್ನೂ ತಿಳಿಸಿದ ಮೇಲೆ ಚೌಧುರಿಯೂ ಮುದುಕನನ್ನು ಹಿಡಿದುಕೊಂಡು ಮನೆಯೊಳಗೆ ಕರೆದುಕೊಂಡು ಹೋಗಿ ಅಲ್ಲಿ ಒಂದು ನಿರುಪಾಧಿಕವಾದ ಕೋಣೆಯಲ್ಲಿ ಹಾಸುಗೆಯನ್ನು ಹಾಸಿಸಿ ವೃದ್ಧಮಹಾಶಯನನ್ನು ಅದರ ಮೇಲೆ ಮಲಗಿಸಿದನು.

---

## ಎರಡನೆಯ ವಿಲಾಸ

### ವ್ರಜವಿಹಾರೀ ಲಾಲ

ಚೌಧುರೀ ಮಹಾಶಯನು ಸರಕಾರವಾಡಿಗೆ ಸರ್ವಾಧಿಕಾರಿಯಾಗಿರುವುದು ಮೊದಲನೆಯ ವಿಲಾಸದಿಂದ ತಿಳಿದುಬರುವುದಷ್ಟೆ. ನಮ್ಮ ಪ್ರಿಯ ಪಾಠಕ ಮಹಾಶಯರು ಈ ವಿದ್ಯಮಾನವನ್ನು ತಿಳಿಯಲು ಇಷ್ಟವುಳ್ಳವರಾಗಿರಬಹುದು. ನಾವಿಲ್ಲಿ ಮುಂದಣ ಕಥಾಸಂದರ್ಭಕ್ಕೆ ಸಂಬಂಧಿಸಿಕೊಂಡಿರುವ ಪಾತ್ರವಿಶೇಷವನ್ನು ಸೂಚಿಸಲು ಪ್ರವೃತ್ತರಾಗುವೆವು. ಸರಕಾರವಾಡಿಯು ಚೌಧುರೀ ಮಹಾಶಯನ ಪೈತೃಕವಾದ ಮನೆಯಲ್ಲ. ಈ ಮನೆಯು ಮೊದಲಲ್ಲಿ ಸರಕಾರ ಮನೆತನದವರಿಗೆ ಸೇರಿದುದಾಗಿದ್ದಿತು. ರಾಜನಗರದಲ್ಲಿ ರಾಯಮನೆತನದವರು ಹೇಗೆ ಬಹುಕಾಲದಿಂದಲೂ ವಾಸಮಾಡಿಕೊಂಡು ಬರುತಿದ್ದರೋ, ಹಾಗೆಯೇ ಸರಕಾರ ಮನೆತನದವರೂ ವಾಸಮಾಡಿಕೊಂಡಿರುತಿದ್ದರು. ರಾಯಮನತನದವರ ಸಂಪತ್ತು ಸರಕಾರ ಮನೆತನದವರಿಗಿಂತಲೂ ಅಧಿಕವಾಗಿದ್ದಿತು. ಆದರೂ ಈ ಎರಡು ಮನೆತನದವರೇ ಆಗ್ರಾಮದಲ್ಲಿ ಕೊಬ್ಬಿದ ಹಣಗಾರರೆಂದು ಎಲ್ಲರೂ ತಿಳಿದುಕೊಂಡಿದ್ದರು. ನಾವು ಈ ನವನ್ಯಾಸವನ್ನು ಬರೆವುದಕ್ಕೆ ಪ್ರಾರಂಭಿಸಿದ ಕಾಲದಲ್ಲಿ ಮಾಧವಚಂದ್ರನೆಂಬುವನು ಸರಕಾರವಾಡಿಗೆ ಸರ್ವಾಧಿಕಾರಿಯಾಗಿದ್ದನು. ಈತನಿಗೆ ಇಬ್ಬರು ಹೆಣ್ಣುಮಕ್ಕಳು ಹೊರತಾಗಿ ಗಂಡುಮಕ್ಕಳ ಸಂತಾನವೇ ಆಗಲಿಲ್ಲ. ಮಾಧವಚಂದ್ರನು ಅದೇ ಗ್ರಾಮದಲ್ಲಿ ಪ್ರಸಿದ್ಧನಾದ ರಾಯಮನೆತನದ ಇಂದಿರಾಕಾಂತನೆಂಬುವನ ಮೊದಲನೆಯ ಮಗ ಕಮಲಾಕಾಂತನಿಗೆ ತನ್ನ ಮೊದಲನೆಯ ಕುವರಿಯನ್ನು ಕೊಟ್ಟು ಮದುವೆ ಮಾಡಿದ್ದನು. ಆದರೆ ದುರ್ದೈವಯೋಗದಿಂದ ಆ ಹುಡುಗಿಯು ಯೌವನದ ಪ್ರಾರಂಭದಸೆಯಲ್ಲಿಯೇ ಇಹಲೋಕದ ಸುಖವನ್ನು ಬಿಟ್ಟು ಪರಲೋಕಕ್ಕೆ ತೆರಳಿಬಿಟ್ಟಳು. ಅಳಿಯನಾದ ಕಮಲಾಕಾಂತನು ಹೆಂಡಿತಿಯ ಅಕಾಲಮರಣಕ್ಕೆ ಬಹುಳವಾಗಿ ಸಂಕಟಪಟ್ಟವನಾಗಿ ಆರಿಗೂ ತಿಳಿಸದೆ ಎಲ್ಲಿಯೋ ಮಾಯವಾಗಿ ಬಿಟ್ಟನು. ಬಳಿಕ ಮಾಧವಚಂದ್ರನು ರಾಯಮನೆತನದವರ ಸಂಬಂಧವನ್ನು ಕಳೆದುಕೊಳ್ಳುವುದಕ್ಕೆ ಇಷ್ಟವಿಲ್ಲದೆ, ತನ್ನ ಎರಡನೆಯ ಮಗಳನ್ನು ಇಂದಿರಾಕಾಂತನ ಎರಡನೆಯ ಮಗನಾದ ವಿಮಲಾಕಾಂತನಿಗೆ ಕೊಟ್ಟು ವಿವಾಹಮಾಡಬೇಕೆಂದು ತನ್ನ ಅಭಿಪ್ರಾಯವನ್ನು ಸೂಚಿಸಿದನು. ಆದರೆ ಅದು ನಡೆಯಲು ಅನುಕೂಲಿಸಲಿಲ್ಲ. ಇಂದಿರಾಕಾಂತನು ತನ್ನ ಮಗನು ಮಾಯವಾಗಿ ಬಿಟ್ಟುದನ್ನು ನೋಡಿ ಕೇವಲನಾಗಿ ಬೇಸರಪಟ್ಟವನಾಗಿ ರಾಜನಗರದ ಸಕಲ ಸಂಪತ್ತನ್ನೂ (ಮನೆಯ ಹೊರತು) ಮಾರಿಬಿಟ್ಟು ವಿದ್ಯಾನಗರದಲ್ಲಿ ವಾಸಮಾಡುವುದಕ್ಕೆ ಹೊರಟುಹೋದನು. ಮಾಧವಚಂದ್ರನು ಹೀಗಾದುದನ್ನು ನೋಡಿ

ತನ್ನ ಎರಡನೆಯ ಮಗಳನ್ನು ಗೋವಿಂದಚಂದ್ರ ಚೌಧುರಿ ಎಂಬುವನಿಗೆ ಕೊಟ್ಟು ಮದುವೆ ಮಾಡಿದನು. ಇದಾದ ಕೆಲಗಾಲದ ಮೇಲೆ ಮಾಧವಚಂದ್ರನು ಮರಣ ಕಾಲದಲ್ಲಿ ತನ್ನ ಆಸ್ತಿಪಾಸ್ತಿಗಳೆಲ್ಲವನ್ನೂ ಅಳಿಯನ ಕೈಯಲ್ಲಿಟ್ಟು ತನ್ನ ಮನೆ ಯಲ್ಲಿಯೇ ವಾಸಮಾಡಿಕೊಂಡಿರಬೇಕೆಂದು ಕಟ್ಟುಮಾಡಿ ಅನಂತಧಾಮದಲ್ಲಿ ಅಡಗಿ ಬಿಟ್ಟನು. ಅಂದು ಮೊದಲು ಗೋವಿಂದಚಂದ್ರ ಚೌಧುರಿಯು ತನ್ನ ಮಾವನ ಸಕಲಸಂಪತ್ತಿಗೂ ಉತ್ತರಾಧಿಕಾರಿಯಾಗಿ ರಾಜನಗರದಲ್ಲಿಯೇ ವಾಸವಾಗಿರು ತಿದ್ದನು.

ರಾಜನಗರದವರೂ ಅದರ ಅಕ್ಕಪಕ್ಕದ ಗ್ರಾಮದವರೆಲ್ಲರೂ ಗೋವಿಂದ ಚಂದ್ರ ಚೌಧುರಿಯನ್ನು ಚೌಧುರಿ ಮಹಾಶಯನೆಂದು ಕರೆಯುತಿದ್ದರು. ಚೌಧುರಿ ಮಹಾಶಯನು ತನ್ನ ಅಸಾಧಾರಣವಾದ ಪ್ರಯತ್ನದಿಂದಲೂ ವಿವೇಕದಿಂದಲೂ ಮೊದಲಿನ ಸಂಪತ್ತನ್ನು ಇಮ್ಮಡಿಯಾಗಿ ವೃದ್ಧಿಗೊಳಿಸಿ ಸರಕಾರವಾಡಿಯನ್ನು ಅಮೂಲ್ಯವಾದ ಪದಾರ್ಥಗಳಿಂದ ನೋಡುವುದಕ್ಕೆ ಬಲು ಅಂದವಾಗಿ ಸಿಂಗರಿಸಿ ದನು. ಅಲ್ಲದೆಯೂ ಮನೆಗೆ ಸೇರಿದ ಹಾಗೆ ಒಂದು ಸುಂದರವಾದ ಹೂದೋಟ ವನ್ನು ನಿರ್ಮಿಸಿದನು. ಇಂತಹ ಸರ್ವಾಂಗ ಸುಂದರವಾದ ಮನೆಯಲ್ಲಿ ಬಹುಕಾಲ ಸಂಸಾರವನ್ನು ನಿರ್ವಹಿಸುತ್ತಾ ಸುಖದಿಂದ ಬಾಳುವ ಯೋಗವು ಆತನ ಹಣೆ ಯಲ್ಲಿ ಬರೆದಿರಲಿಲ್ಲ. ದೈವಲೀಲೆಯೇ ಹೀಗಿರುವುದು. ಚೌಧುರಿ ಮಹಾಶಯನ ಪ್ರೇಮಾಸ್ಪದಳಾದ ಹೆಂಡಿತಿಯು ಸ್ವರ್ಣಕುಮಾರಿಯೆಂಬ ಹೆಣ್ಣು ಮಗುವೊಂದನ್ನು ಹೆತ್ತು ಅದಕ್ಕೆ ಮೂರು ವರ್ಷ ವಯಸ್ಸಾಗುವುದಕ್ಕೆ ಮೊದಲೇ ಮಾನವದೇಹ ವನ್ನು ತ್ಯಾಗಮಾಡಿಬಿಟ್ಟಳು. ಹೆಂಡಿತಿಗೆ ಮೃತ್ಯುಯೋಗವುಂಟಾದ ಬಳಿಕ ಚೌಧುರಿ ಮಹಾಶಯನ ಆಶೆಯೆಲ್ಲವೂ ಭಂಗವಾಗಿ ಹೋಯಿತು, ಶರೀರವೂ ಕುಗ್ಗಿತು, ಉತ್ಸಾಹಶಕ್ತಿಯಾದರೋ ಒಂದೇ ತಡವೆಗೆ ಲೋಪಗೊಂಡಿತು. ಇದರಿಂದ ಯಾವ ಕೆಲಸಮಾಡುವುದಕ್ಕೂ ಬುದ್ಧಿಯೋಡುತ್ತಿರಲಿಲ್ಲ. ಚೌಧುರಿ ಮಹಾ ಶಯನ ಈ ಬಗೆಯ ವಿಪರ್ಯಾಸವನ್ನು ನೋಡಿ ಮೋಹನನೆಂಬುವನು ತಾನು ಮುಂದಾಗಿ ನಿಂತು ಎಲ್ಲಾ ಕೆಲಸಗಳನ್ನೂ ನೆರವೇರಿಸುತ್ತಾ ಬಂದನು.

ಇಂತಹ ಸಂದರ್ಭದಲ್ಲಿ ಚೌಧುರಿ ಮಹಾಶಯನ ಸಂಸಾರಕ್ಕೆ ಸೇರಿದವರು ಆತನ ದೂರಸಂಬಂಧದ ಸಹೋದರಿಯೊಬ್ಬಳು, ಎರಡು ಮೂರು ವರ್ಷದ ಮಗಳೊಬ್ಬಳು, ಮೋಹನನೆಂಬ ಹುಡುಗನೊಬ್ಬನು. ಇವರು ಹೊರತಾಗಿ ಮತ್ತಾ ರೂ ಇರಲಿಲ್ಲ. ಮೋಹನನು ಸರಕಾರ ಮನೆತನಕ್ಕೆ ಆವ ಬಗೆಯಿಂದಲೂ ಸಂಬಂ ಧಿಯಾಗಿರದಿದ್ದರೂ, ಚೌಧುರಿ ಮಹಾಶಯನು ಆತನನ್ನು ಮನೆಯಲ್ಲಿಟ್ಟುಕೊಂಡು ತನ್ನ ಸಾಕ ಮಗನಂತೆ ರಕ್ಷಿಸಿಕೊಂಡು ಬರುತಿದ್ದನು. ಯಜಮಾನನಿಗೆ ಮೋಹನನ

ತಾಯಿ ಯಾರೋ, ತಂದೆ ಯಾರೋ ಒಂದೂ ಗೊತ್ತಿರಲಿಲ್ಲ. ಆದರೆ ಅವನು ಸದ್ವಂಶದಲ್ಲಿ ಜನಿಸಿದವನೆಂದು ಹೇಗೋ ಅಭಿಪ್ರಾಯಪಟ್ಟುಕೊಂಡಿದ್ದನು. ಇಲ್ಲಿ ಮೋಹನನು ಚೌಧುರಿಯ ಮನೆಗೆ ಬಂದು ಸೇರುವುದಕ್ಕೆ ಕಾರಣವನ್ನು ಕೊಂಚಮಟ್ಟಿಗೆ ತಿಳಿಸಿದ ಹೊರತು ನಮಗೆ ತೃಪ್ತಿಯಾಗಲೊಲ್ಲದು. ರಾಜನಗರ ದಲ್ಲಿ ಕೆಲವು ವರ್ಷಗಳ ಹಿಂದೆ ಪರಸ್ಥಳದ ಕೃತ್ತಿಕೆಯೆಂಬ ಬ್ರಾಹ್ಮಣ ವಿಧವೆ ಯೊಬ್ಬಳು ಮೋಹನನೆಂಬ ಮಗುವನ್ನು ಇಟ್ಟುಕೊಂಡು ದಾರಿದ್ರ್ಯದೋಷಕ್ಕೆ ಸಿಕ್ಕಿ ಸಂಕಟಪಡುತ್ತಾ ವಾಸವಾಗಿರುತ್ತಿದ್ದಳು. ಒಂದು ದಿನ ಆ ವಿಧವೆಗೆ ಪಾರ್ಶ್ವವಾಯು ತಗಲಿ ಮಾತನಾಡುವ ಶಕ್ತಿಯೇ ಹೋಗಿ ಬಿಟ್ಟಿತು. ಈ ದುರವಸ್ಥೆಯನ್ನು ಕೇಳಿ ಚೌಧುರಿ ಮಹಾಶಯನು ಸಣ್ಣಮಗುವಾಗಿದ್ದ ಮೋಹನ ನನ್ನು ತನ್ನ ಮನೆಗೆ ಕರೆದುಕೊಂಡುಬಂದು ಪೋಷಿಸಲಾರಂಭಿಸಿದನು. ಇದಾದ ಒಂದೆರಡು ದಿನಗಳೊಳಗಾಗಿಯೇ ಆ ವಿಧವೆಯು ಮರಣವನ್ನೈದ್ದಿದಳು. ಹೀಗಾ ದುದರಿಂದ ಮೋಹನನ ತಂದೆತಾಯಿಗಳಾರೆಂಬುದನ್ನು ತಿಳಿಯುವುದಕ್ಕೆ ಯಾರಿಗೂ ಆಸ್ಪದವಾಗಲಿಲ್ಲ. ಹೇಗಾದರೂ ಆಗಲಿ, ಚೌಧುರಿ ಮಹಾಶಯನು ಅನಾಥ ಬಾಲಕನಾದ ಮೋಹನನನ್ನು ತನ್ನ ಮಗನಂತೆಯೇ ಆದರದಿಂದ ಸಾಕಿ ಸಲಹಿ ಸಾಧ್ಯವಾದಷ್ಟು ವಿದ್ಯಾಬುದ್ಧಿಗಳನ್ನು ಕಲಿಸಿದನು. ಇದನ್ನು ನೋಡು ತಿದ್ದ ಗ್ರಾಮನಿವಾಸಿಗಳಲ್ಲಿ ಕೆಲವರು ಮೋಹನನು ಚೌಧುರಿಮಹಾಶಯನಿಗೆ ದತ್ತಪುತ್ರನಾಗುವನೆಂದು ತಿಳಿದುಕೊಂಡರು, ಮತ್ತೆ ಕೆಲವರು ಸ್ವರ್ಣಕುಮಾರಿಗೆ ಅನುರೂಪನಾದ ವರನಾಗುವನೆಂದು ಆಡಿಕೊಳ್ಳುತ್ತಿದ್ದರು.

ನಮ್ಮ ಪಾಠಕಮಹಾಶಯರಿಗೆ ಇಷ್ಟರ ಮಟ್ಟಿಗೆ ಪಾತ್ರಗಳ ಪರಿಚಯ ವನ್ನುಂಟುಮಾಡಿಕೊಟ್ಟ ಬಳಿಕ ವಿದೇಶಿಯ ಅವಸ್ಥೆಯನ್ನು ಕುರಿತು ಜಿಜ್ಞಾಸೆ ಮಾಡುವುದಕ್ಕೆ ತೆರಳುವೆವು. ಇಷ್ಟು ಹೊತ್ತು ಬೇರೆಯ ವಿಷಯವನ್ನು ಅವಲಂ ಬಿಸಿಕೊಂಡು ಕಾಲಹರಣ ಮಾಡಿದುದಕ್ಕಾಗಿ ನಾವು ನಮ್ಮ ಪಾಠಕಮಹಾಶಯ ರಲ್ಲಿ ಕ್ಷಮೆಯನ್ನು ಬೇಡುವವರಾಗಿರುವೆವು. ರೋಗ ಪೀಡಿತನಾಗಿದ್ದ ವಿದೇ ಶಿಯನ್ನು ಸರಕಾರವಾಡಿಗೆ ಕರೆದುಕೊಂಡು ಬಂದ ಬಳಿಕ ಆತನಿಗೆ ಅದೇ ರಾತ್ರಿ ಯೇ ಭಯಂಕರವಾದ ಜ್ವರವುಂಟಾಯಿತು. ಮರುದಿನ ಬೆಳಗಾದ ಕೂಡಲೆ ಚೌಧುರಿಯು ಮತ್ತೊಂದು ಗ್ರಾಮದಿಂದ ಒಬ್ಬ ಸಮರ್ಥನಾದ ವೈದ್ಯನನ್ನು ಕರೆತರಿಸಿ ರೋಗಿಗೆ ತಕ್ಕ ಚಿಕಿತ್ಸೆಯನ್ನು ಮಾಡಿಸತೊಡಗಿದನು. ಸ್ವರ್ಣ ಕುಮಾರಿಯು ಹಗಲೆಲ್ಲಾ ರೋಗಿಯ ಪಕ್ಕದಲ್ಲಿಯೇ ಇದ್ದುಕೊಂಡು ಉಪಚರಿಸ ಲಾರಂಭಿಸಿದಳು. ಮೋಹನನು ರಾತ್ರಿಯೆಲ್ಲಾ ರೋಗಿಯ ಸೇವೆಯಲ್ಲಿಯೇ ನಿರತನಾಗಿರುತಿದ್ದನು. ಇವುಗಳಿಂದ ರೋಗಿಗೆ ಯಾವ ಉಪಕಾರವೂ ಕಂಡು

ಬರಲಿಲ್ಲ. ವೈದ್ಯನು ರೋಗನಿವಾರಣೆಯಲ್ಲಿ ತನ್ನ ಬುದ್ಧಿಯೆಲ್ಲವನ್ನೂ ವ್ಯಯ ಮಾಡಿನೋಡಿದನು. ಆತನ ಪ್ರಯತ್ನವು ವಿಫಲವಾಗಲಾರಂಭಿಸಿತು. ರೋಗಿಯು ಇದ್ದಕ್ಕಿದ್ದ ಹಾಗೆಯೇ ಅರಚಿಕೊಳ್ಳುವನು, ಹತ್ತಿರದಲ್ಲಿದ್ದವರೆಲ್ಲರನ್ನೂ ಬಾಯಿಗೆ ಬಂದ ಹಾಗೆ ಬೈಯುವನು, ವೈದ್ಯನನ್ನು ಹೊಡೆಯುವುದಕ್ಕೆ ಹೋಗುವನು. ಇದೆಲ್ಲವನ್ನೂ ನೋಡಿ ಚೌಧುರಿಗೆ ಭಯವುಂಟಾಯಿತು. ಅವನಿಗೆ ದಿಕ್ಕು ತೋರದೇ ಹೋಗಿ ಬಲು ವ್ಯಸನಕ್ಕಿಟ್ಟಿತು. ಚೌಧುರಿಯು ಒಂದು ದಿನ ರೋಗಿಯ ಪಕ್ಕದಲ್ಲಿ ಕುಳಿತು ಕೊಂಡು ರೋಗಿಯನ್ನು ಕುರಿತು—"ಲಾಲಮಹಾಶಯ! ತಮ್ಮ ರೋಗವು ದಿನದಿನಕ್ಕೆ ಹೆಚ್ಚುತ್ತಲೇ ಇರುವುದು. ನಾವು ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾಗುತ ಬಂದುವು. ಈ ಸಂದರ್ಭದಲ್ಲಿ ನಿಮಗೆ ಆರಾದರೂ ದೇಹಾನುಬಂಧಿಗಳು ಇರುವುದಾದರೆ ತಿಳಿಸೋಣವಾಗಲಿ. ನಾವು ಅವರಿಗೆ ಕಾಗದ ಬರೆದು ಕರೆಯಿಸುವೆವು," ಎಂದು ನುಡಿದನು.

ವಿದೇಶಿಯು ಒಂದು ಕ್ಷಣಕಾಲ ಚೌಧುರಿಮಹಾಶಯನನ್ನು ದುರದುರನೆ ನೋಡುತಿದ್ದು ಬಳಿಕ—"ಮಹಾಶಯ! ನನ್ನ ಗಂಟಿನಲ್ಲಿ ಒಂದು ಸಣ್ಣ ದಪ್ತರವಿರುವುದು. ಅದನ್ನು ಹೊರಗೆ ತೆಗೆದು ಕೊಡೋಣವಾಗಲಿ" ಎಂದನು.

ಚೌಧುರಿಯು ಈ ಮಾತನ್ನು ಕೇಳಿ ದಪ್ತರದಲ್ಲಿ ಏನೋ ವಿಶೇಷ ಸಂಗತಿಗಳಿರಬಹುದೆಂದು ತಿಳಿದು, ಅದನ್ನು ತಂದು ಮುಂದಿಟ್ಟನು. ರೋಗಿಯು ಅದನ್ನು ಕೈಯ್ಯಲ್ಲಿ ತೆಗೆದುಕೊಂಡು, "ಚೌಧುರಿ ಮಹಾಶಯ, ನನಗೆ ಈ ಲೋಕದಲ್ಲಿ ಯಾವ ದೇಹಾನುಬಂಧಿಯೂ ಇರುವುದಿಲ್ಲ. ನನ್ನಿಂದ ತಮಗೆ ತುಂಬಾ ಬೇಸರವಾದಂತಿದೆ. ನನಗಾಗಿ ತಾವು ಎಷ್ಟು ವೆಚ್ಚ ಮಾಡಿರುವಿರೋ ಅದನ್ನು ತಿಳಿಸಿದಲ್ಲಿ, ಈಗ ನಾನು ಅದನ್ನು ಸಲ್ಲಿಸಿ ಮುಂದೆ ಎಲ್ಲಿಗಾದರೂ ಸಾಗಿ ಹೋಗುವೆನು," ಎಂದು ಬಿರುನುಡಿಗಳನ್ನಾಡಿದನು.

ರೋಗಿಯಾಡಿದ ಮಾತನ್ನು ಕೇಳಿದ ಕೂಡಲೆ ಚೌಧುರಿಯು ಭಯದಿಂದಲೂ ನಾಚುಗೆಯಿಂದಲೂ ತಲೆವಾಗಿದವನಾಗಿ ದೀನಸ್ವರದಿಂದ—"ವೃದ್ಧ ಮಹಾಶಯ, ನಾನು ಮತ್ತಾವ ದುರಭಿಪ್ರಾಯದಿಂದಲೂ ಮಾತನಾಡಿದವನಲ್ಲ. ತಮ್ಮ ದಯೆಯಿಂದ ದೇವರು ನನಗೆ ಎಲ್ಲಾ ಅನುಕೂಲತೆಯನ್ನೂ ಮಾಡಿಕೊಟ್ಟಿರುವನು. ಇದರಿಂದ ನನ್ನ ಸಂಸಾರದಲ್ಲಿ ನಿಮ್ಮನ್ನು ಕಷ್ಟಕಾಲದಲ್ಲಿ ಸಂರಕ್ಷಿಸುವುದು ಹೆಚ್ಚಿನ ವಿಷಯವಾಗಿ ಕಂಡುಬರಲಿಲ್ಲ. ನಿಮ್ಮ ಸೇವೆಯಲ್ಲಿ ನಾವುಗಳಾರೂ ಬೇಸರಪಡತಕ್ಕವರಾಗಿಯೂ ಇಲ್ಲ. ಲೋಕದಲ್ಲಿ ಯಾರಿಗಾದರೂ ರೋಗಬಂದಾಗ ಸ್ವಜನರನ್ನು ನೋಡಬೇಕೆಂಬ ಕುತೂಹಲವಿದ್ದೇ ಇರುವುದು. ಆದಕ್ಕಾಗಿಯೇ

ತಮ್ಮನ್ನು ನಾನು ಕೇಳಿಕೊಂಡುದು. ಇದಕ್ಕಾಗಿ ತಾವು ನನ್ನ ವಿಷಯದಲ್ಲಿ ಬೇರೆಯಾಗಿ ಚಿಂತಿಸಲಾಗದು. ತಮ್ಮಂತಹವರು ನಮ್ಮಂತಹವರ ಮನೆಗೆ ಬರುವುದೇ ಅಪೂರ್ವ. ಹೀಗಿರುವಲ್ಲಿ ತಮ್ಮಿಂದ ನಮಗೆ ಯಾವ ವಿಧವಾದ ತೊಂದರೆಯೂ ಇಲ್ಲ," ಎಂದು ವಿನಯೋಕ್ತಿಗಳನ್ನಾಡಿದನು.

ವೃದ್ಧಮಹಾಶಯನು ಚೌಧುರಿಯ ಮಾತಿಗೆ ಯಾವ ಪ್ರತ್ಯುತ್ತರವನ್ನೂ ಕೊಡದೆ, ತನ್ನ ಕಾಗದದ ಗಂಟನ್ನು ಹಾಸುಗೆಯ ಕೆಳಗೆ ಬೈತಿಟ್ಟು ಕಣ್ಣುಗಳನ್ನು ಮುಚ್ಚಿ ಮಲಗಿಕೊಂಡನು. ಅದು ಮೊದಲು ಮುದುಕನ ಕಿರುಕುಳವು ಮಿತಿ ಮೀರುತ್ತಾ ಬಂದಿತು. ಮನೆಯಲ್ಲಿ ಯಾರು ಏನ ಕೆಲಸಮಾಡಿದರೂ, ಮುದುಕನು ಏನೋ ನೆಪಮಾಡಿಕೊಂಡು ಯಾರೊಬ್ಬರನ್ನಾದರೂ ಆಕ್ಷೇಪಿಸುತ್ತಲೇ ಇರುವನು. ಲೋಕದಲ್ಲಿ ಅನೇಕರು ಇಂತಹ ಕಿರುಕುಳದ ಸ್ವಭಾವದವರನ್ನು ಕಂಡರೆ ಸಾಮಾನ್ಯ ವಾಗಿ ಸಿಡಿಮಿಡಿಗುಟ್ಟುವುದು ಸಹಜವಾದ ವಿಷಯವೇ ಸರಿ. ಆದರೆ ಸಾಧು ಸ್ವಭಾವದವರಾದ ಸ್ವರ್ಣಕುಮಾರಿ ಮತ್ತು ಮೋಹನ ಇವರಿಬ್ಬರೂ ಮುದುಕನ ಯಾವ ಆಕ್ಷೇಪಣೆಯನ್ನೂ ಗಮನಕ್ಕೆ ತಾರದೆ ತಮ್ಮ ಸೇವೆಯನ್ನು ಅಚ್ಚು ಮೆಚ್ಚಾಗಿ ನೆರವೇರಿಸಿಕೊಂಡು ಬರುತಿದ್ದರು. ಹೀಗೆಯೇ ತಿಂಗಳು ತಿಂಗಳೂವರೆ ಕಳೆದುಹೋಯಿತು. ಇಷ್ಟೆನ್ನುವುದರೊಳಗಾಗಿ ವೃದ್ಧನಿಗೆ ರೋಗವು ವಾಸಿ ಯಾಗುತ ಬಂದಿತು. ರೋಗದಿಂದ ಪೀಡಿತನಾಗಿದ್ದ ವಿದೇಶಿಯಾದ ವೃದ್ಧನ ಹೆಸರು ವ್ರಜವಿಹಾರಿಲಾಲ.

ವ್ರಜವಿಹಾರಿಯು ಎರಡು ತಿಂಗಳು ಕಳೆದ ಮೇಲೆ ಪೂರ್ಣಾರೋಗ್ಯವನ್ನು ಪಡೆದನು. ಹೀಗಿರಲೊಂದು ದಿನ ವ್ರಜವಿಹಾರಿಯು ಚೌಧುರಿಮಹಾಶಯನನ್ನು ಕುರಿತು—"ಮಹಾಶಯ, ನಾನು ಇಂದಿಗೆ ರೋಗದ ಯಾತನೆಯಿಂದ ಬಿಡುಗಡೆ ಯಾಗಿರುವೆನು. ನೀವೂ ನಿಮ್ಮ ಪರಿವಾರದವರೂ ದೀನಾನಾಥನೆನಿಸಿದ ರೋಗಿ ಯಾದ ನನ್ನ ವಿಷಯದಲ್ಲಿ ತೋರಿಸಿದ ಆದರವು ಸಾಮಾನ್ಯವಾದುದಲ್ಲ; ನಾನು ನಿಮ್ಮ ಸದುಪಚಾರವನ್ನು ಎಂದಿಗೂ ಮರೆಯಲಾರದವನಾದರೂ ನಿಮ್ಮ ಋಣ ವನ್ನು ಮಟ್ಟಿಗೆ ಏಳೇಳು ಜನ್ಮಕ್ಕೂ ತೀರಿಸಲಾರದವನಾಗಿರುವೆನು. ಕಾರಣಾಂತರ ದಿಂದ ನಾನು ನಿಮ್ಮಲ್ಲಿ ಇಷ್ಟು ದಿನಗಳು ಇದ್ದುದೇ ಹೆಚ್ಚು; ಆರೋಗ್ಯಲಾಭ ವಾದ ಮೇಲೂ ಮತ್ತೊಬ್ಬರ ಸಂಸಾರದಲ್ಲಿ ಸೇರಿಕೊಂಡು ನಿಷ್ಕಾರಣವಾಗಿ ದಿನ ಗಳನ್ನು ಕಳೆವುದು ಉಚಿತವಲ್ಲ. ಆದರೆ ನಾನು ಬಹುದೂರ ಪ್ರಯಾಣ ಬೆಳೆಸ ಬೇಕಾಗಿರುವಕಾರಣ, ನನ್ನ ಕೈಕಾಲುಗಳಲ್ಲಿ ಇನ್ನೂ ಸಾಕಾದಷ್ಟು ಶಕ್ತಿ ಬಂದಿಲ್ಲ ವಾದುದರಿಂದ ನಾನು ಇನ್ನೊಂದು ತಿಂಗಳ ವರೆಗಾದರೂ ನಿಮ್ಮಲ್ಲಿಯೇ ಇದ್ದು ಹೋಗಬೇಕೆಂದು ಬಯಸಿರುವೆನು. ನೀವುಗಳೆಲ್ಲರೂ ದೊಡ್ಡಮನಸ್ಸುಮಾಡಿ

ಸಮ್ಮತಿಸುವುದಾದರೆ ನಾನು ಇಲ್ಲಿಯೇ ಇರುವೆನು, ಇಲ್ಲವಾದರೆ ನಾಳೆಯೇ ಮುಂದಕ್ಕೆ ತೆರಳುವೆನು,'' ಎಂದುಸುರಿದನು.

ಚೌಧುರಿಯು ಈ ಮಾತನ್ನು ಕೇಳಿ, "ತಾವು ಎಲ್ಲಿಗೆ ಪ್ರಯಾಣ ಬಳೆಯಿಸಬೇಕೆಂದಿರೋಣವಾಗಿದೆ?'' ಎಂದನು.

ಅದಕ್ಕೆ ವ್ರಜವಿಹಾರಿಯು, "ಹೋಗುವುದೆಲ್ಲಿಗೆ? ಮಹಾಶಯ! ನಾನು ಎಲ್ಲಿಗೆ ಹೋಗಬೇಕೋ ಅದೇ ನನಗಿನ್ನೂ ಗೊತ್ತಿಗೆ ಬಂದಿಲ್ಲ. ಇಲ್ಲಿಗೆ ನೂರಾರು ಮೈಲಿಗಳ ದೂರದಲ್ಲಿರುವ ಚಂದ್ರಗಿರಿಯಲ್ಲಿ ನನಗೆ ಆವನೋ ಒಬ್ಬ ಅನುಬಂಧಿಯಿರುವುದಾಗಿ ಆರೋ ಹೇಳಿದ್ದುದನ್ನು ನಾನು ಕೇಳಿದ್ದೆನು. ಆತನಿರುವಲ್ಲಿಗಾದರೂ ಹೋಗಬೇಕಾಗುವುದು,'' ಎಂದು ನಿರಾದರದಿಂದ ಉತ್ತರವಿತ್ತನು.

ಚೌಧುರಿಮಹಾಶಯನು ಈ ಮಾತುಗಳನ್ನು ಕೇಳಿ ಅಸಮಾಧಾನಪಟ್ಟವನಾದರೂ ಆತನಿಗೆ ಹೋಗೆಂದು ಹೇಳುವುದಕ್ಕೆ ಬಾಯೇ ಬರದೆ, ನಗೆಮೊಗದ ಭಾವವನ್ನು ತಾಳಿ, "ಲಾಲ ಮಹಾಶಯ! ಚಂದ್ರಗಿರಿಯೆಲ್ಲಿ, ನೀವೆಲ್ಲಿ! ಈ ಸಂದರ್ಭದಲ್ಲಿ ಅಲ್ಲಿಗೆ ಹೋಗಬೇಕಾದ ಆವಶ್ಯಕವು ತಾನೇ ಏನಿರುವುದು? ನಮ್ಮ ಮನೆಯಲ್ಲಿ ನಿಮಗುಂಟಾಗಿರುವ ತೊಂದರೆಯೇನು? ನೀವು ಇಷ್ಟಪಡುವಷ್ಟು ದಿನಗಳೂ ನಮ್ಮ ಮನೆಯಲ್ಲಿಯೇ ವಾಸವಾಗಿರಬಹುದು. ನಿಮ್ಮ ದೇಹದಲ್ಲಿ ಹಿಂದಣ ಶಕ್ತಿಯು ಇನ್ನೂ ಸಂಪೂರ್ಣವಾಗಿ ಬಂದಿಲ್ಲವಾದುದರಿಂದ, ಈಗಳೇ ನೀವು ಹೊರಡುವುದಾದರೆ ರೋಗವು ಮರಕಳಿಸುವ ಸಂಭವವುಂಟು. ನಮ್ಮ ಮನೆಯಲ್ಲಿ ನಿಮಗೆ ಆವ ವಿಧವಾದ ಕುಂದುಕೊರತೆಗಳೂ ಉಂಟಾಗದಂತೆ ನಾನು ನೋಡಿಕೊಳ್ಳುವೆವಾದುದರಿಂದ, ನೀವು ಸಂಪೂರ್ಣ ವಿಶ್ವಾಸವಿಟ್ಟು ನಮ್ಮಲ್ಲಿಯೇ ವಾಸವಾಗಿರಬೇಕು,'' ಎಂದು ಬೆಸಗೊಂಡನು.

ವ್ರಜವಿಹಾರಿಲಾಲನು ಚೌಧುರಿಮಹಾಶಯನ ಮಾತನ್ನು ಕೇಳಿ ಅನೇಕ ವಿನಯೋಕ್ತಿಗಳಿಂದ ತನ್ನ ಕೃತಜ್ಞತೆಯನ್ನು ತೋರ್ಪಡಿಸಿ ಸರಕಾರವಾಡಿಯಲ್ಲಿಯೇ ವಾಸವಾಗಿರಲು ಸಮ್ಮತಿಸಿದನು. ಚೌಧುರಿಮಹಾಶಯನು ಜಾತಿಯಲ್ಲಿ ಕಾಯಸ್ಥನಾಗಿದ್ದುದರಿಂದ, ಲಾಲಮಹಾಶಯನು ಆತನ ಮನೆಯಲ್ಲಿ ಭೋಜನ ಮಾಡಲು ಇಷ್ಟಪಡುವನೋ ಇಲ್ಲವೋ ಎಂಬ ಶಂಕೆಯಿಂದ ಬೇರೆಯ ಕಡೆಯಲ್ಲಿ ಭೋಜನದ ಏರ್ಪಾಡು ಮಾಡುವುದಾಗಿ ಲಾಲಮಹಾಶಯನಿಗೆ ತಿಳಿಯಪಡಿಸಿದನು. ಲಾಲ ಮಹಾಶಯನು ಮುಗುಳು ನಗೆಯನ್ನು ನಕ್ಕು, "ಮಹಾಶಯ, ನಾನು ಇಷ್ಟು ದಿನಗಳು ನಿಮ್ಮಲ್ಲಿಯೇ ಭೋಜನಮಾಡಿಕೊಂಡಿದ್ದು ಇನ್ನು ಮೇಲೆ ಬೇರೆಯ ಕಡೆಯಲ್ಲಿ ಭೋಜನಮಾಡುವುದರಿಂದ ಬಂದ ಭಾಗ್ಯವೇನು? ಹಿಂದೆ

ನಡೆದಂತೆಯೇ ಈಗಲೂ ನಡೆದುಹೋಗಲಿ. ನಮ್ಮಿಬ್ಬರಿಗೂ ದೇಶಭೇದವೇ ಹೊರತು ಜಾತಿಭೇದವಿಲ್ಲ. ನಾನೂ ನಿಮ್ಮಂತೆಯೇ ಜಾತಿಯಲ್ಲಿ ಕಾಯಸ್ಥನಾಗಿ ಇರುವೆನು. ಆದುದರಿಂದ ನೀವು ನನಗಾಗಿ ಬೇರೆಯ ಪ್ರಯತ್ನಮಾಡಬೇಕಾದ ಆವಶ್ಯಕತೆಯೇನೂ ಇರಲಾರದು. ಸ್ವಜಾತಿಯವರಲ್ಲಿ ಊಟಮಾಡುವುದರಿಂದ ಜಾತಿ ಹೋಗುವುದೆಂದು ಮೂಢರು ತಿಳಿದುಕೊಂಡಿರುವುದಾದರೆ ಅದಕ್ಕೆ ನಾನೇನು ಮಾಡುವುದಕ್ಕಾದೀತು? ಒಂದು ವೇಳೆ ನನಗೆ ಜಾತಿಯು ಹೋಯಿತೆಂದು ಜನರು ಸಾಧಿಸುವುದಾದರೆ, ಸ್ಥಿರವಲ್ಲದಜಾತಿಯು ಹೋಗಿಬಿಡುವುದೇ ಮೇಲು. ಇದಕ್ಕಾಗಿ ಒಬ್ಬಂಟಿಗನಾದ ನಾನು ಅಂಜತಕ್ಕವನಲ್ಲ," ಎಂದು ಹೇಳಿಬಿಟ್ಟನು.

ವ್ರಜವಿಹಾರಿಲಾಲನು ರೋಗದಿಂದ ಬಿಡುಗಡೆಯಾದಮೇಲೆ ಸೌಮ್ಯರೂಪವನ್ನು ತಾಳಿಬಿಟ್ಟನು. ಈಗ ಆರಿಗೂ ಅವನಿಂದ ಕಿರುಕುಳವಿಲ್ಲ, ಆಕ್ಷೇಪಣೆಯಿಲ್ಲ, ಬೈಗಳಿಲ್ಲ, ಕಂಡಕಂಡವರನ್ನು ಹೊಡೆಯುವ ಸ್ವಭಾವವು ಮೊದಲೇ ಇಲ್ಲ. ಈತನನ್ನು ಕಂಡರೆ ಹಿಂದೆ ಹೆದರಿಕೊಂಡು ದೂರವಾಗಿ ಓಡಿಹೋಗುತಿದ್ದವರೆಲ್ಲರೂ ಈಗ ಲಾಲಮಹಾಶಯನ ಹತ್ತಿರಕ್ಕೆ ಬಂದು ಕುಳಿತುಕೊಂಡು ನಗುನಗುತೆ ಮಾತನಾಡುವರು. ಸ್ವರ್ಣಕುಮಾರಿಯೂ ಮಧ್ಯಾಹ್ನದ ಭೋಜನಾಂತರದಲ್ಲಿ ವೃದ್ಧಮಹಾಶಯನ ಬಳಿಯಲ್ಲಿ ಕುಳಿತುಕೊಂಡು ಪಶ್ಚಿಮದೇಶದ ಆಶ್ಚರ್ಯವಿಷಯಗಳನ್ನು ಕೇಳಿ ಸಂತೋಷಪಡುವಳು. ಮೋಹನನಾದರೋ ತನ್ನ ಕೆಲಸಗಳೆಲ್ಲವನ್ನೂ ತೀರಿಸಿಕೊಂಡ ಬಳಿಕ ಉಳಿದ ಕಾಲವನ್ನೆಲ್ಲಾ ವೃದ್ಧನ ಬಳಿಯಲ್ಲಿಯೇ ಕಳೆಯುವನು.

ಒಂದಾನೊಂದು ದಿನ ಅಪರಾಹ್ಣದ ಸಮಯದಲ್ಲಿ ಗೋವಿಂದಚಂದ್ರ ಚೌಧುರಿಯು ತನ್ನ ಕೋಣೆಯಲ್ಲಿ ಒಬ್ಬನೇ ಕುಳಿತುಕೊಂಡಿರುವ ಹೊತ್ತಿನಲ್ಲಿ ಆತನ ಸಹೋದರಿಯು ಅಲ್ಲಿಗೆ ಬಂದು ತಮ್ಮನನ್ನು ಕುರಿತು, "ಮಗು, ಕುಮಾರಿಗೆ ಹದಿಮೂರು ವರ್ಷಗಳು ತುಂಬುತ್ತಾ ಬಂದುವು. ಇನ್ನೂ ಆ ಹುಡುಗಿಗೆ ಮದುವೆ ಮಾಡದಿದ್ದರೆ ಜನರು ಏನೆಂದು ಕೊಂಡಾರು? ಈ ವಿಚಾರದಲ್ಲಿ ನೀನು ಉದಾಸೀನ ಭಾವವನ್ನು ತಾಳಿರುವುದಾದರೆ ನಾವು ಸಮಾಜದಿಂದ ಹೊರಗಾಗಬೇಕಾಗುವುದು. ಆದುದರಿಂದ ಕಾಲಹರಣಕ್ಕೆ ಆವಕಾಶಗುಡದೆ ಒಬ್ಬ ಯೋಗ್ಯನಾದ ವರನನ್ನು ಹುಡುಕುವ ಯತ್ನಮಾಡು. ಮಾನವಂತರು ಹತ್ತು ಜನಕ್ಕೆ ಹೆದರಿ ನಡೆಯಬೇಕೇ ಹೊರತು ಸ್ವೇಚ್ಛೆಯಾಗಿ ವರ್ತಿಸುವುದು ತರವಲ್ಲ. ಇದನ್ನು ನಾನು ನಿನಗೆ ತಿಳಿಸಬೇಕಾದುದೇನಿರುವುದು?" ಎಂದು ತನ್ನ ಅಭಿಪ್ರಾಯವನ್ನು ಸೂಚಿಸಿದಳು.

ಚೌಧುರಿಯು ಈ ಮಾತನ್ನು ಕೇಳಿ ನಗುತ್ತಾ, "ಅಕ್ಕ! ನಾನೇನು ಮಾಡಲಮ್ಮ! ನನಗೆ ಸ್ವರ್ಣಕುಮಾರಿ ಹೊರತಾಗಿ ಎಷ್ಟು ಜನ ಮಕ್ಕಳಿರುವರು!

ಈಗಾಗಲೇ ಅವಳಿಗೆ ಮದುವೆ ಮಾಡಿ ಗಂಡನ ಮನೆಗೆ ಕಳುಹಿಸಿ ಬಿಡುವುದಾದರೆ, ನಾವು ಮುಂದೆ ದಿನಗಳನ್ನು ಕಳೆವುದು ಹೇಗೆ? ಎಂದು ಉತ್ತರ ಕೊಟ್ಟನು.

ಅಕ್ಕ—ಹಾಗಾದರೆ ಎಷ್ಟು ದಿನಗಳಾದರೂ ಹೆಣ್ಣು ಮಕ್ಕಳನ್ನು ಮನೆಯಲ್ಲಿಯೇ ಇಟ್ಟುಕೊಂಡಿರುವುದಕ್ಕೆ ಆದೀತೆ?

ತಮ್ಮ—ಆಗಬಾರದೇತಕ್ಕೆ? ಎಷ್ಟೋ ಜನರು ಮದುವೆಯಾದ ಹೆಣ್ಣು ಮಕ್ಕಳನ್ನು ಮನೆಯಲ್ಲಿಯೇ ಇಟ್ಟುಕೊಂಡಿಲ್ಲವೇ? ಇದರಲ್ಲಿ ತಪ್ಪೇನಿರುವುದು?

ಅಕ್ಕ—ಅತ್ತೆಮಾವಂದಿರಲ್ಲಿ ಅಭಿಮಾನವಿರತಕ್ಕ ಅಂತಹ ಅಳಿಯಂದಿರು ಸಿಕ್ಕಿದರೆ ನಮ್ಮ ಸ್ವಾರ್ಥವು ನೆರವೇರೀತು? ಇಲ್ಲವಾದರೆ ಮಗಳ ಸುದ್ದಿಯನ್ನೇ ಮರೆತುಬಿಡಬೇಕಾಗುವುದು.

ತಮ್ಮ—ನಾನು ಅಂತಹ ಅನುಕೂಲನಾದ ವರನನ್ನೇ ನಿಶ್ಚಯಮಾಡಿಕೊಂಡಿರುವೆನು. ಈಗ ನಮ್ಮಲ್ಲಿ ಮೋಹನನಿರುವನು. ಅವನು ನಮಗೆ ಎಲ್ಲಾ ವಿಷಯಗಳಲ್ಲಿಯೂ ಅನುಕೂಲನಾಗಿಯೇ ಇರುವನು. ಅವನಿಗೆ ವಿದ್ಯೆಯೂ ಇದೆ; ಬುದ್ಧಿಯೂ ಇದೆ; ಅವನಲ್ಲಿ ರೂಪವೂ ಇದೆ, ರೂಪಾನುರೂಪವಾದ ಗುಣವೂ ಇದೆ. ಇವನಿಗಿಂತಲೂ ಶ್ರೇಷ್ಠನಾದ ವರನು ಮತ್ತೆಲ್ಲಿ ದೊರೆತಾನು? ಆದುದರಿಂದ ನಾನು ಮೋಹನನಿಗೇ ನನ್ನ ಮಗಳನ್ನು ಕೊಟ್ಟು ವಿವಾಹಮಾಡುವೆನು.

ಅಕ್ಕ—ಚೆನ್ನಾಯಿತು! ಚೆನ್ನಾಯಿತು! ಜಾತಿ ಕುಲ ಗೋತ್ರಗಳೊಂದೂ ಇಲ್ಲದ ಅನಾಥನಾದ ಹುಡುಗನಿಗೆ ಕುಲದ ಹೆಣ್ಣನ್ನು ಕೊಡುವುದರಿಂದ ಯಾರಿಗೆ ಅಪಮಾನವಾಗುವುದೆಂಬುದನ್ನು ನೀನು ಇನ್ನೂ ತಿಳಿಯದಿರುವುದಕ್ಕಾಗಿ ನಾನು ಎಷ್ಟೆಂದು ವ್ಯಸನಪಡಲಿ! ನಿನ್ನ ಆಲೋಚನೆಯು ನನಗೆ ಸಮರ್ಪಕವಾಗಿ ಕಾಣಿಸುವುದಿಲ್ಲ. ನನ್ನ ಮಾತು ಹಾಗಿರಲಿ. ನಾವು ಜನರಿಗೆ ಹೆದರಿ ನಡೆಯಬೇಕು. ಮಾನಾಪಮಾನಗಳು ಸಮಾಜವನ್ನವಲಂಬಿಸಿರುವುದು. ಮಗು! ದುಡುಕಿ ಕೆಲಸಮಾಡಬೇಡ, ಕಂಡೆಯಾ?

ತಮ್ಮ—ನಾನು ಯಾರಿಗೂ ಹೆದರಿ ನಡೆಯಬೇಕಾದುದಿಲ್ಲ. ನನ್ನ ಮಗಳ ಯೋಗಕ್ಷೇಮವು ನನ್ನದೇ ಹೊರತು ಸಮಾಜದವರದಲ್ಲ. ಮನಬಂದಂತೆಯೇ ಮಾತನಾಡುವ ಜನರಿಗೆ ನಮ್ಮ ಕಷ್ಟನಷ್ಟಗಳೇನು ಗೊತ್ತಾಗುವುದು? ಇತರರ ಆಡಿಕೆಗೆ ಹೆದರಿ ನಾನು ನನ್ನ ಮಗಳ ಸುಖಕ್ಕೆ ಕುಂದನ್ನು ತಂದು ಒಡ್ಡತಕ್ಕವನಲ್ಲ.

ಇಷ್ಟು ಹೊತ್ತಿಗೆ ಸರಿಯಾಗಿ ವ್ರಜನಿಹಾರಿಲಾಲನು ಚೌಧುರಿಯ ಬಳಿಗೈತಂದನು. ಚೌಧುರಿಯ ಸಹೋದರಿಯು ಸಂಸಾರದ ಗುಟ್ಟಿನಮಾತನ್ನು ನಿಲ್ಲಿಸಿ ಮನೆಯೊಳಗೆ ಹೊರಟುಹೋದಳು.

---

## ಮೂರನೆಯ ವಿಲಾಸ

### ರತ್ನಾಭರಣ ಮತ್ತು ಪುಷ್ಪಮಾಲಿಕೆ

ಲಾಲಮಹಾಶಯನು ಆರೋಗ್ಯಲಾಭವಾದ ಒಂದುವಾರದ ಮೇಲೆ ತನ್ನ ಕೋಣೆಯಲ್ಲಿ ಕುಳಿತುಕೊಂಡು ಜಪಮಾಲೆಯನ್ನು ತಿರುಗಿಸುತಿದ್ದನು. ಚೌಧುರಿ ಮಹಾಶಯನು ಮೋಹನನನ್ನು ಜತೆಯಲ್ಲಿ ಕರೆದುಕೊಂಡು ತನ್ನ ಕೆಲಸದ ಮೇಲೆ ಹೊರಟುಹೋಗಿದ್ದನು. ಸ್ವರ್ಣಕುಮಾರಿಯು ಲಾಲಮಹಾಶಯನ ಕೋಣೆಯ ಬಾಗಿಲಲ್ಲಿ ನಿಂತುಕೊಂಡು, "ಪೂಜ್ಯ ಮಹಾಶಯ, ಇಂದು ತಾವು ವಿರಕ್ತಭಾವವನ್ನು ತಾಳಿ ಏನೋ ಚಿಂತಿಸುತ್ತಾ ಕುಳಿತಿರುವಂತಿದೆ," ಎಂದಳು.

ಲಾಲಮಹಾಶಯನು ಆ ಮಾತಿಗೆ ಪ್ರತ್ಯುತ್ತರವಾಗಿ "ಮಗು, ಇಂದು ನಾನು ನಿನಗೆ ಹೊಸ ಸಂಗತಿಯನ್ನು ತಿಳಿಸಬೇಕೆಂದಿರುವೆನು. ಈಗ ಆ ವಿಷಯ ವನ್ನೇ ಚಿಂತಿಸುತ್ತಾ ಕುಳಿತಿದ್ದೆನು. ನೀನು ಸರಿಯಾದ ಹೊತ್ತಿಗೇ ಬಂದಂ ತಾಯಿತು. ಇತ್ತ ಬಾ," ಎಂದು ಹೇಳಿ ಸ್ವರ್ಣಕುಮಾರಿಯನ್ನು ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಒಂದು ಅಂದವಾದ ಸಣ್ಣ ಭರಣಿಯನ್ನು ಕೈಯಲ್ಲಿ ಹಿಡಿದು ಕೊಂಡು ಅದರ ಮುಚ್ಚಳವನ್ನು ತೆರೆದು ತೋರಿಸಿದನು. ಕುಮಾರಿಯು ಅಚ್ಚರಿ ಯಿಂದ ಅದರಲ್ಲಿರುವುದನ್ನು ನೋಡಿ ಬೆರಗಾದಳು. ಬಳಿಕ ಲಾಲಮಹಾಶಯನು ಆಕೆಯನ್ನು ಕುರಿತು, "ಮಗು, ಇದು ನಿನಗೆ ಸೊಗಯಿಸುವುದೇ ?" ಎಂದು ಕೇಳಿದನು.

ಕುಮಾರಿಯು ಯಾವ ಉತ್ತರವನ್ನೂ ಕೊಡದೆ ಭರಣಿಯಲ್ಲಿದ್ದುದನ್ನು ರಪ್ಪೆ ಹಾಕದೆ ನೋಡುತ್ತಾ ಕುಳಿತಿದ್ದಳು. ಲಾಲಮಹಾಶಯನು ಮತ್ತೆ ಅವ ಳನ್ನು ಕುರಿತು, "ಮಗು, ಈ ಭರಣಿಯನ್ನು ನಿನಗಾಗಿ ಸಿದ್ಧಮಾಡಿಟ್ಟಿರುವೆನು. ಇದರಲ್ಲಿರುವುದೆಲ್ಲವೂ ನಿನ್ನದಾಗಿಯೇ ಇರವುದು," ಎಂದು ನುಡಿದನು.

ಸ್ವರ್ಣಕುಮಾರಿಯು ಒಂದೇ ಮನಸ್ಸಿನಿಂದ ನೋಡುತ್ತಿದ್ದ ಆ ಭರಣಿಯಲ್ಲಿ ಅಮೂಲ್ಯವಾದ ರತ್ನಪಡಿ ನಗಗಳಿದ್ದುವು. ಲಾಲಮಹಾಶಯನು ಮುಚ್ಚಳವನ್ನು ತೆರೆದೊಡನೆಯೇ ವಜ್ರ ಕೆಂಪು ಪಚ್ಚೆ ಕೆತ್ತಿದ್ದ ಬಂಗಾರದ ಒಡವೆಗಳು ಥಳಥಳನೆ

ಹೊಳೆಯುತ್ತಾ ಕೋಣೆಯಲ್ಲಿದ್ದ ಕತ್ತಲೆಯನ್ನು ಭೇದಿಸುತಿದ್ದುವು. ಈ ಅಪೂರ್ವವಾದ ನಗನಟ್ಟುಗಳನ್ನು ಕುಮಾರಿಯು ನೋಡಿ ಅವಾಕ್ಕಾಗಿ ಕುಳಿತುಬಿಟ್ಟಳು. ಲಾಲಮಹಾಶಯನು ಹುಡುಗಿಯ ತಲೆಯನ್ನು ಸವರಿ, "ಮಗು, ಈ ಆಭರಣಗಳೆಲ್ಲವನ್ನೂ ನಾನು ನಿನಗಾಗಿಯೇ ಕೊಂಡು ತಂದಿರುವೆನು. ನೀನು ಇವುಗಳನ್ನು ಧರಿಸಿಕೊಳ್ಳು. ನಾನು ಕಣ್ಣುಗಳಿಂದ ನೋಡಿ ಸಂತೋಷಪಡುವೆನು," ಎಂದು ಹೇಳಿದನು.

ಸ್ವರ್ಣಕುಮಾರಿಗೆ ಮೊದಮೊದಲು ಒಡವೆಗಳನ್ನು ತೆಗೆದುಕೊಳ್ಳಬೇಕೆಂದು ಆಸೆಯಾಯಿತು. ಸ್ವರ್ಣಕುಮಾರಿಯು ಹಳ್ಳಿಯ ಹುಡುಗಿಯಾಗಿದ್ದರೂ ಹಳ್ಳಿಯ ಹುಡುಗಿಯರಂತಿರಲಿಲ್ಲ. ಚೌಧುರಿಮಹಾಶಯನ ಪ್ರಯತ್ನದಿಂದ ಆಕೆಯು ವಿದ್ಯಾಬುದ್ಧಿಗಳನ್ನು ಚೆನ್ನಾಗಿಯೂ ಕಲಿತು ವಿವೇಕವತಿಯಾಗಿದ್ದಳು. ಕುಮಾರಿಯು ತನ್ನ ವಿವೇಕದ ಬಲದಿಂದ ಆಸೆಯನ್ನಡಗಿಸಿ, "ಪೂಜ್ಯ ಮಹಾಶಯ, ಇವುಗಳನ್ನು ನಾನು ತೆಗೆದುಕೊಂಡು ಏನ ಮಾಡಲಿ?" ಎಂದು ಕೇಳಿದಳು.

ವ್ರಜವಿಹಾರಿ—ಹಾಗೆಂದರೇನು? ಒಡವೆಗಳು ದೇಹದ ಅಲಂಕಾರಕ್ಕಾಗಿಯೇ ಏರ್ಪಟ್ಟಿರುವುದು. ನೀನು ಅವುಗಳನ್ನು ಧರಿಸು.

ಸ್ವರ್ಣಕುಮಾರಿ—ಮಹಾಶಯ! ನಾನು ಬಡ ಗೃಹಸ್ಥನ ಮಗಳು; ಅದರಲ್ಲಿಯೂ ಹಳ್ಳಿಯವಳು. ಹೀಗಿರುವಲ್ಲಿ ನಾನು ಇವುಗಳನ್ನು ಧರಿಸುವುದೆಂದರೇನು! ಒಂದು ವೇಳೆ ನಾನು ಧರಿಸುವುದಾದರೂ ಜನರೇನೆಂದಾರು? ಆರೇ ಆಗಲಿ, ಅವರವರ ಯೋಗ್ಯತೆಗೆ ತಕ್ಕ ಹಾಗೆ ಇರುವುದಾದರೆ ಲೋಕವು ನಿಂದಿಸದು. ಮಾಡಬಾರದುದನ್ನು ಮಾಡಿದರೆ ಆಗಬಾರದುದು ಆಗಿಯೇ ಆಗುವುದು. ನಾವೇನೋ ನಿಮಗೆ ಉಪಕಾರಮಾಡಿರುವುದಾಗಿ ಭಾವಿಸಿ, ನೀವು ನಮಗೆ ಪ್ರತ್ಯುಪಕಾರ ಮಾಡಬೇಕೆಂಬ ನೆಪದಿಂದ ಈ ರತ್ನಾಭರಣಗಳನ್ನೂ ನನಗೆ ಕೊಡುವಂತಿದೆ. ನಾನು ಇವುಗಳನ್ನು ಮುಟ್ಟುವುದಿಲ್ಲ. ಇವುಗಳಿಂದ ನನಗಾಗುವ ಪ್ರಯೋಜನವೂ ಅಷ್ಟರಲ್ಲಿಯೇ ಇದೆ. ಉಪಯೋಗಕ್ಕೆ ಬಾರದವುಗಳನ್ನು ತೆಗೆದುಕೊಳ್ಳುವುದರಿಂದಾಗುವುದೇನು?

ವ್ರಜವಿಹಾರಿ—ಮಗು, ನಾನು ಇದನ್ನು ಉಪಕಾರಕ್ಕೆ ಪ್ರತ್ಯುಪಕಾರವಾಗಿ ಕೊಡುವೆನೆಂದು ತಿಳಿಯಬೇಡ. ನೀನು ನನಗೆ ಪ್ರಾಣದಾನಮಾಡಿದೆ. ಆ ಸಂತೋಷಕ್ಕಾಗಿ ನಾನು ಇದನ್ನು ಕೊಡತಕ್ಕವನಾಗಿರುವೆನು. ನಿನ್ನ ಅಮೂಲ್ಯವಾದ ಉಪಕಾರಕ್ಕೆ ಇದು ಎಂದಿಗೂ ಪ್ರತ್ಯುಪಕಾರವಾಗಲಾರದು.

ಇದು ಸಂತೋಷ ಸೂಚಕವಾದ ಒಂದು ಬಗೆಯ ಉಪಹಾರ. ನೀನು ನನ್ನಲ್ಲಿ ಕನಿಕರವಿಟ್ಟು ಇದನ್ನು ತೆಗೆದುಕೊಂಡು ಧರಿಸುವುದಾದರೆ, ನನಗೆ ತುಂಬಾ ಸಂತೋಷವುಂಟಾಗುವುದು.

ವ್ರಜವಿಹಾರಿಲಾಲನು ಹೀಗೆ ಹೇಳುತ್ತಾ ಭರಣಿಯನ್ನು ಮುಚ್ಚಳದಿಂದ ಮುಚ್ಚಿದನು. ಸ್ವರ್ಣಕುಮಾರಿಯು ಇದನ್ನು ನೋಡಿ, "ಪೂಜ್ಯರೇ ನನ್ನ ಮಾತಿಗೆ ನೀವು ಕೋಪಿಸಿಕೊಳ್ಳಬಾರದು. ನನಗೆ ಉಪಯೋಗಕ್ಕೆ ಬಾರದ ಪದಾರ್ಥವು ನಿಮ್ಮಲ್ಲಿದ್ದರೇನು, ನನ್ನಲ್ಲಿದ್ದರೇನು ? ಇವೆರಡೂ ಒಂದೇ ಅಲ್ಲವೆ ? ಎಂದು ಹೇಳಿದುದನ್ನು ಲಾಲಮಹಾಶಯನು ಕೇಳಿ, " ಒಳ್ಳೆಯದೇ ಆಯಿತು ; ಆವಾಗ ಉಪಯೋಗಕ್ಕೆ ಬರುವುದೋ ಆಗಲೇ ಇದನ್ನು ತೆಗೆದುಕೊಂಡು ಧರಿಸಬಹುದು. ಅದಕ್ಕೇನೂ ಅಡ್ಡೀ ಇರುವುದಿಲ್ಲವಷ್ಟೇ ? ಎಂದು ಹೇಳುತ್ತಾ ಆಭರಣದ ಭರಣಿಯನ್ನು ತನ್ನ ಗಂಟನೊಳಗೆ ಸೇರಿಸಿಟ್ಟನು. ಬಳಿಕ ಸ್ವರ್ಣಕುಮಾರಿಯು "ಕೆಲವು ತಿಂಗಳ ಹಿಂದೆ ಆವನು ಗಂಗಾತೀರದಲ್ಲಿ ದಿಕ್ಕಿಲ್ಲದೆ ಬಿದ್ದು ಮೂರ್ಛೆಗೊಂಡಿದ್ದನೋ ಅಂತಹವನ ಬಳಿಯಲ್ಲಿ ಇಂತಹ ಅಮೂಲ್ಯವಾದ ರತ್ನಾಭರಣಗಳು ಇರುವುದು ಹೇಗೆ" ಎಂದು ಪರಿಪರಿಯಾಗಿ ಚಿಂತಿಸುತ್ತಾ ಅಲ್ಲಿಂದೆದ್ದು ಮನೆಯೊಳಗೆ ಹೊರಟುಹೋದಳು.

ಈ ಘಟನಾವಳಿಯು ನಡೆದ ಕೆಲವು ದಿನಗಳ ಮೇಲೆ ಒಂದಾನೊಂದು ದಿನ ಸ್ವರ್ಣಕುಮಾರಿಯು ಸಂಧ್ಯಾಕಾಲದಲ್ಲಿ ಮನೆಗೆ ಸೇರಿದ ಹೂದೋಟದಲ್ಲಿದ್ದ ವಕುಳ ವೃಕ್ಷದ ತಡಿಯಲ್ಲಿ ಒಂದು ಶಿಲಾಸನದ ಮೇಲೆ ಕುಳಿತುಕೊಂಡಿದ್ದಳು. ಆ ಸಮಯದಲ್ಲಿ ವಕುಳ ಪುಷ್ಪಗಳು ಗಿಡದಿಂದ ಉದುರಿ ಬೀಳುತಿದ್ದುವು. ಆಗ ಕುಮಾರಿಯು ಸುತ್ತಲೂ ನೋಡಿ ಯಾರೂ ಇಲ್ಲದಿರುವುದನ್ನು ನಿರ್ಧರಮಾಡಿಕೊಂಡು ಮೃದುಮಧುರ ಸ್ವರದಿಂದ ಒಂದು ಮನೋಹರವಾದ ಗಾನವನ್ನು ಹಾಡುತ್ತಾ ಹೂಗಳನ್ನು ಆರಿಸಿಡುತಿದ್ದಳು.

ಸ್ವರ್ಣಕುಮಾರಿಯು ಆಗಣ ಸಂದರ್ಭದಲ್ಲಿ ಸಣ್ಣ ಹುಡುಗಿಯಾಗಿರಲಿಲ್ಲ. ಅವಳಿಗೆ ಹದಿಮೂರನೆಯ ವರ್ಷವು ತುಂಬುತ್ತಾ ಬಂದಿದ್ದಿತು. ಹುಡುಗಿಯ ಹುಡುಗತನದ ಜತೆಗೆ ಯೌವನದ ಒಂದೆರಡು ಚೇಷ್ಟೆಗಳೂ ಸೇರಿಕೊಂಡು ದೇಹದ ರಮಣೀಯತೆಯನ್ನು ಹೆಚ್ಚಿಸುತಲಿದ್ದುವು. ನಮ್ಮ ಭರತಭೂಮಿಯಲ್ಲಿ ಪ್ರಾಯಿಕವಾಗಿ ಕನ್ಯೆಯರಿಗೆ ಯೌವನವು ಅಂಕುರಿಸುವುದಕ್ಕೆ ಮೊದಲೇ ವಿವಾಹ ಮಾಡುವ ಪದ್ಧತಿಯುಂಟು. ಚೌಧುರಿಮಹಾಶಯನು ಈ ಪದ್ಧತಿಗೆ ಅನುಸಾರವಾಗಿ ತನ್ನ ಏಕಮಾತ್ರಪುತ್ರಿಗೆ ವಿವಾಹ ಮಾಡದೇ ಉದಾಸೀನನಾಗಿದ್ದನು. ಅವಿವೇಕದ ಪದ್ಧತಿಯನ್ನನುಸರಿಸುವ ಲೋಗರ ನಿಂದೆಗೂ ಆತನು ಭಯಪಡ

ತಕ್ಕವನಾಗಿರಲಿಲ್ಲ. "ಗಂಡನೆಂದರೇನು? ಗಂಡನು ಯಾವ ಪದಾರ್ಥ? ಗಂಡನಿಂದ ಉಂಟಾಗುವ ಪ್ರಯೋಜನಗಳಾವುವು?" ಎಂಬುದನ್ನು ಹುಡುಗಿಯು ಅರಿಯುವುದಕ್ಕೆ ಮೊದಲು ವಿವಾಹದ ವಿಚಾರವೇ ಮಾಡಕೂಡದೆಂಬುದು ಚೌಧುರಿ ಮಹಾಶಯನ ಮತವು. ಚೌಧುರಿಯಲ್ಲಿ ಅನೇಕ ಸದ್ಗುಣಗಳಿದ್ದರೂ ಈ ವಿಷಯದಲ್ಲಿ ಮಟ್ಟಿಗೆ ಜನರು ದುರ್ಗುಣವನ್ನು ಆರೋಪಿಸಿ ಆತನನ್ನು ಪರೋಕ್ಷ ದಲ್ಲಿ ನಿಂದಿಸುವರು. ಇದಕ್ಕಾಗಿಯೇ ಅನೇಕರು ಆತನ ಮನೆಗೆ ಹೋಗಿಬರುವು ದನ್ನೇ ಕಡಮೆಮಾಡುತ್ತ ಬಂದರು. ಅಕ್ಕಪಕ್ಕದ ಮನೆಗಳ ಹೆಂಗುಸರೆಲ್ಲರೂ ಆವಾಗಲೂ ಮದುವೆಯಿಲ್ಲದ ಸ್ವರ್ಣಕುಮಾರಿಯ ವಿಷಯವನ್ನೇ ಎತ್ತಿ ಮಾತ ನಾಡುತ್ತಿದ್ದರು. ಸ್ವರ್ಣಕುಮಾರಿಯನ್ನು ಎಲ್ಲಿಯಾದರೂ, ಕಂಡರೆ ಹೆಣ್ಣು ಹುಡುಗಿಯರೆಲ್ಲರೂ ದೂರದೂರವಾಗಿ ಸರಿದು ಹೋಗುತಿದ್ದರೇ ಹೊರತು ಯಾರೂ ಸಮೀಪದಲ್ಲಿ ನಿಂತು ಮಾತನಾಡಿಸುತ್ತಿರಲಿಲ್ಲ. ಹೀಗಾದುದರಿಂದಲೇ ಸ್ವರ್ಣಕುಮಾರಿಗೆ ಯಾವ ಸಖಿಯರೂ ಇರಲಿಲ್ಲ. ಅದುಕಾರಣ ಕುಮಾರಿಯು ಅವಕಾಶ ಸಿಕ್ಕಿದಾಗಲೆಲ್ಲಾ ಹೂದೋಟದಲ್ಲಿ ಕುಳಿತುಕೊಂಡು ತನ್ನ ಬೇಸರವನ್ನು ಹೋಗಲಾಡಿಸಿಕೊಳ್ಳುತಿದ್ದಳು.

ಯೌವನದ ಪ್ರಥಮಾವತಾರದಲ್ಲಿ ಕನ್ಯೆಯರು ಆವ ಬಗೆಯ ರೂಪವನ್ನು ತಾಳಿ ಶೋಭಿಸುತ್ತಿರುವರೆಂಬುದನ್ನು ನಾವಿಲ್ಲಿ ನಮ್ಮ ಪ್ರಿಯಪಾಠಕ ಮಹಾ ಶಯರಿಗೆ ತಿಳಿಸಬೇಕಾದ ಆವಶ್ಯಕತೆಯೇನೂ ಇರಲಾರದು. ಕಾರಣವೇನೆಂದರೆ— ಕಣ್ಣೆರತಕ್ಕ ಪ್ರತಿಯೊಬ್ಬ ರಸಿಕನೂ ಈ ಅವಸ್ಥಾವಿಶೇಷವನ್ನು ನಿತ್ಯವೂ ನೋಡಿನೋಡಿ ಹಿಗ್ಗುತಲೇ ಇರುವನು. ಅನಿರ್ವಚನೀಯವಾದ ಇಂತಹ ರೂಪದ ಮಹಿಮೆಯನ್ನು ಕಣ್ಣಿನಿಂದ ನೋಡಿ ಆನಂದಿಸಬೇಕೇ ಹೊರತು, ಗ್ರಂಥಕಾರರ ವಾಕ್ಯರಚನಾ ವಿಶೇಷಗಳಿಂದ ಸೌಂದರ್ಯದ ಮರ್ಮವನ್ನು ಸಂಪೂರ್ಣವಾಗಿ ಅರಿತು ಆನಂದ ಪಡುವುದು ಸುಳ್ಳಿನ ಸುದ್ದಿಯೇ ಸರಿ. ಆದರೂ ಒಂದೆರಡು ವಾಕ್ಯಗಳಿಂದ ಸ್ವರ್ಣಕುಮಾರಿಯನ್ನು ವರ್ಣಿಸಿ ನಮ್ಮ ಇಷ್ಟಾರ್ಥವನ್ನು ನೆರ ವೇರಿಸಿಕೊಳ್ಳುವೆವು.

ಸ್ವರ್ಣಕುಮಾರಿಯು ಸ್ವಭಾವವಾಗಿಯೇ ಸುಂದರಿ. ಅದರಲ್ಲಿಯೂ ಯೌವ ನದ ಪ್ರಾರಂಭದಸೆಯೆಂದಮೇಲೆ ಸೌಂದರ್ಯದ ಮಾಧುರ್ಯವನ್ನು ಹೇಳತಕ್ಕು ದೇನಿರುವುದು? ಕೆಂದುಟಿಯ ಮೇಲೆ ನಲಿದಾಡುವ ಮೃದುಮಧುರವಾದ ಮುಗುಳು ನಗೆ ಮತ್ತು ಕಣ್ಣುಗಳಲ್ಲಿ ಕಂಡೂ ಕಾಣದಂತೆ ಆವರಿಸಿರುವ ಸ್ವಾಭಾವಿಕವಾದ ನಾಚುಗೆ, ಇವೆರಡೇ ಎಂತಹ ಧೀರನನ್ನಾದರೂ ಅಧೀರನನ್ನಾಗಿ ಮಾಡಿಬಿಡುವುವು. ಎಲ್ಲಾ ಅವಯಗಳೂ ತುಂಬಿಕೊಂಡು ಮನೋಹರವಾಗಿರುವ ದೇಹದಲ್ಲಿ ಥಳ

ಥಳಿಪ ಕಾಂತಿ ವಿಶೇಷವಾದರೋ ಎಂತಹ ಕಲ್ಲೆದೆಯವನನ್ನಾದರೂ ಕರಗಿಕರಗಿ ನೀರಾಗಿ ಹರಿದು ಹೋಗುವಂತೆ ಮಾಡುವುದೇನೂ ಆಶ್ಚರ್ಯದ ಸಂಗತಿಯೇ ಅಲ್ಲ. ವನದೇವತೆಯು ಮನುಷ್ಯರೂಪವನ್ನು ತಾಳಿಕೊಂಡು ಸರ್ವಜನ ವಶೀಕಾರ ವಿದ್ಯೆಯನ್ನು ಲೋಕಕ್ಕೆ ತೋರ್ಪಡಿಸುವಳೋ ಎಂಬಂತೆ ಸ್ವರ್ಣಕುಮಾರಿಯು ಶಿಲಾತಲದ ಮೇಲೆ ಕುಳಿತುಕೊಂಡು ವಕುಳ ಪುಷ್ಪಗಳಿಂದ ಮಾಲಿಕೆಯನ್ನು ನಿರ್ಮಿಸುತಿದ್ದಳು. ಪೂಮಾಲೆಯು ಕಟ್ಟಿದುದಾಯಿತು. ಬಳಿಕ ಕುಮಾರಿಯು ಪೂಮಾಲೆಯನ್ನು ಕಯ್ಯಲ್ಲಿ ಹಿಡಿದುಕೊಂಡು ಅದರ ಸೊಬಗನ್ನು ಬಲು ಹೊತ್ತು ನೋಡುತಿದ್ದು, "ಈ ಮಾಲೆಯು ಬಲು ಅಂದವಾಗಿರುವುದು. ಇದೇ ನನಗೆ ಸರಿಯಾದ ಆಭರಣವು; ರತ್ನಾಭರಣಗಳಿಂದ ನನಗಾಗುವುದೇನು?" ಎಂದು ಮಾತನಾಡಿಕೊಂಡಳು.

"ಸತ್ಯ, ಸತ್ಯ, ನೀನು ಹೇಳಿದ ಮಾತೇ ಸತ್ಯ," ಎಂಬ ಧ್ವನಿಯೊಂದು ಎಲ್ಲಿಂದಲೋ ಕೇಳಿಬಂದಿತು. ಕುಮಾರಿಯು ಬೆಚ್ಚಿ ಬೆದರಿದವಳಾಗಿ ಎದ್ದು ನಿಂತುಕೊಂಡು ಸುತ್ತಲೂ ನೋಡಿದಳು. ಅಷ್ಟು ಹೊತ್ತಿಗೆ ಸರಿಯಾಗಿ ಗಿಡದ ಮೇಲೆ ಅಡಗಿಕೊಂಡಿದ್ದ ಮೋಹನನು ಗಿಡದಿಂದ ಇಳಿದುಬಂದು, "ಕುಮಾರಿ! ಚೆನ್ನಾಗಿಯೇ ಹೇಳಿದೆ. ನಿನಗೆ ರತ್ನಾಭರಣಕ್ಕಿಂತಲೂ ಪುಷ್ಪಮಾಲಿಕೆಯೇ ಒಪ್ಪುವುದು. ಎಲ್ಲಿ? ನಿನ್ನ ಪುಷ್ಪಮಾಲಿಕೆಯನ್ನು ಇತ್ತ ಕೊಡು. ಅದನ್ನು ನಿನ್ನ ಕತ್ತಿನಲ್ಲಿ ಹಾಕಿ ಆವುದಂದವೆಂಬುದನ್ನು ಪರೀಕ್ಷಿಸಿ ನೋಡುವೆನು" ಎಂದು ನಗುನಗುತ್ತ ಮಾತನಾಡಿಸಿದನು. ಕುಮಾರಿಯು ನಾಚುಗೆಯಿಂದ ತಲೆವಾಗಿದವಳಾಗಿ ಉಗುರಿನಿಂದ ನೆಲವನ್ನು ಕೆರೆಯುತ್ತಾ ನಿಂತುಬಿಟ್ಟಳು. ಮೊದ ಮೊದಲು ಕುಮಾರೀ ಮೋಹನರು ಅನ್ಯೋನ್ಯಭಾವದಿಂದ ಆಟಪಾಟಗಳಲ್ಲಿ ಸೇರಿಕೊಂಡು ಸರಸಸಲ್ಲಾಪಗಳನ್ನು ಮಾಡುತಿದ್ದರು. ಮನೆಯಲ್ಲಿ ಮೋಹನನಿಗೆ ಕುಮಾರಿಯನ್ನು ಕೊಟ್ಟು ವಿವಾಹವಾಗುವುದೆಂಬ ಸುದ್ದಿಯೆದ್ದ ಒಡನೆಯೇ ಕುಮಾರಿಯು ಮೋಹನನೊಡನೆ ವಿಶೇಷವಾಗಿ ಮಾತನಾಡುವುದನ್ನು ಬಿಟ್ಟಳು. ಎಲ್ಲಿಯಾದರೂ ಮೋಹನನ್ನು ಕಂಡರೆ ಮರೆಯಾಗಿ ನಿಲ್ಲುವುದನ್ನು ಅಭ್ಯಾಸಮಾಡಲಾರಂಭಿಸಿದಳು. ಈಗಲೂ ನಾಚುಗೆಯಿಂದ ಓಡಿಹೋಗುವ ಪ್ರಯತ್ನದಲ್ಲಿಯೇ ಇದ್ದಳು. ಮೋಹನನು ಈ ಗುಟ್ಟನ್ನು ತಿಳಿದುಕೊಂಡು ಆಕೆಯ ಕೈಯನ್ನು ಹಿಡಿದು, "ಕುಮಾರಿ! ವೃದ್ಧಮಹಾಶಯನು ಕೊಟ್ಟ ರತ್ನಾಭರಣವನ್ನು ಸ್ವೀಕರಿಸದೇ ಈ ಪುಷ್ಪಮಾಲಿಕೆಯಲ್ಲಿಯೇ ಪ್ರೀತಿಯನ್ನು ತೋರ್ಪಡಿಸುತ್ತಿರುವುದು ನಮ್ಮಗಳ ಸೌಭಾಗ್ಯವನ್ನು ಸೂಚಿಸುತ್ತಿರುವುದು," ಎಂದು ನುಡಿದನು.

ಸ್ವರ್ಣಕುಮಾರಿಯು ಈ ಮಾತನ್ನು ಕೇಳಿ, "ತಮಗೆ ಈ ವಿಷಯವು ಗೊತ್ತಾದ ಬಗೆಹೇಗೆ?" ಎಂದಳು. ಇದನ್ನು ಕೇಳಿದ ಮೋಹನನು, "ನನಗೆ ಗೊತ್ತಾಗಬಾರದೇತಕೆ? ನನಗೂ ಕಿವಿಯಿರುವುದರಿಂದ ನಾನು ಕೇಳದೇ ಇರಲು ಹೇಗೆ ಸಾಧ್ಯ? ಈ ಮಾತು ಹಾಗಿರಲಿ. ನಿನ್ನ ಕೈಯಲ್ಲಿರುವ ಮಾಲಿಕೆಯನ್ನು ನನ್ನ ಕೈಗೆ ಕೊಡು. ಅದರಿಂದ ನಿನ್ನನ್ನು ಅಲಂಕರಿಸಿ ನೋಡುವೆನು" ಎಂದುತ್ತರವಿತ್ತನು.

ಮೋಹನನು ಹುಡುಗತನದಲ್ಲಿ ಸ್ವರ್ಣಕುಮಾರಿಗೆ ಎಷ್ಟೋ ಹೂಗಳನ್ನು ತಂದುಕೊಟ್ಟಿರುವನು. ಎಷ್ಟೋ ಸಲ ಹೂ ಮಾಲೆಯನ್ನು ಆಕೆಯ ಕತ್ತಿನಲ್ಲಿ ಹಾಕಿರುವನು. ಆಗ ಕುಮಾರಿಗೆ ಆವ ವಿಧವಾದ ವಿಕಾರವೂ ಉಂಟಾಗುತ್ತಿರಲಿಲ್ಲ. ಈಗಳಾದರೋ ಕುಮಾರಿಯು ಮೋಹನನ ಮಾತನ್ನು ಕೇಳಿದ ಕೂಡಲೆ ನಾಚುಗೆಯುಂಟಾಗಿ ಕೊಂಚ ದೂರ ಸರಿದು ನಿಂತಳು. ಹೂಮಾಲಿಕೆಯನ್ನು ಮೋಹನನಿಗೆ ಕೊಡಬೇಕೆಂಬ ಇಚ್ಛೆಯಿದ್ದರೂ ನಾಚುಗೆಯ ಪ್ರಭಾವದಿಂದ ಕೊಡುವುದಕ್ಕೆ ಕೈಬರಲೇ ಇಲ್ಲ.

ಈ ಸಮಯಕ್ಕೆ ಸರಿಯಾಗಿ ಮತ್ತೊಬ್ಬ ಯುವಕನು ಸ್ವರ್ಣಕುಮಾರಿಯಿದ್ದಲ್ಲಿಗೆ ಬಂದು ನಿಂತನು. ಆಗಂತುಕನ ವಯಸ್ಸು ಸಾಮಾನ್ಯವಾಗಿ ಇಪ್ಪತ್ತೈದು ವರ್ಷಗಳಿರಬಹುದು. ನೋಡುವುದಕ್ಕೆ ಅತಿಸ್ಥೂಲನೂ ಅಲ್ಲ, ಅತಿಕೃಶನೂ ಅಲ್ಲ. ಶರೀರದ ವರ್ಣವಾದರೋ ಅತಿ ರಮಣೀಯವಾದುದು. ಆತನು ಧರಿಸಿದ್ದ ಉಡುಗೆ ತೊಡುಗೆಗಳು ಅಲ್ಪ ಬೆಲೆಯುಳ್ಳವುಗಳಾದರೂ ಅತಿ ಶುಭ್ರವಾಗಿದ್ದುವು. ಕುಮಾರಿಯು ಹಠಾತ್ತಾಗಿ ಬಂದ ಆಗಂತುಕನನ್ನು ನೋಡಿ ದಿಕ್ಕುತೋರದವಳಾಗಿ ಸೀರೆಯ ಸೆರಗನ್ನು ಸರಿಮಾಡಿಕೊಂಡು ತಲೆಯನ್ನು ಬಗ್ಗಿಸಿ ನಿಂತಳು. ಈ ಸಮಾರಂಭದಲ್ಲಿ ಆಕೆಯ ಕೈಯಲ್ಲಿದ್ದ ಮಾಲೆಯು ತಾನಾಗಿಯೇ ನೆಲದ ಮೇಲೆ ಜಾರಿಬಿದ್ದಿತು, ಆಗಂತುಕನು ಕುಮಾರಿಯ ಹತ್ತಿರಕ್ಕೆ ಬಂದು ಒಂದು ಕ್ಷಣಕಾಲ ಆಕೆಯನ್ನೇ ನೋಡುತಿದ್ದು ಬಳಿಕ, "ಕುಮಾರಿ, ನನ್ನ ಗುರುತು ನಿನಗೆ ಇದ್ದ ಹಾಗೆ ಕಾಣಿಸುವುದಿಲ್ಲ. ಐದಾರು ವರ್ಷಗಳ ಹಿಂದೆ ನಿನ್ನನ್ನು ನಾನು ನೋಡಿದ್ದುದು. ಈಗ ನೀನು ಒಳ್ಳೆಯ ಸುಂದರಿಯಾಗಿಬಿಟ್ಟೆ. ನಾನೇ ಮಧುಸೂದನ. ನನ್ನ ಹೆಸರಾದರೂ ಜ್ಞಾಪಕದಲ್ಲಿರುವುದೇ? ಎಂದು ಮಾತನಾಡಿಸಿದನು.

ಬಾಲಿಕೆಯು ಮೃದು ಸ್ವರದಿಂದ, "ಜ್ಞಾಪಕವಿಲ್ಲದೇ ಏನು! ನನ್ನ ತಂದೆಯವರನ್ನು ನೋಡೋಣವಾಗಿದ್ದಿತೇ? ಎಂದು ಹೇಳಿದುದನ್ನು ಕೇಳಿ, ಮಧುಸೂದ

ನನು, "ಇಲ್ಲ, ಇನ್ನೂ ನೋಡಿಲ್ಲ, ನಿಮ್ಮ ತಂದೆಯು ಇಲ್ಲಿಯೇ ಬರುವಂತಿದೆ. ಅವರು ಬಂದ ಮೇಲೆ ನೋಡುವೆನು," ಎಂದು ಉತ್ತರವಿತ್ತನು.

ಎರಡನೆಯ ವಿಲಾಸದಲ್ಲಿ ರಾಯಮನೆತನದವರ ವಿಷಯವಾಗಿ ಕೊಂಚ ಮಟ್ಟಿಗೆ ತಿಳಿಸಿರುವುದನ್ನು ನಮ್ಮ ಪಾಠಕಮಹಾಶಯರು ಇನ್ನೂ ಜ್ಞಾಪಕದಲ್ಲಿಟ್ಟಿರಬಹುದು. ಮಧುಸೂದನನೆಂಬುವನು ಇಂದಿರಾಕಾಂತನ ಎರಡನೆಯ ಮಗನಾದ ವಿಮಲಾಕಾಂತನ ಒಬ್ಬನೇ ಮಗನು. ಮಧುಸೂದನನು ಬಾಲ್ಯದಲ್ಲಿ ಅತಿ ಚುರುಕಾಗಿದ್ದುದನ್ನು ನೋಡಿ ಅನೇಕರು ಇವರ ವಿಷಯದಲ್ಲಿ ದೊಡ್ಡ ಮನುಷ್ಯನಾಗುವನೆಂಬ ಅಭಿಪ್ರಾಯವನ್ನಿಟ್ಟಿದ್ದರು. ಮುಂದೆ ಹೀಗೆಯೇ ನಡೆಯುವುದೆಂದು ಯಾರು ತಾನೇ ನಿಶ್ಚಯವಾಗಿ ಹೇಳಬಲ್ಲರು? ಮಧುಸೂದನನ ವಿಷಯದಲ್ಲಿ ಜನರ ಭಾವನೆಯು ಫಲಿಸಲಿಲ್ಲ. ಮಧುಸೂದನನು ಯೌವನದ ಪ್ರಾರಂಭದಸೆಯಲ್ಲಿಯೇ ತನ್ನ ತಂದೆಯನ್ನು ಕಳೆದುಕೊಂಡನು. ಅದಾದ ಬಳಿಕ ರಾಯಮನೆತನದ ಸಂಪತ್ತೆಲ್ಲವೂ ಅವನ ಕೈಸೇರಿತು. ಅಂದು ಮೊದಲು ಮಧುಸೂದನನು ಓದುಬರೆಹಗಳನ್ನು ದೂರಮಾಡಿದನು. ಬಗೆಬಗೆಯ ಸ್ನೇಹಿತರು ಮಧುಸೂದನನ ಮನೆಗೆ ಬಂದು ಹೋಗುವುದಕ್ಕೆ ಮೊದಲುಮಾಡಿದರು. ಪೈತೃಕ ಧನಸಂಪತ್ತೆಲ್ಲವೂ ಒಂದೊಂದಾಗಿ ಕೈಬಿಡಲಾರಂಭಿಸಿತು. ವಿವೇಕವಿಲ್ಲದ ಯುವಕರ ಕೈಗೆ ಹಣವು ಸಿಕ್ಕಿತೆಂದರೆ ಅದು ತಲೆಯಾಗಿ ನಿಲ್ಲುವ ಪಾಪವುಂಟೇ?

ಚೌಧುರಿಮಹಾಶಯನು ಹೂದೋಟದೊಳಗೆ ಬಂದ ಕೂಡಲೆ ಮಧುಸೂದನನನ್ನು ನೋಡಿ, "ಮಧು! ಮನೆಯಲ್ಲಿ ಎಲ್ಲರೂ ಆರೋಗ್ಯವಷ್ಟೇ? ನಿನ್ನ ಕೆಲಸಗಳು ಹೇಗೆ ನಡೆಯುತ್ತಿರುವುವು? ಬಾ, ಮನೆಯೊಳಗೆ ಹೋಗಿ ವಿಶ್ರಾಂತಿಯನ್ನು ತೆಗೆದುಕೊಳ್ಳುವ," ಎಂದನು.

ಮಧುಸೂದನನು ಕುಮಾರಿಯನ್ನು ಕುರಿತು, ಸ್ವರ್ಣ, ಇಲ್ಲೇ ಮಾಡುವೆ? ಮನೆಗೆ ಹೋಗೋಣ ಬಾ," ಎಂದು ಹೇಳಿ ಚೌಧುರಿಯೊಡನೆ ಹೊರಟನು. ಸ್ವರ್ಣಕುಮಾರಿಯೂ ಅವರ ಹಿಂದೆ ಹಿಂದೆಯೇ ತೆರಳಿದಳು. ಮೋಹನನು ಅಲ್ಲಿಯೇ ಏಕಾಂಗಿಯಾಗಿ ಕಲ್ಲಿನ ಮೇಲೆ ಕುಳಿತುಕೊಂಡು ಪರಿಪರಿಯಾಗಿ ಚಿಂತಿಸಲಾರಂಭಿಸಿದನು :—

"ಹೀಗಾಗುವುದೂ ಉಂಟೆ? ಸ್ವರ್ಣಕುಮಾರಿಯು ಹೊರಟುಹೋಗುವಾಗ ಹೋಗಿಬರುತ್ತೇನೆಂದು ಕೂಡ ಹೇಳದೇ ಹೋದಳಲ್ಲಾ! ಇದರ ಅರ್ಥವೇನಿರಬಹುದು? ಈ ಸಂದರ್ಭದಲ್ಲಿ ನನ್ನನ್ನು ಕಣ್ಣೆತ್ತಿಯೂ ನೋಡದಿರುವುದಕ್ಕೆ ಕಾರಣವೇನಿದ್ದೀತು? ಮಧುಸೂದನನು ನನ್ನನ್ನು ಕಾಣದವನಲ್ಲ. ಅವನಾದರೂ ನನ್ನ

ಯೋಗಕ್ಷೇಮವನ್ನು ವಿಚಾರಿಸಬಹುದಾಗಿದ್ದಿತು. ಅವನು ನನ್ನ ಕಡೆಗೇ ತಿರಿಗಿ ನೋಡಲಿಲ್ಲ. ಇದೇನು ವಿಚಿತ್ರವ್ಯಾಪಾರ! ನನಗೆ ತೋರುವುದೇನೆಂದರೆ, ಇದೆಲ್ಲವೂ ಹಣದ ಮದಾಂಧತೆಯೇ ಹೊರತು ಮತ್ತು ಬೇರೆಯಲ್ಲ. ಸ್ವರ್ಣ ಕುಮಾರಿಯಲ್ಲಿ ಆವ ವಿಧವಾದ ದುರ್ಗುಣಗಳೂ ಇಲ್ಲ. ಹೀಗಿರುವಲ್ಲಿ ಈ ಹೊತ್ತು ಅವಳೂ ನನ್ನ ವಿಷಯದಲ್ಲಿ ಉದಾಸೀನೆಯಾದುದನ್ನು ನೋಡಿದರೆ ನನಗೇನೋ ಭಯವಾಗುವುದು. ಈ ದಿನ ಆಕೆಯು ನನಗೆ ಅಪಮಾನಮಾಡಿದಂತೆಯೇ ತೋರುತ್ತಿರುವುದು. ಹಣೆಯಲ್ಲಿ ಬರೆದಂತಾಗಲಿ. ''

ಮೋಹನನು ಹೀಗೆ ಚಿಂತಿಸುತ್ತಾ ಕಣ್ಣುಗಳಲ್ಲಿ ಒಂದೆರಡು ತೊಟ್ಟು ನೀರನ್ನು ತಂದುಕೊಂಡು ಕೆಳಗೆ ಬಿದ್ದಿದ್ದ ವಕುಳ ಪುಷ್ಪಮಾಲಿಕೆಯನ್ನು ಕೈಯಲ್ಲಿ ತೆಗೆದಿಟ್ಟುಕೊಂಡನು.

---

## ನಾಲ್ಕನೆಯ ವಿಲಾಸ

### ಮಧುಸೂದನ

ಮಧುಸೂದನನು ಬಾಲ್ಯದಲ್ಲಿ ಬಲು ಚುರುಕಾಗಿದ್ದನು. ಎಲ್ಲರೂ ಇವನ ಬುದ್ಧಿಯನ್ನು ನೋಡಿ, ಇವನು ದೊಡ್ಡ ಮನುಷ್ಯನಾಗುವನೆಂದು ತಿಳಿದಿದ್ದರು. ಪಾಠಶಾಲೆಯ ಉಪಾಧ್ಯಾಯರು ಕೂಡ ಅದೇ ಅಭಿಪ್ರಾಯವನ್ನಿಟ್ಟುಕೊಂಡಿದ್ದರು. ಆ ಅಭಿಪ್ರಾಯವೆಲ್ಲವೂ ಒಂದೇ ತಡವೆಗೆ ಮಾಯವಾಗಿಬಿಟ್ಟಿತು. ಮಧುಸೂದನನು ತನ್ನ ಹದಿನೆಂಟನೆಯ ವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡು ತಬ್ಬಲಿಯಾದನು. ಮನೆತನದ ಆಸ್ತಿ ಪಾಸ್ತಿಗಳೆಲ್ಲವೂ ಅವನ ಕೈ ಸೇರಿತು. ಆ ಕೂಡಲೆ ವಿದ್ಯಾಬುದ್ಧಿಗಳು ದೂರ ತೊಲಗಿದುವು. ದುರ್ಜನರು ಬಂದು ಹೋಗುವುದಕ್ಕೆ ಮೊದಲು ಮಾಡಿದ ಕೂಡಲೆ, ಮೊದಲಿನ ಗುಣಗಳೆಲ್ಲವೂ ದೋಷವಾಗಿ ಪರಿಣಮಿಸುತ್ತಾ ಬಂದುವು. ಮಗನ ಕೆಟ್ಟತನವನ್ನು ನೋಡಿ ತಾಯಿಯು ಒಂದೊಂದು ವೇಳೆ ಆಕ್ಷೇಪಿಸುವಳು. ತಾಯಿಯ ಮಾತನ್ನು ಕೇಳುವರಾರು? ಕಷ್ಟಾರ್ಜಿತವಾದ ಪಿತೃಪೈತಾಮಹಸಂಪತ್ತು ಕಾಲಕ್ರಮದಲ್ಲಿ ಕಡಿಮೆಯಾಗುತ ಬಂದಿತು. ಅದು ಕಡಿಮೆಯಾದ ಹಾಗೆಲ್ಲಾ ಸಹವಾಸಿಗಳೂ ಕಡಮೆ ಯಾಗುತ್ತ ಬಂದರು. ಹಣಕ್ಕಾಗಿ ಬಂದವರು ಹಣದ ಬಲಾಬಲಗಳನ್ನು ನೋಡಿಯೇ ಕೆಲಸ ಮಾಡುವರು. ಅಂತಹವರು ಹಣವಿದ್ದರೆ ಬರುವರು, ಹಣವಿಲ್ಲದಿದ್ದರೆ ಕೆರಳುವರು. ಲೋಕದ ಸ್ಥಿತಿಯು ಹೀಗಿರುವುದರಿಂದ ಮಧುಸೂದನನಿಗೆ ಹಿತಚಿಂತಕರಾದ ಸ್ನೇಹಿತರಾರೂ ಇರಲಿಲ್ಲ. ಅದು ಕಾರಣವೇ ಅಭಿಮಾನದಿಂದ ಮುಂದೆ

ನಿಂತು ಮಧುಸೂದನನಿಗೆ ವಿವಾಹ ಪ್ರಯತ್ನವನ್ನು ಯಾರೂ ಮಾಡಲಿಲ್ಲವಾದುದರಿಂದ ಅವನಿಗೆ ಯಾರೂ ಹೆಣ್ಣು ಕೊಡುವುದಕ್ಕೆ ಅಭಿಪ್ರಾಯಪಡಲಿಲ್ಲ.

"ಯೌವನಂ ಧನಸಂಪತ್ತಿಃ। ಪ್ರಭುತ್ವ ಮವಿವೇಕಿತಾ ||
ಏಕೈಕಮಪ್ಯನರ್ಥಾಯ। ಕಿಮು ಯತ್ರ ಚತುಷ್ಟಯಂ ||

ಅರ್ಥ—ಯೌವನವು, ಐಶ್ವರ್ಯವು, ಯಜಮಾನನಾಗಿರುವಿಕೆಯು, ವಿವೇಕವಿಲ್ಲದೇ ಇರೋಣವು, ಇವುಗಳಲ್ಲಿ ಒಂದೊಂದೇ ವಿನಾಶವನ್ನುಂಟುಮಾಡುವುದು ; ಹೀಗಿರುವಲ್ಲಿ ಈ ನಾಲ್ಕೂ ಒಂದೆಡೆಯಲ್ಲಿ ಸೇರಿಕೊಂಡು ಏಕಾಧಿಪತ್ಯ ಮಾಡುವುದಾದರೆ ಹೇಳತಕ್ಕುದೇನಿರುವುದು."

ಮಧುಸೂದನನ ಪಾಡು ಇದರಂತೆಯೇ ಆಗಿಬಿಟ್ಟಿತು. ಕೊಂಚಕಾಲದೊಳಗಾಗಿಯೇ ಸಂಪತ್ತೆಲ್ಲವೂ ಬಚ್ಚಲಿನಲ್ಲಿ ನೀರಿನಂತೆ ಹರಿದುಹೋಯಿತು. ಕಷ್ಟಪಟ್ಟು ಹಣವನ್ನು ಸಂಪಾದಿಸುವಾತನಿಗೆ ಅದರ ಉಪಯೋಗವು ಗೊತ್ತಾಗುವುದೇ ಹೊರತು ಇತರರಿಗೆಂದಿಗೂ ಗೊತ್ತಾಗಲಾರದು. ಇದನ್ನು ತಿಳಿತಿಳಿದೂ ಅವಿವೇಕಶಿಖಾಮಣಿಗಳು ಸ್ವಸುಖವನ್ನಾದರೂ ತ್ಯಾಗಮಾಡಿ ಮಕ್ಕಳಿಗಾಗಿ ಹಣವನ್ನು ಗಳಿಸಿಟ್ಟು ಕಣ್ಣುಮುಚ್ಚಿಕೊಳ್ಳುವರು. ಕೇವಲವಾಗಿ ಹಣವೊಂದಿದ್ದರೆ ಸಾಕೆಂದು ತಿಳಿದಿರುವ ಅವಿದ್ಯಾವಂತರಿಂದ ಪ್ರಪಂಚವು ದಿನದಿನಕ್ಕೆ ಹಾಳಾಗಿ ಹೋಗುತ್ತಿರುವುದು. ಈ ದುರಭಿಪ್ರಾಯವನ್ನು ತಪ್ಪಿಸ ಬಲ್ಲವರಾರು ? ಈಗಣ ಕಾಲದಲ್ಲಿ ಹಣವೇ ಪ್ರಧಾನವೆನಿಸಿರುವುದಾದರೂ, ಗುಣಸಹಿತವಾದ ಹಣವೇ ಎಲ್ಲದಕ್ಕೂ ಸಹಕಾರಿಯೇ ಹೊರತು ಹಣವೊಂದೇ ಅವುದಕ್ಕೂ ತರವಲ್ಲ. ಇದನ್ನು ಅನೇಕರು ತಿಳಿಯತಕ್ಕುದಿದೆ.

ಮಧುಸೂದನನು ದುರ್ವ್ಯಾಪಾರದಿಂದ ಸಂಪತ್ತೆಲ್ಲವನ್ನೂ ಹಾಳುಮಾಡಿಕೊಂಡನೆಂದು ಜನಜನಿತವಾದ ಸುದ್ದಿಯು ಚೌಧುರಿ ಮಹಾಶಯನ ಕಿವಿಗೂ ಬಿದ್ದಿದ್ದಿತು ; ಅದರ ಮುಂದಣ ಪರಿಣಾಮವೇನಾಯಿತೆಂಬುದು ಮಟ್ಟಿಗೆ ಚೌಧುರಿಯು ತಿಳಿಯುವುದಕ್ಕೆ ಆಸ್ಪದವಾಗಲಿಲ್ಲ. ಈಗಲಾದರೂ ಯಾರನ್ನಾದರೂ ಕೇಳಿ ತಿಳಿದುಕೊಳ್ಳೋಣವೆಂದರೆ, ಮಧುಸೂದನನು ಜತೆಯಲ್ಲಿ ಯಾರನ್ನೂ ಕರೆದುಕೊಂಡು ಬರದೇ ಒಬ್ಬನೇ ಬಂದಿದ್ದನು. ಇದರಿಂದ ಉದ್ದೇಶವು ನೆರವೇರುವುದಕ್ಕೆ ಸಾಧ್ಯವಾಗಲಿಲ್ಲ. ಆದರೂ ಸರಳಹೃದಯನಾದ ಚೌಧುರಿ ಮಹಾಶಯನು ಮನೆಯಲ್ಲಿ ಮಧುಸೂದನನೊಡನೆ ಬಲು ಹೊತ್ತು ಬೇರೆ ಬೇರೆ ವಿಷಯಗಳನ್ನು ಕುರಿತು ಮಾತನಾಡಿದ ಬಳಿಕ "ಮಧು, ನಿನ್ನ ವಿಷಯದಲ್ಲಿ ಒಂದೆರಡು ಕೆಟ್ಟ ಸುದ್ದಿಗಳನ್ನು ನಾನು ಹಿಂದೆಯೇ ಕೇಳಿದ್ದೆನು. ಈಗ ಅಂತಹವುಗಳೇನು ಇಲ್ಲವಷ್ಟೇ ?" ಎಂದನು.

ಅದಕ್ಕೆ ಮಧುಸೂದನನು, "ಇಲ್ಲ, ಈಗ ಅಂತಹ ವಿಷಯವೇನೂ ಇಲ್ಲ. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸಣ್ಣ ಸಣ್ಣ ವಿಷಯಗಳಾದರೂ ದೊಡ್ಡ ದೊಡ್ಡ ವುಗಳಾಗಿಯೇ ಪರಿಣಮಿಸುವುವು. ನನಗೆ ಬಾಲ್ಯದ ಚಾಪಲ್ಯದಿಂದ ಮೊತ್ತ ಮೊದಲು ಕೆಟ್ಟ ಹೆಸರು ಬಂದುದೇನೋ ನಿಜ. ಈಗ ಅದು ಹಾಗೆಯೇ ಶಾಂತ ವಾಗಿ ಹೋಯಿತು," ಎಂದು ನುಡಿದನು.

"ಕೆಟ್ಟ ಸುದ್ದಿಗಳು ಸುಳ್ಳಾಗಿ ಪರಿಣಮಿಸುವುದೇ ಒಳ್ಳೆಯದು" ಎಂದು ಚೌಧುರಿಯು ಹೇಳಿ ಮತ್ತೆ, "ಮಧುಸೂದನ, ನಿನಗೆ ಇಬ್ಬರು ಸೋದರತ್ತೆ ಯರು ಇದ್ದರಷ್ಟೆ. ಈಗ ಅವರ ಗಂಡಂದಿರೂ, ಅವರ ಹೆಣ್ಣುಮಕ್ಕಳುಗಳೂ, ಅವರ ಅಳಿಯಂದಿರೂ ಎಲ್ಲರೂ ಕ್ಷೇಮವಾಗಿರುವರೇ? ನೀನು ಅವರನ್ನು ಆವಾಗ ಲಾದರೂ ನೋಡಿದ್ದೆಯಾ? ಎಂದು ಕೇಳಿದನು.

ಮಧು—ನನ್ನ ಸೋದರತ್ತೆಯರು ಸತ್ತಮೇಲೆ ನಾನು ಸೋದರ ಮಾವಂದಿರನ್ನು ನೋಡಲಿಲ್ಲ, ಅವರನ್ನು ನೋಡುವುದಕ್ಕೂ ಇಷ್ಟವುಂಟಾಗಲಿಲ್ಲ. ಅವರು ಅಹಂಕಾರದಿಂದ ಯೋಗ್ಯತೆ ಮೀರಿ ನಡೆಯುವರಾದಕಾರಣ, ಅವರ ನಡೆನುಡಿಗಳೇ ನನಗೆ ಮೊದಲಿನಿಂದಲೂ ಸರಿಬೀಳದೇ ಹೋಯಿತು. ಹಾಸುಗೆ ಯಿದ್ದಷ್ಟು ಕಾಲ ಚಾಚಿದರೆ ಸರಿ. ಎಲ್ಲಾ ಕಾಲವು ಒಂದೇ ಸಮನಾಗಿರುವು ದೆಂದು ತಿಳಿದು ಕಂಡ ಕಂಡ ಕಡೆಗಳಲ್ಲೆಲ್ಲಾ ಸಾಲಸೋಲಗಳನ್ನು ಮಾಡಿ ಮೆರೆದರೆ ಸಾಗುವುದುಂಟೆ? ರಾಜಾಧಿರಾಜರೇ ಏನೇನೋ ಆಗಿಹೋಗಿರುವರು, ಹೀಗಿರುವಲ್ಲಿ ಪಾಮರರಾದ ಇವರ ಪಾಡೇನು? ಚೌಧುರಿಮಹಾಶಯ! ನೀವು ಏನನ್ನೇ ಹೇಳಿರಿ. ನನಗೇನೋ ಅವರನ್ನು ಕಂಡರೆ ಮೈಯೆಲ್ಲಾ ಉರಿದು ಹೋಗುವುದು. ಈಚೀಚೆಗೆ ನಾನು ಎಷ್ಟೋ ಬುದ್ಧಿಮಂತಿಕೆಯಿಂದ ಇರುತ್ತಿರು ವೆನು. ಇಂತಹ ನಮ್ಮಂತಹವರಿಗೇ ಒಂದೊಂದುವೇಳೆ ಎಷ್ಟೋ ಕಷ್ಟವಾಗು ವುದು, ಎಂದ ಮೇಲೆ ಅಹಂಕಾರಿಗಳ ಪಾಡೇನು? ಅವರ ಸುದ್ದಿ ನಮಗೇಕೆ?

ಚೌಧುರಿ—ಮಧು, ಇನ್ನು ನೀನು ಮದುವೆಯಿಲ್ಲದೇ ಇರುವುದು ಸರಿಯಲ್ಲ. ಮದುವೆಯಾದರೆ ಅನೇಕ ವಿಧವಾದ ದುರ್ನಾಮಗಳು ದೂರವಾ ಗುವ ಸಂಭವವುಂಟು. ಮಗು, ಮತ್ತೊಂದು ವಿಷಯ. ನೀನು ಸೂಳೆಯ ಮಗಳೊಬ್ಬಳನ್ನು ವಿವಾಹ ಮಾಡಿಕೊಂಡಿರುವುದಾಗಿ ಎಲ್ಲೆಲ್ಲಿಯೂ ಜನರು ಆಡಿಕೊಳ್ಳುತ್ತಿರುವರು. ಇದು ನಿಜವೇ?

ಮಧು—ರಾಮರಾಮ! ನೀವು ಇದನ್ನೂ ನಂಬುವಿರಾ? ಇತರರಿಗೆ ಮಾಡು ವುದಕ್ಕೆ ಏನ ಕೆಲಸವಿರುವುದು! ಆವಾಗಲೂ ಇತರರ ದೋಷವನ್ನು ಎತ್ತಿ

ಆಡುವುದೇ ಲೋಕದ ಸ್ವಭಾವವಾಗಿರುವುದು. ಇದನ್ನು ತಪ್ಪಿಸಬಲ್ಲವರಾರು? ಒಳಹೊಕ್ಕು ವಸ್ತುಸ್ಥಿತಿಯನ್ನು ವಿಚಾರಿಸದೇ ಬಾಯಿಗೆಬಂದಹಾಗೆ ಜನರು ಮಾತನಾಡುವುದಾದರೆ ನಾವು ಏನ ತಾನೇ ಮಾಡಬಹುದು? ನಾನು ಮೊದಲು ಇದ್ದ ದೋಷವನ್ನು ಒಪ್ಪಿಕೊಳ್ಳಲಿಲ್ಲವೇ? ಇಲ್ಲದ ದೋಷಾರೋಪಣೆಯನ್ನು ಒಪ್ಪುವುದೆಂದರೆ ಮನವು ಹೇಗೆ ಒಡಂಬಡುವುದು? ಈಗ ನೀವು ಸೂಚಿಸಿದ ವಿಷಯವು ನನಗೇ ಗೊತ್ತಿಲ್ಲದಿರುವಾಗ, ಇತರರಿಗೆ ಗೊತ್ತಾದ ಬಗೆ ಹೇಗೆ? ಲೋಕವನ್ನು ಮೆಚ್ಚಿಸುವುದು ಬಹುಕಷ್ಟ, ಬಹುಕಷ್ಟ. ಈ ಪ್ರಪಂಚದಲ್ಲಿ ಯೋಗ್ಯರಾಗಿ ಬದುಕಬೇಕೆನ್ನುವವರಿಗೆ ಕೊಂಚವೂ ಸ್ಥಳವಿಲ್ಲ. ನಿಜವಾಗಿಯೂ ಕೆಟ್ಟಕೆಲಸ ಮಾಡಿ ನಿರ್ದೋಷಿಗಳಂತೆ ಸಂಚರಿಸುವವರನ್ನು ಆರೂ ಮಾತನಾಡಿಸುವುದೇ ಇಲ್ಲ. ಅಡಿಗಡಿಗೆ ಹೆದರಿಹೆದರಿ ನಡೆಯುವ ನಮ್ಮಂತಹವರ ಮೇಲೆ ಸಲ್ಲದ ಲೋಕಾಪವಾದ. ಇವೆಲ್ಲವೂ ಗ್ರಹಚಾರದ ಫಲವು.

ಚೌಧುರಿ—ಅದಿಲ್ಲದಿದ್ದರೆ ಸರಿ. ನಾವು ಶುದ್ಧರಾಗಿರುವಾಗ ಜನರು ಆಡಿಕೊಂಡರಾಗುವುದೇನು? ನಾನು ಈ ನಡುವೆ ವಿದ್ಯಾನಗರಕ್ಕೆ ಹೋಗಲಿಲ್ಲವಾದುದರಿಂದ ನಿಜಾಂಶವು ಗೊತ್ತಾಗುವುದಕ್ಕೆ ಅವಕಾಶವಾಗಲಿಲ್ಲ. ನಿನ್ನ ಬಾಯಿಂದಲೇ ನಿಜವಾದ ಸಂಗತಿಯು ಹೊರಟ ಮೇಲೆ ನನ್ನ ಸಂದೇಹವೆಲ್ಲವೂ ನಿವೃತ್ತಿಯಾಯಿತು. ಈಗ ನನ್ನ ಸಂತೋಷಕ್ಕೆ ಪಾರವೆಲ್ಲಿಯದು?

ಮಧುಸೂದನನು ಮಾತಿನ ಸಂದರ್ಭಗಳಲ್ಲಿ ಇನ್ನೇನು ತೊಂದರೆಗಳುಂಟಾಗುವುವೋ ಎಂದು ಭಾವಿಸಿ ಅವುಗಳನ್ನು ಮೊದಲೇ ನಿವಾರಿಸಿಕೊಳ್ಳುವುದಕ್ಕಾಗಿ, "ಮಹಾಶಯ, ಬಹುಕಾಲಕ್ಕೆ ನಿಮ್ಮನ್ನು ನೋಡಿ ಬಹು ಸಂತೋಷವಾಯ್ತು. ಮೊದಲು ಮೊದಲು ನೋಡುವುದಕ್ಕೆ ಹೇಗೆ ಹೇಗೋ ಇದ್ದ ಸ್ವರ್ಣಕುಮಾರಿಯು ಈಗ ಸರ್ವಾಂಗಸುಂದರಿಯಾಗಿಬಿಟ್ಟಿರುವಳು," ಎಂದು ಮಾತನಾಡಿದನು.

ಚೌಧುರಿ—ನಮ್ಮ ಮೋಹನನೂ ಮನೋ ಮೋಹನನಾಗಿರುವನು.

ಮಧು—ಮೋಹನನನ್ನು ನಾನು ಈಗ ತಾನೇ ತೋಟದಲ್ಲಿ ನೋಡಲಿಲ್ಲವೆ? ಅವನೂ ಸರ್ವಾಂಗ ಸುಂದರನೇ ಆಗಿರುವನು.

ಚೌಧುರಿ—ಮಧುಸೂದನ, ನಮ್ಮ ಮನೆಯಲ್ಲಿ ಲಾಲಮಹಾಶಯರೊಬ್ಬರು ಬಂದಿರುವರು.

ಮಧು—ಲಾಲ ಮಹಾಶಯರೇ! ಅವರಾರು?

ಚೌಧುರಿ—ಅವರು ಪಶ್ಚಿಮದೇಶದ ದೊಡ್ಡಮನುಷ್ಯರು. ಅವರ ವಾಸ

ಸ್ಥಾನವು ಮಧುರಾಪುರಿ. ಅವರು ಅವರ ದೇಹಾನುಬಂಧಿಯೊಬ್ಬನನ್ನು ನೋಡುವುದಕ್ಕಾಗಿ ಹೊರಟಿದ್ದರು. ನಮ್ಮೂರಿನಲ್ಲಿ ಅವರಿಗೆ ಅನಾರೋಗ್ಯವಾದುದರಿಂದ ನಮ್ಮಲ್ಲಿ ಉಳಿದರು. ಅವರು ಇಲ್ಲಿಗೆ ಬಂದು ಎರಡುತಿಂಗಳಾಯ್ತು. ಈಗ ಅವರು ಆರೋಗ್ಯದಿಂದಿರುವರು. ಅವರ ಹೆಸರು ವ್ರಜವಿಹಾರಿಲಾಲ. ಅವರನ್ನು ನೋಡಿದರೆ ಆರಿಗಾದರೂ ವಿಶ್ವಾಸವುಂಟಾಗದಿರದು.

ಚೌಧುರಿಯು ಹೀಗೆ ಹೇಳುತ್ತಿರುವಷ್ಟರಲ್ಲಿಯೇ ಲಾಲಮಹಾಶಯನು ಚೌಧುರಿ ಮಧುಸೂದನರಿಬ್ಬರೂ ಮಾತನಾಡುತಿದ್ದ ಸ್ಥಳಕ್ಕೆ ಬಂದು, "ರಾಮ ರಾಮ! ಚೌಧುರಿ ಮಹಾಶಯ," ಎಂದನು.

"ರಾಮರಾಮ! ಲಾಲ ಮಹಾಶಯ, ರಾಮರಾಮ!" ಎಂದು ಹೇಳಿ ಚೌಧುರಿಯು ಒಂದೆಡೆಯಲ್ಲಿ ಸರಿದು ಕುಳಿತನು. ಲಾಲಮಹಾಶಯನು ಚೌಧುರಿಯ ಪಕ್ಕದಲ್ಲಿಯೇ ಬಂದು ಕುಳಿತನು. ಮಧುಸೂದನನು ಕೊಂಚದೂರ ಹಿಂದಕ್ಕೆ ಸರಿದು ಕುಳಿತುಕೊಂಡು ಲಾಲಮಹಾಶಯನನ್ನು ನೋಡಲಾರಂಭಿಸಿದನು. ಲಾಲಮಹಾಶಯನು ಪಶ್ಚಿಮದೇಶದವನಂತೆ ಉಡುಗೆ ತೊಡುಗೆಗಳನ್ನು ಧರಿಸಿ ಕುತ್ತಿಗೆಯಲ್ಲಿ ತುಳಸೀಮಣಿಯ ಮಾಲೆಯನ್ನು ಹಾಕಿಕೊಂಡಿದ್ದನು. ಈ ತೆರನಾದ ವೇಷಭೂಷೆಗಳಿಂದ ಲಾಲಮಹಾಶಯನು ಸೇವಕನಂತೆ ಕಾಣಿಸಿಕೊಳ್ಳುತಿದ್ದನು. ಮಧುಸೂದನನು ಸೇವಕನ ವೇಷದಲ್ಲಿದ್ದ ವಿದೇಶಿಯನ್ನು ನೋಡಿ ಈ ಮುದಿಗೂಬೆಯು ಆರಿರಬಹುದೆಂದು ತನ್ನಲ್ಲಿ ತಾನೆಯೇ ಚಿಂತಿಸುತಿದ್ದನು. ಚಿಂತಿಸುತಿದ್ದ ಹಾಗೆಯೇ ಮಧುಸೂದನನಿಗೆ ವ್ರಜವಿಹಾರಿಯಲ್ಲಿ ಒಂದು ಬಗೆಯ ಅಸೂಯೆಯು ತಲೆದೋರಿತು. ಕಾರಣವೇನೆಂದರೆ—ಚೌಧುರಿಯು ಮೋಹನನೊಡನೆ ಕೆಲಸದ ಮೇಲೆ ಹೊರಟುಹೋದ ಕಾಲದಲ್ಲಿ ಮಧುಸೂದನನು ಸ್ವರ್ಣಕುಮಾರಿಯೊಡನೆ ಏಕಾಂತದಲ್ಲಿ ಸರಸಸಲ್ಲಾಪಗಳನ್ನು ಮಾಡಬೇಕೆಂದು ಬಯಸಿ ಬಂದನು. ಮನೆಯಲ್ಲಿ ಈ ಮುದುಕನು ಸೇರಿಕೊಂಡಿದ್ದುದರಿಂದ ತನ್ನ ಉದ್ದೇಶಕ್ಕೆ ಕುಂದುಂಟಾಯಿತೆಂದು ತಿಳಿದು ಮಧುಸೂದನನು ಲಾಲಮಹಾಶಯನನ್ನು ಅಂತರ್ಯದಲ್ಲಿ ದ್ವೇಷಿಸಿ ಶಪಿಸಲಾರಂಭಿಸಿದನು. ವ್ರಜವಿಹಾರಿಯು ಮಧುಸೂದನನನ್ನು ಒಂದೆರಡು ಸಲ ದೃಷ್ಟಿಯಿಟ್ಟು ನೋಡಿದನು. ಈ ಸಂದರ್ಭದಲ್ಲಿ ಚೌಧುರಿ ಮಹಾಶಯನು ವ್ರಜವಿಹಾರಿಲಾಲನಿಗೆ ಮಧುಸೂದನನ ಪರಿಚಯವನ್ನುಂಟುಮಾಡಿಕೊಟ್ಟನು. ಬಳಿಕ ಲಾಲಮಹಾಶಯನು ನಗುನಗುತೆ, "ಬಹು ಸಂತೋಷವಾಯಿತು" ಎಂದು ಹೇಳಿ, ಮಧುಸೂದನನನ್ನು ಕುರಿತು "ಆವಾಗ ಬಂದುದು" ಎಂದು ಕೇಳಿದನು. ಅದಕ್ಕೆ "ಈಗ ತಾನೇ ವಿದ್ಯಾನಗರದಿಂದ ಬಂದೆನು," ಎಂದು ಮಧುಸೂದನನು ಉತ್ತರ ಕೊಟ್ಟನು.

ಮಧುಸೂದನನಿಗೂ ವ್ರಜವಿಹಾರಿಲಾಲನಿಗೂ ಬಲುಹೊತ್ತು ಬಗೆಬಗೆಯ ಮಾತು ಕತೆಗಳು ನಡೆದ ಬಳಿಕ ಮಧುಸೂದನನು ಮಾತಿನ ಸಂದರ್ಭದಲ್ಲಿ ಗಂಗಾ ತೀರದಲ್ಲಿರುವ ಪ್ರಸಿದ್ಧವಾದ ದೇವದುರ್ಗವೆಂಬ ಜಹಗೀರು ಮಾರಾಟಕ್ಕೆ ಸಿದ್ಧ ವಾಗಿರುವುದು, ಎಂದು ಹೊಸ ಸಮಾಚಾರವನ್ನು ತಿಳಿಸಿದನು.

ಚೌಧುರಿಯು ಇದನ್ನು ಕೇಳಿ, "ದೇವದುರ್ಗವು ಮಾರಾಟಕ್ಕೆ ಸಿದ್ಧ ವಾಗಿರುವುದೇ? ಇದು ನನಗೆ ತಿಳಿದೇ ಇರಲಿಲ್ಲ. ಜಹಗೀರಿನ ಮೇಲೆ ಅಪರಿಮಿತ ವಾಗಿ ಸಾಲವಿರುವುದೆಂದು ಮಟ್ಟಿಗೆ ಕೇಳಿದ್ದೆನು. ಮಧು, ಈ ಸುದ್ದಿಯನ್ನು ನಿನಗೆ ತಿಳಿಸಿದವರಾರು?" ಎಂದು ಕೇಳಿದನು.

ಮಧುಸೂದನನು "ಇದೇನು ಮಾಮಯ್ಯ, ಹೀಗೆ ಕೇಳುವಿರಿ? ಎಲ್ಲೆಲ್ಲಿಯೂ ಈ ಸುದ್ದಿಯು ಜನಜನಿತವಾಗಿರುವುದಲ್ಲಾ! ನಿಮಗೆ ಇದು ಗೊತ್ತಿಲ್ಲದಿರುವುದು ಆಶ್ಚರ್ಯವೇ ಸರಿ," ಎಂದನು.

ಇಷ್ಟು ಹೊತ್ತಿಗೆ ಸರಿಯಾಗಿ ಸ್ವರ್ಣಕುಮಾರಿಯು ಬಂದು "ಊಟಕ್ಕೆ ಎಲ್ಲವೂ ಸಿದ್ಧವಾಗಿರುವುದು" ಎಂದು ಹೇಳಿ ಹೊರಟು ಹೋದಳು. ಆಮೇಲೆ ಚೌಧುರಿಯು ಮಾತುಕತೆಗಳನ್ನು ನಿಲ್ಲಿಸಿ ಮಧುಸೂದನನನ್ನೂ ಲಾಲಮಹಾ ಶಯನನ್ನೂ ಜತೆಯಲ್ಲಿ ಕರೆದುಕೊಂಡು ಭೋಜನಶಾಲೆಗೆ ತೆರಳಿದನು. ಅದೇ ಕಾಲದಲ್ಲಿ ಮೋಹನನು ತೋಟದಿಂದ ಮನೆಗೆ ಬಂದವನು ತನ್ನ ಕೋಣೆಯೊಳಗೆ ಹೋಗಿ ಬಾಗಿಲನ್ನು ಹಾಕಿಕೊಂಡು ಮಲಗಿದನು. ಮನೆಗೆ ಬಂದೊಡನೆಯೇ ಅವನ ಉದ್ದೇಶವು ಊಟಮಾಡಕೂಡದೆಂಬುದಾಗಿದ್ದಿತು. ಅವನಿಗೆ ಮನಸ್ಸಿನ ವ್ಯಸನದಿಂದ ಊಟಮಾಡುವುದರಲ್ಲಿ ಅಭಿರುಚಿಯೂ ಇರಲಿಲ್ಲ; ಆದರೂ ತನ ಗುಂಟಾಗಿರುವ ಅಸಮಾಧಾನವು ಎಲ್ಲರಿಗೂ ಗೊತ್ತಾಗಿ ಹೋದೀತೆಂಬ ಭಯ ದಿಂದ ಮೋಹನನು ಆರಿಂದಲೂ ಕರೆಯಿಸಿಕೊಳ್ಳದೆಯೇ ಎಲ್ಲರೊಡನೆಯೂ ಭೋಜನಕ್ಕೆ ಕುಳಿತನು.

ಊಟಮಾಡುವ ಸಂದರ್ಭದಲ್ಲಿ ಚೌಧುರಿ ಮಹಾಶಯನು ಮಧುಸೂದನನಿಗೆ "ಇವನೇ ಮೋಹನನು" ಎಂದು ತಿಳಿಸಿದನು.

"ಮೋಹನನೇ!" ಎಂದು ಹೇಳಿ ಮಧುಸೂದನನು ಸುಮ್ಮನಾದನು. ಆಹಾರಪದಾರ್ಥಗಳನ್ನು ಬಡ್ಡಿಸುತಿದ್ದ ಸ್ವರ್ಣಕುಮಾರಿಯು ಈ ಉದಾಸೀನದ ಧ್ವನಿಯನ್ನು ಕೇಳಿ ಮುಖವನ್ನು ಸಣ್ಣಗೆ ಮಾಡಿಕೊಂಡಳು. ಚೌಧುರಿ ಮಹಾ ಶಯನು ದಿಕ್ಕಿಲ್ಲದ ಹುಡುಗನನ್ನು ಸಾಕಿಕೊಂಡಿರುವನೆಂಬ ಮನೋಭಾವನೆಯನ್ನು ಮಧುಸೂದನನು ತನ್ನ ತಿರಸ್ಕಾರದ ಧ್ವನಿಯಿಂದ ಸೂಚಿಸಿದುದನ್ನು ಮೋಹನನು

ಅರಿತವನಾದರೂ, ಅವನು ಅದರಿಂದ ಕೊಂಚವಾದರೂ ವ್ಯಸನಪಡಲಿಲ್ಲ. ಸ್ವರ್ಣ ಕುಮಾರಿಯು ತೋರಿಸಿದ ಉಪೇಕ್ಷೆಗಿಂತಲೂ ಇದೇನೂ ಮಹತ್ತರವಾದುದಲ್ಲ ವೆಂಬುದೇ ಮೋಹನನು ವ್ಯಸನಪಡದಿರುವುದಕ್ಕೆ ಕಾರಣವು. ವ್ಯಸನವನ್ನು ಮನಸ್ಸಿಗೆ ತಂದುಕೊಳ್ಳದಿದ್ದರೂ, ಅದು ಒಳಗೆಯೇ ಸೇರಿಕೊಂಡು ಮನುಷ್ಯ ನನ್ನು ಸುಟ್ಟು ಬೂದಿಮಾಡುವುದು. ಮಧುಸೂದನನ ತಿರಸ್ಕಾರಸೂಚಕವಾದ ಮಾತು ಆರಿಗೂ ತಿಳಿಯದೇ ಇರಲಿಲ್ಲ. ಸಾಧುಸ್ವಭಾವದ ಚೌಧುರಿ ಮಹಾ ಶಯನೂ ಇದನ್ನು ಕೇಳಿ ಅತಿಯಾಗಿ ಕತಿಗೊಂಡನು. ಇದೆಲ್ಲವನ್ನೂ ನೋಡುತಿದ್ದ ಲಾಲಮಹಾಶಯನು ಎಲ್ಲರ ಮನೋಭಾವಗಳನ್ನೂ ಬೇರೆಯ ಕಡೆಗೆ ತಿರುಗಿಸು ವುದಕ್ಕಾಗಿ ಲೋಕದ ಸಾಮಾನ್ಯವಿಷಯಗಳನ್ನಧಿಕರಿಸಿ ಮಾತನಾಡ ತೊಡಗಿದನು. ವ್ರಜವಿಹಾರಿಯು ಆಕಸ್ಮಾತ್ತಾಗಿ ಎತ್ತಿದ ಬೇರೆಯ ಮಾತಿನ ಪ್ರಕ್ರಮದಿಂದ, ಮೋಹನನ ವಿಷಯದಲ್ಲಿ ತಾನು ತೋರಿಸಿದ ಅಪರಾಗವು ಎಲ್ಲರಿಗೂ ಅಸಮಾ ಧಾನವನ್ನುಂಟುಮಾಡಿತೆಂದು ಮಧುಸೂದನನು ತಿಳಿದು ಮುಂದಣ ಮಾತುಕತೆ ಗಳಲ್ಲಿ ಬಲು ಎಚ್ಚರಿಕೆಯಿಂದಿರುತಿದ್ದನು.

ಎಲ್ಲರಿಗೂ ಭೋಜನವಾಯಿತು. ಭೋಜನಾನಂತರದಲ್ಲಿ ಎಲ್ಲರೂ ಹೊರಗಣ ಹಜಾರದಲ್ಲಿ ಬಂದು ಕುಳಿತರು. ಮೋಹನನೂ ಅವರ ಜತೆಯಲ್ಲಿಯೇ ಬಂದು ಕುಳಿತನು. ಎಲ್ಲರಿಗೂ ತಾಂಬೂಲ ಸೇವನೆಯಾಯಿತು ; ಬಳಿಕ ವೃದ್ಧರಿಬ್ಬರೂ ವಿಶ್ರಾಂತಿಯನ್ನು ತೆಗೆದುಕೊಳ್ಳುವುದಕ್ಕಾಗಿ ಎದ್ದರು. ಉತ್ತರಕ್ಷಣದಲ್ಲಿಯೇ ಯುವಕರಿಬ್ಬರೂ ಎದ್ದು ನಿಂತರು. ಆಗ ಚೌಧುರಿಯು ಮಧುಸೂದನನನ್ನು ನೋಡಿ, " ಮಧು, ಮೊಹನನು ಬೇರೆಯವನಲ್ಲ, ಅವನು ನಮ್ಮ ಸಂಸಾರಕ್ಕೆ ಸೇರಿ ಹೋಗಿರುವನು. ಅವನನ್ನು ನಾನು ಮಗನಂತೆಯೇ ಕಾಪಿಡುತ್ತಿರುವೆನು. ನನಗೆ ಗಂಡುಮಕ್ಕಳಿಲ್ಲದಿರುವುದರಿಂದ, ಅವನೇ ನನಗೆ ಮಗನು," ಎಂದು ಹೇಳಿದನು. ಈ ಮಾತನ್ನು ಕೇಳಿದ ಮಧುಸೂದನನು ನಾಚುಗೆಯಿಂದ ತಲೆವಾಗಿದವನಾಗಿ, " ಮಾಮಯ್ಯ ! ನನಗೆ ಇಷ್ಟುದೂರ ತಿಳಿದಿರಲಿಲ್ಲ, ಒಂದು ವೇಳೆ ನನ್ನಮಾತಿನಲ್ಲಿ ಅಸಮಾಧಾನಕ್ಕೆ ಕಾರಣವೇನಾದರೂ ಕಂಡು ಬಂದಿದ್ದಲ್ಲಿ, ಅದನ್ನು ನೀವು ಮನಸ್ಸಿಗೆ ತೆಗೆದುಕೊಳ್ಳಬಾರದು. ನಾನು ಆವ ದುರಭಿಪ್ರಾಯದಿಂದಲೂ ಮಾತನಾಡತಕ್ಕವನಲ್ಲ," ಎಂದು ವಿನಯೋಕ್ತಿಗಳನ್ನಾಡಿದನು.

ಲಾಲ ಮಹಾಶಯನು ಈ ಮಾತುಗಳನ್ನು ಕೇಳಿದ ಕೂಡಲೆ ಮಧುಸೂದನ ನನ್ನು ಮೇಲಿನಿಂದ ಕೆಳಕ್ಕೂ ಕೆಳಗಿನಿಂದ ಮೇಲಕ್ಕೂ ಒಂದೆರಡು ಸಲ ದುರದುರನೆ ನೋಡಿದನು. ಬಳಿಕ ಎಲ್ಲರೂ ತಮ್ಮ ತಮ್ಮ ಕೋಣೆಗೆ ತೆರಳುವವರಾದರು. ಸ್ವರ್ಣ ಕುಮಾರಿಯು ಭೋಜನೋತ್ತರದಲ್ಲಿ ತನ್ನ ಕೋಣೆಯಲ್ಲಿ ಕುಳಿತುಕೊಂಡು ಮೋಹನ

ನಿಗೂ ಮಧುಸೂದನನಿಗೂ ಇರುವ ತಾರತಮ್ಯವನ್ನು ಕುರಿತು ಚಿಂತಿಸತೊಡಗಿದಳು.

“ ಮೋಹನನು ದಿಕ್ಕಿಲ್ಲದ ದರಿದ್ರ ಯುವಕನು, ಅವನ ನಡೆನುಡಿಗಳು ಹಳ್ಳಿಯವರಿಗೆ ತಕ್ಕುವಾಗಿರುವುವು. ಮಧುಸೂದನನಾದರೋ ಅಗರ್ಭ ಶ್ರೀಮಂತನು. ಅವನ ವೇಷಭೂಷೆಗಳನ್ನು ನೋಡಿದರೆ ಎಷ್ಟೋ ಸಂತೋಷವಾಗುವುದು. ಮೋಹನನ ರೂಪಕ್ಕಿಂತಲೂ ಮಧುಸೂದನನ ರೂಪವೇ ನನಗೆ ಮೋಹಜನಕವಾಗುತ್ತಿರುವುದು. ಮಧುಸೂದನನು ಮಾತಿನಲ್ಲಿ ಜಾಣನೂ, ವಿದ್ಯಾಬುದ್ಧಿಗಳಲ್ಲಿ ಅತಿ ನಿಪುಣನೂ ಆಗಿರುವನು. ಹೀಗಿರಲಿಕ್ಕಾಗಿ ಮಧುಸೂದನನು ಮೋಹನನಿಗಿಂತಲೂ ಶತಾಂಶದಿಂದ ಅಧಿಕನೆಂದೇ ಹೇಳಬೇಕು. ಮೋಹನನು ತನ್ನ ಯೋಗ್ಯತೆಯನ್ನರಿಯದೆ ಕಿರಿಕಿರಿಪಟ್ಟು ಕೊಳ್ಳುವುದಾದರೆ ನಾನೇನ ಮಾಡುವುದಕ್ಕಾದೀತು? ದರಿದ್ರನಲ್ಲಿ ಏನಿದ್ದರೇನು ಪ್ರಯೋಜನ? ಒಂದು ವೇಳೆ ಗುಣಗಳಿವೆಯೆಂದೇ ಭಾವಿಸುವ. ದರಿದ್ರನ ಗುಣಗಳು ಆವ ಕೆಲಸಕ್ಕೆ ಬಂದಾವು? ಅಲ್ಲದೆಯೂ ದರಿದ್ರನ ವಿದ್ಯಾಬುದ್ಧಿಗಳು ಅವನ ದುಃಖವನ್ನು ಹೆಚ್ಚಿಸುವುವೇ ಹೊರತು ಸುಖವನ್ನುಂಟುಮಾಡತಕ್ಕುವುಗಳಲ್ಲ. ಆದುದರಿಂದ ಮೋಹನನು ಮಧುಸೂದನನಿಗೆ ಸಾಟಿಯಾಗುವುದೆಂದರೇನು? ಮೋಹನನೇನೋ ತನಗೆ ಸಮಾನರಿಲ್ಲವೆಂದು ತಿಳಿದುಕೊಂಡಿರಬಹುದು. ತಿಳಿವಳಿಕೆಗೂ ನಡೆವಳಿಕೆಗೂ ಎಷ್ಟೋ ಭೇದವಿರುವುದು. ನಾನು ಇಬ್ಬರನ್ನೂ ತೂಗಿ ನೋಡಿದ್ದರಲ್ಲಿ, ನನ್ನ ಮನವು ಮಧುಸೂದನನ ಕಡೆಗೇ ಎಳೆವುದು; ನನ್ನ ಕಣ್ಣುಗಳು ಆತನನ್ನು ನೋಡಬೇಕೆಂದೇ ತವಕಪಡುತ್ತಿರುವುವು. ಅದುಕಾರಣ ಮೋಹನನು ನನ್ನನ್ನು ಪ್ರೀತಿಸುವುದಾದರೂ, ನನ್ನ ಮನವು ಮಧುಸೂದನನ್ನು ಪ್ರೀತಿಸಬೇಕೆಂಬುದರಲ್ಲಿಯೇ ಮುಂದುವರಿಯುತ್ತಿರುವುದು.

---

## ಐದನೆಯ ವಿಲಾಸ

### ದೇವದುರ್ಗ

ಗೋವಿಂದಚಂದ್ರ ಚೌಧುರಿಯು ಅತಿ ಸರಳ ಹೃದಯನೆಂಬುದನ್ನು ನಾವು ಮೊದಲೇ ತಿಳಿಸಿರುವೆವು. ಇತರರಾರಾದರೂ ಕಷ್ಟದಲ್ಲಿರುವುದಾದರೆ ಆತನ ಮನಸ್ಸು ತಳಮಳಗುಟ್ಟುತ್ತಲೇ ಇರುವುದು. ತನ್ನ ದುಃಖವನ್ನಾದರೂ ಗಣನೆಗೆ ತಾರದೆ, ಪರರ ದುಃಖದಲ್ಲಿ ದುಃಖಿತನಾದ ಗೋವಿಂದ ಚಂದ್ರನಂತಹವರು ಲೋಕದಲ್ಲಿ ಅತಿ ವಿರಳರು. ಈಗಣ ಪ್ರಪಂಚದಲ್ಲಿ ಎಲ್ಲೆಲ್ಲಿ ನೋಡಿದರೂ ಸ್ವಾರ್ಥಪರಾಯಣರೇ ತುಂಬಿ ಹೋಗಿರುವರು. ಆರೂ ಸ್ವಾರ್ಥಪರಾಯಣರಾಗಿರ ಕೂಡ

ದೆಂದು ನಮ್ಮ ತಾತ್ಪರ್ಯವಲ್ಲ. ಇತರರನ್ನು ಹಾಳುಮಾಡಿಯಾದರೂ ಬದುಕ ಬೇಕೆಂಬ ಮಹಾಮಹಿಮರು ಲೋಕದ ಏಳಿಗೆಗೆ ಪ್ರತಿಬಂಧಕ ಸ್ವರೂಪರು. ಇಂತಹವರಿಂದ ಪ್ರಪಂಚಕ್ಕೆ ಆವ ಬಗೆಯ ಪ್ರಯೋಜನವೂ ಇಲ್ಲದಿರುವುದ ರಿಂದ, ಇಂತಹವರು ಸಾಧ್ಯವಾದಷ್ಟು ಬೇಗನೆ ಲೋಕಾಂತರವನ್ನೈಯ್ದುವುದೇ ಮೇಲು. ಈ ವಿಷಯದಲ್ಲಿ ಕವಿಯು ಹೇಳಿರುವುದೇನೆಂದರೆ—

ತೇ ವೈ ಸತ್ಪುರುಷಾಃ ಪರಾರ್ಥಘಟಕಾಃ ಸ್ವಾರ್ಥಾನ್ ಪರಿತ್ಯಜ್ಯ ಯೇ ।
ಸಾಮಾನ್ಯಾಸ್ತು ಪರಾರ್ಥ ಮುದ್ಯ ಮಭೃತಃ ಸ್ವಾರ್ಥಾ ವಿರೋಧೇನ ಯೇ॥
ತೇ ಮೀ ಮಾನುಷ ರಾಕ್ಷಸಾಃ ಪರಹಿತಂ ಸ್ವಾರ್ಥಾಯ ನಿಘ್ನಂತಿ ಯೇ ।
ಯೇ ತು ಘ್ನಂತಿ ನಿರರ್ಥಕಂ ಪರಹಿತಂ ತೇ ಕೇ ನ ಜಾನೀಮಹೇ ॥

ಮೇಲೆ ಹೇಳಿದ ಶ್ಲೋಕದ ಅಭಿಪ್ರಾಯದಂತೆ ಚೌಧುರಿ ಮಹಾಶಯನು ಸತ್ಪುರುಷರ ಪರಂಪರೆಯಲ್ಲಿ ಗಣನೀಯನಾಗಿದ್ದನು. ಇಷ್ಟೇ ಅಲ್ಲದೆ ಚೌಧುರಿ ಯಲ್ಲಿ ಆರು ಏನ ಹೇಳಿದರೂ ಅದನ್ನು ನಿಜವೆಂದೇ ನಂಬುವ ಸ್ವಭಾವವೊಂ ದಿದ್ದಿತು. ಈ ಸ್ವಭಾವದಿಂದ ಸಮಯದಲ್ಲಿ ಉಪಕಾರವೂ ಉಂಟು, ಅಪಕಾರವೂ ಉಂಟು. ಇಂತಹ ದ್ವೈವಿಧ್ಯದ ಸ್ವಭಾವವನ್ನು ಗುಣದಲ್ಲಿ ಸೇರಿಸಬೇಕೆ? ದೋಷದಲ್ಲಿ ಸೇರಿಸಬೇಕೆ? ಬಲ್ಲವರು ಈ ವಿಷಯದಲ್ಲಿ ಇನ್ನೂ ಮೌನಭಾವ ವನ್ನೇ ಅವಲಂಬಿಸಿರುವರು. ನಾವಾದರೋ ಇದನ್ನು ಗುಣ ಪರಂಪರೆಯಲ್ಲಿಯೇ ಸೇರಿಸಿ ಪಠನಮಾಡುವೆವು. ಲೋಕಾನುಭವಿಗಳಾರಾದರೂ ಇದನ್ನು ದೋಷ ವೆಂದು ಸಾಧಿಸುವುದಾದರೆ, ಚಂದ್ರನ ಸ್ಪೃಹಣೀಯವಾದ ಅನೇಕ ಗುಣಗಳಲ್ಲಿ ಕಳಂಕವು ಹೇಗೆ ದೋಷವಾಗಿ ಕಾಣಿಸುವುದಿಲ್ಲವೋ, ಹಾಗೆಯೇ ಚೌಧುರಿಯ ಗುಣಗಳ ಮಧ್ಯದಲ್ಲಿ ಈ ಎಲ್ಲರನ್ನೂ ನಂಬತಕ್ಕ ಸ್ವಭಾವವೆಂಬ ದೋಷವು ಎಲ್ಲಿ ಯೋ ಅಡಗಿಯೇ ಹೋಗುವುದು. ಲೋಕದ ಪರಿಸ್ಥಿತಿಯನ್ನು ಪರಿಕಿಸಿ ನೋಡು ವಲ್ಲಿ ತಿಳಿದುಬರುವುದೇನೆಂದರೆ—ಸಜ್ಜನನು ಎಲ್ಲರನ್ನೂ ಒಳ್ಳೆಯವರನ್ನಾಗಿಯೇ ಭಾವಿಸುವನು ; ದುರ್ಜನನಾದರೋ ದುಷ್ಟರನ್ನಾಗಿಯೇ ಭಾವಿಸುವನು. ಇದರ ಫಲಾಫಲಗಳ ವಿಷಯಗಳನ್ನು ಜನರೇ ನೋಡಿಕೊಳ್ಳುವರು. ಒಳ್ಳೆಯ ಸ್ವಭಾವ ದವನಿಗೆ ಭಗವಂತನ ದಯೆಯುಂಟು. ಒಳ್ಳೆಯ ಸ್ವಭಾವವು ಮೊದಮೊದಲಲ್ಲಿ ನಷ್ಟಕಷ್ಟಗಳಿಗೀಡಾದರೂ ಪರಿಣಾಮದಲ್ಲಿ ವಿಜಯ ಗೌರವವನ್ನೇ ಹೊಂದುವುದು.

ಇಂತಹ ಲೋಕೋತ್ತರವಾದ ಸ್ವಭಾವವುಳ್ಳ ನಮ್ಮ ಚೌಧುರಿ ಮಹಾ ಶಯನು ಮರುದಿನ ಬೆಳಗ್ಗೆ ಮಧುಸೂದನನನ್ನು ಕರೆದುಕೊಂಡು ಹೂದೋಟದ ಕಡೆಗೆ ಹೊರಟನು. ದಾರಿಯಲ್ಲಿ ಬೇಕಾದ ಹಾಗೆ ಮಾತುಕತೆಗಳು ನಡೆದ ಬಳಿಕ ಮಧುಸೂದನನು ಚೌಧುರಿಯನ್ನು ಸಂಬೋಧಿಸಿ, “ನನ್ನ ಸೋದರ ಸೊಸೆ

ಯರ ಗಂಡಂದಿರ ಲಕ್ಷಣವನ್ನು ಏನೆಂದು ಹೇಳಲಿ? ಅವರೂ ದುರ್ಮಾರ್ಗಿಗಳೇ ಆಗುತ್ತಿರುವರು. ಅಂತೂ ನಮ್ಮ ಕುಲದವರೆಲ್ಲರೂ ಕೆಟ್ಟು ಹಾಳಾಗಿ ಹೋಗುವ ಹೊತ್ತು ಬಂದಿತು," ಎಂದನು. ಇದನ್ನು ಕೇಳಿ ಚೌಧುರಿಯು ಬಲು ಹೊತ್ತು ವ್ಯಸನದಿಂದ ಸುಮ್ಮನಿದ್ದು ಬಳಿಕ ಸ್ವರ್ಣಕುಮಾರಿಯನ್ನು ಮೋಹನನಿಗೆ ಕೊಟ್ಟು ವಿವಾಹ ಮಾಡಬೇಕೆಂದು ತಾನು ಸಂಕಲ್ಪಮಾಡಿರುವುದನ್ನು ತಿಳಿಸಿದನು. ಮಧುಸೂದನನು ಇದನ್ನು ಕೇಳಿದ ಕೂಡಲೆ ಎದೆಯೊಡೆದು ನಿಂತನು.

ಮಧುಸೂದನನು ತನ್ನ ಉದ್ದೇಶಕ್ಕೆ ಜಲಾಂಜಲಿ ಕೊಡುವ ಯೋಗವು ಒದಗಿ ಬಂದಿರುವುದನ್ನು ಕಂಡು ಬಲುಹೊತ್ತು ವ್ಯಸನಪಟ್ಟುಕೊಂಡವನಾಗಿ, ತನ್ನ ಮನೋಭಾವವನ್ನು ಬಹಿರಂಗ ಪಡಿಸದೆ "ಮಾಮಯ್ಯ, ನನ್ನ ದೊಡ್ಡಪ್ಪನವರಾದ ಕಮಲಾಕಾಂತರಾಯರು ಮಾಯವಾಗಿ ಇಂದಿಗೆ ಎಷ್ಟೋ ವರ್ಷಗಳಾಗಿ ಹೋಯಿತೆಂದು ಕೇಳುವೆನು. ಅವರು ಎಲ್ಲಿಯಾದರೂ ಇನ್ನೂ ಬದುಕಿರುವ ಸಂಭವವುಂಟೆ?" ಎಂದು ಆದರದಿಂದ ಕೇಳಿದನು.

ಚೌಧುರಿ—ಅವರು ಇನ್ನೂ ಬದುಕಿರುವುದೆಂದರೇನು? ಬದುಕಿರತಕ್ಕವನು ಎಂದಾದರೊಂದು ದಿನ ತನ್ನ ತೌರೂರಿಗೆ ಬರದೇ ಇರುವನೇ? ಇಲ್ಲವೆ, ಯೋಗಕ್ಷೇಮದ ಪತ್ರವನ್ನಾದರೂ ಬರೆಯುವುದಿಲ್ಲವೇ? ಕಮಲಾಕಾಂತರಾಯನು ನಿಜವಾಗಿಯೂ ಬದುಕಿಲ್ಲವೆಂದೇ ನನ್ನ ನಂಬುಗೆಯು. ಪರದೇಶವಾಸಿಯಾದವನ ಸುದ್ದಿಯು ಹನ್ನೆರಡು ವರ್ಷಗಳ ವರೆಗೂ ತಿಳಿಯದಿದ್ದಲ್ಲಿ ಅವನ ಆಸೆಯನ್ನು ಬಿಟ್ಟು ಆತನ ವಿಷಯದಲ್ಲಿ ಶಾಸ್ತ್ರೋಕ್ತವಾದ ಶ್ರಾದ್ಧವಿಧಿಯನ್ನು ಅವಲಂಬಿಸತಕ್ಕದೆಂದು ಬಲ್ಲವರು ನುಡಿವರು. ಹೀಗಿರುವಲ್ಲಿ ಇಪ್ಪತ್ತು ಮೂವತ್ತು ವರ್ಷಗಳ ವರೆಗೂ ಗೋಚರಿಸದ ಮನುಷ್ಯನು ಜೀವವಂತನಾಗಿರುವನೆಂದು ಹೇಳುವುದು ಹೇಗೆ ಸಾಧ್ಯ?

ಮಧುಸೂದನ—ನೀವು ಹೇಳುವುದೆಲ್ಲವೂ ನಿಜವಾಗಿಯೇ ತೋರುವುದು. ಈಗ ಅವರ ಸುದ್ದಿಯನ್ನು ಕಟ್ಟಿಕೊಂಡು ನಮಗಾಗುವುದೇನು? ಮಾಮಯ್ಯ, ಹಾಗಾದರೆ ಕುಮಾರಿಯನ್ನು ಮೋಹನನಿಗೆ ಕೊಟ್ಟು ವಿವಾಹ ಮಾಡುವುದೇ ನಿಶ್ಚಯವಾಗಿರುವುದು. ಸ್ವರ್ಣಕುಮಾರಿಯು ಇದಕ್ಕೆ ಒಪ್ಪಿರುವಳಷ್ಟೇ?

ಚೌಧುರಿ—ಅವಳು ಒಪ್ಪಲಿ, ಒಪ್ಪದಿರಲಿ. ಅವಳು ನನಗೆ ಒಬ್ಬಳೇ ಮಗಳು. ಅವಳು ಹೇಗಾದರೂ ಸುಖವಾಗಿರಬೇಕೆಂಬುದೇ ನನ್ನ ಆಸೆ. ಹೀಗಿರುವಲ್ಲಿ ನಾನು ಆಕೆಯ ತಲೆಯ ಮೇಲೆ ಕಲ್ಲ ಹಾಕುವೆನೇ? ಇದು ಅವಳಿಗೆ ತಿಳಿಯದೇ? ನಮ್ಮ ಹುಡುಗಿಯು ಬುದ್ಧಿಮತಿ; ಅವಳಲ್ಲಿ ವಯಸ್ಸಿಗೆ ಮೀರಿದ

ಲೋಕಾನುಭವವಿರುವುದು. ಈ ವಿಷಯದಲ್ಲಿ ಕೆಲವು ದಿನಗಳ ಹಿಂದೆ ನಡೆದ ಒಂದು ಅಪೂರ್ವ ಸಂಗತಿಯನ್ನು ತಿಳಿಸುವೆನು, ಕೇಳು. ನೀನು. ಲಾಲ ಮಹಾಶಯನನ್ನು ನೋಡಿರುವೆಯಷ್ಟೇ. ಆತನು ಒಂದು ಬಗೆಯ ಸ್ವಭಾವದವನಾದರೂ, ಆರಲ್ಲಿ ಹೇಗಿರಬೇಕೋ ಅದನ್ನು ಚೆನ್ನಾಗಿಯೂ ತಿಳಿದಿರುವನು.

ಮಧು—ನಾನು ಮೊದಲು ನೋಡಿದೊಡನೆಯೇ ಆತನು ಉದಾರ ಸ್ವಭಾವವುಳ್ಳವನೆಂದೂ ಸರಳ ಹೃದಯನೆಂದೂ ತಿಳಿದುಕೊಂಡೆನು. ಅಪೂರ್ವ ಸಂಗತಿಯೇನೆಂಬುದನ್ನು ತಿಳಿಸೋಣವಾಗಲಿ.

ಚೌಧುರಿ—ಅದನ್ನೇ ಹೇಳುವುದಕ್ಕೆ ಬಂದೆನು. ವ್ರಜನಿಹಾರಿಯು ಇಲ್ಲಿಗೆ ಬಂದ ದಿವಸ ರೋಗದಿಂದ ಅತಿಯಾಗಿ ಸಂಕಟಪಡುತಿದ್ದನು. ಆಗ ಕುಮಾರಿಯು ಹಗಲಿರುಳೂ ಆತನ ಸೇವೆಯನ್ನು ಮಾಡ ತೊಡಗಿದಳು. ವೃದ್ಧ ಮಹಾಶಯನಿಗೆ ಆರೋಗ್ಯಲಾಭವುಂಟಾದ ಬಳಿಕ, ಆತನು ತನ್ನ ಪ್ರಾಣವುಳಿಸಿದ ಸಂತೋಷಕ್ಕಾಗಿ ಕುಮಾರಿಗೆ ರತ್ನಾಭರಣವನ್ನು ಕೊಡುವುದಕ್ಕೆ ಹೋದನು. ಸ್ವರ್ಣಕುಮಾರಿಯು ಹಳ್ಳಿಯ ಹುಡುಗಿಗೆ ಇಂತಹ ಆಭರಣಗಳಿಂದ ಆವ ಪ್ರಯೋಜನವೂ ಕಂಡುಬರುವುದಿಲ್ಲವೆಂದು ಹೇಳಿ ರತ್ನಾಭರಣವನ್ನು ತಿರಸ್ಕರಿಸಿ ಬಿಟ್ಟಳು.

ಮಧು—ನಿಜವಾಗಿಯೂ ಸ್ವರ್ಣಕುಮಾರಿಯು ಗುಣವಂತೆ. ಆ ವಿಷಯದಲ್ಲಿ ಆರೂ ಸಂಶಯಪಡುವಂತಿಲ್ಲ. ಈ ಸಂಗತಿಯು ಮೊದಲಿನಿಂದಲೂ ತಿಳಿದಿರುವುದೇ. ಅದಂತಿರಲಿ. ಲಾಲಮಹಾಶಯರು ನೋಡುವುದಕ್ಕೆ ಸಾಯುವಂತಿರುವರು. ಉಡುಗೆ ತೊಡುಗೆಗಳನ್ನು ನೋಡಿದರಂತೂ, ಅವರು ಮನೆಯಾಳಿನಂತೆಯೇ ಕಾಣುವರು. ತಿನ್ನುವುದಕ್ಕೆ ಮಾರ್ಗವಿಲ್ಲದೆ ಕಾರಣಾಂತರವನ್ನು ಹೇಳಿಕೊಂಡು ದಿನಗಳನ್ನು ಕಳೆಯುವಂತೆ ಕಾಣುವುದು. ಇಂತಹವರಲ್ಲಿ ಬೆಲೆಯಾಗುವ ಒಡವೆ ಯೆಂದರೇನು ?

ಚೌಧುರಿ—ಲಾಲ ಮಹಾಶಯನು ಈಗ ದರಿದ್ರನಾಗಿಯೇ ತೋರಿಕೊಳ್ಳುವನು. ಐಶ್ವರ್ಯವಂತರು ಹಣವನ್ನು ಕಳೆದುಕೊಂಡು ದರಿದ್ರರಾಗುವುದುಂಟು. ಬಹುತರವಾಗಿ ಈತನೂ ಮೊದಲು ಹಣಗಾರನಾಗಿದ್ದು ಈಗ ದರಿದ್ರನಾಗಿರುವನೆಂದು ನಾನು ಊಹಿಸುವೆನು. ಒಡವೆಯು ಕೈ ನಡೆಯುತಿದ್ದಾಗ ಕೊಂಡುದಿರಬಹುದೆಂದು ನಾನು ತಿಳಿದುಕೊಂಡಿದ್ದೆನು. ನಮ್ಮ ಹುಡುಗಿಯು ಹೇಳಿದುದರಲ್ಲಿ ಆ ನಗವು ಅತಿ ನೂತನವೆಂದು ಗೊತ್ತಾಯಿತು. ಆದುದರಿಂದ ನನಗೂ ಈ ವಿಷಯದಲ್ಲಿ ಆಶ್ಚರ್ಯವೇ ತೋರುತ್ತಿರುವುದು. ಇದರಲ್ಲಿ ಏನು ತತ್ತ್ವವಿರುವುದೋ ದೇವರೊಬ್ಬನೇ ಬಲ್ಲನು.

ಮಧು—ನನಗೇನೋ ಇದರಲ್ಲಿ ಮೊದಲಿನಿಂದಲೂ ಸಂಶಯವೇ ತೋರಿ ಬರುತ್ತಿರುವುದು.

ಚೌಧುರಿ—ಲಾಲಮಹಾಶಯನ ವಿಷಯವು ನಮಗೇಕೆ? ಮಧುಸೂದನ, ನೀನು ಬಂದಾಗಿನಿಂದಲೂ ಮೋಹನನೊಡನೆ ಮಾತನಾಡಿದಂತೆಯೇ ಕಾಣಲಿಲ್ಲ. ಮೋಹನನು ಬಲು ಒಳ್ಳೆಯ ಹುಡುಗ.

ಮಧುಸೂದನನು ಚೌಧುರಿಯ ಮಾತನ್ನು ಕೇಳಿ ಮೋಹನನ ಹೆಸರೆತ್ತಿ ಆವ ಮಾತನ್ನೂ ಆಡದೆ, ಮತ್ತೆ "ಮಾಮ, ವ್ರಜವಿಹಾರಿಲಾಲರೆಂಬುವರು ಆರಿರಬಹುದು?" ಎಂದನು.

ಚೌಧುರಿ—ಆತನ ವಿಷಯದಲ್ಲಿ ನನಗೆ ಗೊತ್ತಿದ್ದುದೆಲ್ಲವನ್ನೂ ಮೊದಲೇ ತಿಳಿಸಿರುವೆನು. ಅದಕ್ಕಿಂತಲೂ ಹೆಚ್ಚಾಗಿ ನನಗೇನೂ ಗೊತ್ತಿಲ್ಲ. ಲಾಲಮಹಾಶಯನು ನನ್ನಲ್ಲಿ ಕೆಲವು ದಿನಗಳು ಮಾತ್ರವೇ ವಾಸವಾಗಿದ್ದು ಮುಂದಕ್ಕೆ ತೆರಳುವನಂತೆ. ಆತನು ಎಲ್ಲಿಗೆ ಹೋಗುವನೋ, ಏನ ಮಾಡುವನೋ ಅದೊಂದೂ ನನಗೆ ಗೊತ್ತಿಲ್ಲ. ಆತನು ದರಿದ್ರನಾಗಿಯಾದರೂ ಇರಲಿ, ಆತನ ವೇಷವು ಅಸಹ್ಯಕರವಾಗಿಯಾದರೂ ಇರಲಿ; ಆತನು ನಿಪುಣನು, ಕಪಟವನ್ನರಿಯದವನು, ಜನರ ಯೋಗ್ಯತೆಯನ್ನರಿತು, ಆರಿಗೆ ಹೇಗಿರಬೇಕೋ ಹಾಗೆಯೇ ನಡೆನುಡಿಗಳನ್ನು ತೋರ್ಪಡಿಸುವನು. ಒಟ್ಟಿನ ಮೇಲೆ ಲಾಲಮಹಾಶಯನು ಯೋಗ್ಯನೇ ಹೊರತು ಅಯೋಗ್ಯನಲ್ಲ.

ಮಧುಸೂದನನು ಈ ಮಾತುಗಳನ್ನು ಕೇಳಿ ಮತ್ತೆ ಆವ ಪ್ರಶ್ನೆಯನ್ನೂ ಹಾಕದೆ ಭೂಮ್ಯಂತರಿಕ್ಷಗಳನ್ನು ಚಿಂತಿಸ ತೊಡಗಿದನು.

ಇಷ್ಟು ಹೊತ್ತಿಗೆ ಮಧ್ಯಾಹ್ನವಾಗುತ ಬಂದಿತು. ಚೌಧುರಿಯು ಮಧುಸೂದನನೊಡನೆ ಮನೆಗೆ ಬಂದು ಭೋಜನದ ಶಾಲೆಯ ಕಡೆಗೆ ತೆರಳಿದನು. ಅಲ್ಲಿ ಎಲ್ಲವೂ ಸಿದ್ಧವಾಗಿದ್ದುವು. ಎಲ್ಲರೂ ಭೋಜನಕ್ಕೆ ಕುಳಿತುಕೊಂಡು ಯಥಾಸಾವಕಾಶವಾಗಿ ಊಟಮಾಡಿ ಎದ್ದರು. ಭೋಜನಾನಂತರದಲ್ಲಿ ಎಲ್ಲರೂ ಒಂದೆಡೆಯಲ್ಲಿ ಕುಳಿತು ವೀಳೆಯವನ್ನು ಕೈಕೊಂಡು ವಿನೋದದಿಂದ ಮಧ್ಯಾಹ್ನವನ್ನು ಕಳೆದರು. ಲಾಲಮಹಾಶಯನನ್ನು ಕಂಡರೆ ಸಿಡಿಮಿಡಿಗುಟ್ಟುತಿದ್ದ ಮಧುಸೂಧನನು ಇಂದು ಆತನ ವಿಷಯುದಲ್ಲಿ ವಿಶೇಷವಾದ ಪ್ರೀತಿ ವಿಶ್ವಾಸಗಳನ್ನು ತೋರ್ಪಡಿಸಲಾರಂಭಿಸಿದನು. ಸಂಧ್ಯಾಕಾಲದಲ್ಲಿ ಚೌಧುರಿಯು ಮೋಹನನೊಡನೆ ತನ್ನ ಕೆಲಸದ ಮೇಲೆ ಹೊರಟುಹೋದ ಬಳಿಕ, ಮಧುಸೂದನನು ವ್ರಜವಿಹಾರಿಲಾಲನ ಬಳಿಗೈತಂದು, "ಪೂಜ್ಯ ಮಹಾಶಯ! ಇಂದಿನ ಸಂಧ್ಯಾಕಾಲವು ಅತಿ

ರಮಣೀಯವಾಗಿರುವುದು. ಮಂದಮಾರುತನು ಧನಧಾನ್ಯ ಕನಕ ಸಂಪತ್ತಿನಿಂದ ಉಬ್ಬಿದ ಒಬ್ಬ ಗೃಹಸ್ಥನಂತೆ ಮಂದಮಂದ ಗಮನದಿಂದ ಸಂಚರಿಸುತ್ತಿರುವನು. ಈ ಸೊಬಗನ್ನು ನೋಡುವುದಕ್ಕಾಗಿ ತಾವು ಹೊರಗೆ ಹೊರಡುವುದಾದರೆ, ನಾನೂ ತಮ್ಮನ್ನು ಹಿಂಬಾಲಿಸುವೆನು," ಎಂದು ಅಂದಚೆಂದವಾದ ನುಡಿಗಳನ್ನಾಡಿದನು.

ವ್ರಜವಿಹಾರಿ—ನಿನ್ನೆಯ ದಿನ ದೇವದುರ್ಗದ ವಿಚಾರವಾಗಿ ನೀವು ಅನೇಕ ಸಂಗತಿಗಳನ್ನು ತಿಳಿಸಲಿಲ್ಲವೇ? ನಾನು ಇಲ್ಲಿಗೆ ಬಂದು ಇಷ್ಟು ದಿನಗಳಾದರೂ, ಬಲು ಹತ್ತಿರದಲ್ಲಿರುವ ಆ ಜಹಗೀರಿಯನ್ನು ನೋಡುವುದಕ್ಕೇ ಆಗಲಿಲ್ಲ. ನಾನು ಮೋಹನನನ್ನು ಕರೆದುಕೊಂಡು ಅಲ್ಲಿಗೆ ಹೋಗಿ ಬರಬೇಕೆಂದಿದ್ದೆನು.

ಮಧುಸೂದನ—ಇದಕ್ಕೆ ಮೋಹನನೇ ಆಗಬೇಕೇನು? ತಾವು ನನ್ನ ಜತೆಯಲ್ಲಿ ಬರುವುದಾದರೆ, ನಾನೇ ಕರೆದುಕೊಂಡು ಹೋಗಿ ಎಲ್ಲವನ್ನೂ ತಮಗೆ ತೋರಿಸಿ ಕರೆದುಕೊಂಡು ಬರುವೆನು. ಇದೊಂದು ದೊಡ್ಡ ವಿಷಯವಲ್ಲ.

ವ್ರಜವಿಹಾರಿಯು ಇದಕ್ಕೆ ಸಮ್ಮತಿಸಲು, ಇಬ್ಬರೂ ಒಂದು ದೋಣಿಯನ್ನು ಬಾಡಿಗೆಗೆ ತೆಗೆದುಕೊಂಡು ಗಂಗಾನದಿಯ ಮೂಲಕವಾಗಿ ದೇವದುರ್ಗಕ್ಕೆ ತೆರಳಿದರು. ಹದಿನೈದು ನಿಮಿಷಗಳೊಳಗಾಗಿ ಇಬ್ಬರೂ ದೇವದುರ್ಗದ ಘಟ್ಟದಲ್ಲಿಳಿದು ಗ್ರಾಮಾಭಿಮುಖವಾಗಿ ಹೊರಟರು. ದಾರಿಯಲ್ಲಿ ಮಧುಸೂದನನು "ಲಾಲ ಮಹಾಶಯ, ಇದರ ಜಹಗೀರುದಾರರನ್ನು ತಾವು ಬಲ್ಲಿರಾ?" ಎನಲಾಗಿ ವ್ರಜವಿಹಾರಿಯು, "ಮಧುಮಹಾಶಯ, ನಿಮ್ಮನ್ನು ಕಾಣುವುದಕ್ಕೆ ಮೊದಲು ನಿಮ್ಮನ್ನು ನಾನು ಎಷ್ಟರ ಮಟ್ಟಿಗೆ ಬಲ್ಲೆನೋ ಅಷ್ಟರ ಮಟ್ಟಿಗೆ ಜಹಗೀರುದಾರರನ್ನೂ ಬಲ್ಲೆನು," ಎಂದು ಹೇಳಿಬಿಟ್ಟನು. ಮಧುಸೂದನನು ಮುಂದೆ ಆವ ಮಾತನ್ನೂ ಆಡದೆ ಸುಮ್ಮನೆ ಬರುತ್ತಿರಲು, ಲಾಲಮಹಾಶಯನು ಮತ್ತೆ "ಮಧುಮಹಾಶಯ! ಇಲ್ಲಿಯ ಪ್ರಕೃತಿಯ ಸೌಂದರ್ಯವನ್ನಾದರೂ ನೋಡಿದಿರಾ? ಇಲ್ಲಿಯೇ ಪ್ರಕೃತಿಲಕ್ಷ್ಮಿಯು ಜನ್ಮವನ್ನು ಗ್ರಹಣಮಾಡಿ ತನ್ನ ಬಾಲಲೀಲೆಯನ್ನು ಕಣ್ಣುಳ್ಳವರಿಗೆ ತೋರ್ಪಡಿಸುತ್ತಿರುವಂತಿದೆ. ಇಲ್ಲಿ ನೋಡಿರಿ, ಸುತ್ತಲೂ ಇರುವ ಪರ್ವತಶ್ರೇಣಿಯ ಸೊಬಗನ್ನು ವರ್ಣಿಸಿ ಆನಂದಿಸುವುದು ಮಹಾಕವಿಗಳಿಗಲ್ಲದೆ ಮತ್ತಾರಿಗೆ ಸಾಧ್ಯವಹುದು? ಇಲ್ಲಿ ಬೆಳೆದಿರುವ ತರುಲತಾಗುಲ್ಮಾದಿಗಳನ್ನು ನೋಡಿದರೆ, ಈ ಸ್ಥಾನವು ಮಹರ್ಷಿಗಳ ತಪಸ್ಸಿಗೆ ಯೋಗ್ಯವಾದುದಾಗಿ ಕಾಣಬರುತ್ತಿರುವುದು. ಇಲ್ಲಿ ನಾನಾ ರೂಪ ನಾನಾ ವರ್ಣ ನಾನಾ ನಾಮಗಳುಳ್ಳ ಪಶುಪಕ್ಷಿ ಮೃಗಾದಿಗಳು ಸರ್ವಕಾಲದಲ್ಲಿಯೂ ಅತಿಥಿ ಅಭ್ಯಾಗತರನ್ನು ನಾನಾ ಧ್ವನಿಗಳಿಂದ ಕೂಗಿ ಬರಮಾಡಿಕೊಳ್ಳುತ್ತಿರುವುವು. ನೋಡಿದರೆ ಈ ಭೂಭಾಗವು

ಸ್ವರ್ಗದಿಂದ ಕಳಚಿಬಿದ್ದ ಒಂದು ಖಂಡದಂತೆ ಬೋಧೆಗೆ ಬರುತ್ತಿರುವುದು. ಈ ಪವಿತ್ರ ಪ್ರದೇಶವನ್ನು ಪ್ರವೇಶ ಮಾಡಿದೊಡನೆಯೇ ಮನಸ್ಸು ಪ್ರಶಾಂತಭಾವವನ್ನು ತಾಳಿರುವುದು. ಇದನ್ನು ಪರಿಶೀಲಿಸಿ ನೋಡಿದರೆ, ಭಗವಂತನ ಸಾನ್ನಿಧ್ಯವು ಇಲ್ಲಿ ವಿಶೇಷವಾಗಿರುವುದೆಂದು ಸಿದ್ಧಾಂತ ಪಡಿಸಬೇಕಾಗಿದೆ," ಎಂದು ಭಗವಂತನ ಮಹಿಮೆಯನ್ನು ಕೊಂಡಾಡುತ್ತಾ ಜಹಗೀರುದಾರನ ಮನೆಯಿದ್ದಲ್ಲಿಗೆ ಬರುತಿದ್ದರು.

ಮಧುಸೂದನನಿಗೆ ಪ್ರಕೃತಿಯ ಸೌಂದರ್ಯವೆಂದರೇ ಅರ್ಥವಾಗಲಿಲ್ಲ. ಅಯ್ಯೋ ಪಾಪ! ದೊಡ್ಡದೊಡ್ಡ ಪಟ್ಟಣಗಳಲ್ಲಿ ವಾಸಮಾಡುವ ನವನಾಗರಿಕರಿಗೆ ಪ್ರಕೃತಿಯಾವುದೋ ಸೌಂದರ್ಯವಾವುದೋ ಒಂದೂ ಗೊತ್ತಾಗುವುದಕ್ಕೆ ಆಸ್ಪದವೇ ಇಲ್ಲವು. ನಗರವಾಸಿಗಳು ರೋಗಜನಕವಾದ ಬೀದಿಯ ದೂಳನ್ನು ನೋಡಿಬಲ್ಲರು. ಅಶುದ್ಧ ಸ್ವಭಾವದ ಜನರ ಮಲಮೂತ್ರಾದಿಗಳ ದುರ್ವಾಸನೆಯನ್ನು ಅನುಭವಸಿ ಬಲ್ಲರು. ಹಗಲಿರುಳೂ ದುರ್ವ್ಯಸನದಲ್ಲಿ ಕಾಲವನ್ನು ಕಳೆಯುತ್ತಾ ಜನ್ಮವನ್ನು ಸುಲಭವಾಗಿ ಹಾಳುಮಾಡಿಕೊಳ್ಳುವ ಮಾರ್ಗವನ್ನು ಚೆನ್ನಾಗಿಯೂ ಬಲ್ಲರು. ಬಗೆಬಗೆಯ ರೋಗಾದ್ಯುಪದ್ರವಗಳಲ್ಲಿ ಸಿಲುಕಿ ನರಳಾಡುವ ಪ್ರಕ್ರಮವನ್ನು ಅತಿಶಯವಾಗಿಯೂ ಬಲ್ಲರು. ಬಲು ಮಾತಿನಿಂದೇನು? ದೇವತಾ ಸಾನ್ನಿಧ್ಯಕ್ಕೆ ದೂರವಾಗಿರುವ ಪಟ್ಟಣಗಳಲ್ಲಿ ಬಗೆಬಗೆಯ ದೋಷಗಳ ಮಹಾಮಹಿಮೆಯನ್ನು ನಗರವಾಸಿಗಳು ತಿಳಿದುಕೊಂಡಿರುವರೇ ಹೊರತು ಪ್ರಾಕೃತಿಕ ಸೌಂದರ್ಯದ ಮರ್ಮವನ್ನು ಅರಿತ ಪ್ರಾಣಿಗಳೇ ಅಲ್ಲ. ನಗರವಾಸಿಗಳಿರಾ! ಪ್ರಕೃತಿ ಲಕ್ಷ್ಮಿಯು ಆವಾವ ಸ್ಥಳಗಳಲ್ಲಿ ಏಕಾಧಿಪತ್ಯ ಮಾಡುತ್ತಿರುವಳೋ ಆಯಾ ಸ್ಥಳಗಳಿಗೆ ಆಗಿಂದಾಗ ಹೋಗಿ ಬರುವ ಪದ್ಧತಿಯನ್ನು ಇಟ್ಟುಕೊಳ್ಳಿರಿ. ಅದರಿಂದ ನಾಸ್ತಿಕತೆಯು ದೂರ ತೊಲಗಿ ಆಸ್ತಿಕತೆಯು ಹೃದಯಾಂತರಾಳದಲ್ಲಿ ಪದಾರ್ಪಣಮಾಡುವುದು.

ಮಧುಸೂದನ ಲಾಲಮಹಾಶಯರಿಬ್ಬರೂ ಕೊಂಚ ಹೊತ್ತಿನೊಳಗಾಗಿ ಜಹಗೀರುದಾರನ ಅರಮನೆಯ ಮುಂದುಗಡೆಯಲ್ಲಿ ಬಂದು ನಿಂತರು. ಬಾಗಿಲಲ್ಲಿ ಒಬ್ಬ ಸೇವಕನು ನಿಂತಿದ್ದನು. ಲಾಲಮಹಾಶಯನೊಬ್ಬನೇ ಅಲ್ಲಿಗೆ ಹೋಗಿದ್ದರೆ, ಅವನ ವೇಷವನ್ನು ನೋಡಿ ಸೇವಕನು ಅವನನ್ನು ಮನೆಯೊಳಗೆ ಬಿಡುತ್ತಲೇ ಇರಲಿಲ್ಲ. ಸೇವಕನು ಮಧುಸೂದನನ ವೇಷಭೂಷಣಗಳನ್ನು ನೋಡಿದ ಕೂಡಲೆ, ಆರೋ ದೊಡ್ಡಮನುಷ್ಯರು ಮನೆಯನ್ನು ನೋಡುವುದಕ್ಕೆ ಬಂದಿರುವರೆಂದು ತಿಳಿದು ಬಲು ಮರ್ಯಾದೆಯೊಡನೆ ಮಧುಸೂದನನನ್ನು ಮನೆಯೊಳಗೆ ಕರೆದುಕೊಂಡು ಹೋಗಿ ಮನೆಯ ಸ್ಥಿತಿಗತಿಗಳೆಲ್ಲವನ್ನೂ ತೋರಿಸಿದನು.

ಲಾಲಮಹಾಶಯನು ಅವನ ಹಿಂದೆ ಹಿಂದೆಯೇ ಹೋಗಿ ಮನೆಯ ಸನ್ನಿವೇಶವೆಲ್ಲವನ್ನೂ ಚೆನ್ನಾಗಿ ಪರೀಕ್ಷಿಸಿಕೊಂಡು ಬಂದನು. ಮನೆಯ ಮುಂಗಡೆಯಲ್ಲಿದ್ದ ಒಂದು ಕೋಣೆಯೊಳಗೆ ಒಬ್ಬ ಗುಮಾಸ್ತನು ಕಾಗದ ಪತ್ರಗಳನ್ನಿಟ್ಟುಕೊಂಡು ಕುಳಿತಿದ್ದನು. ಇವರಿಬ್ಬರೂ ಅಲ್ಲಿಗೆ ಹೋಗಿ ಕುಳಿತ ಬಳಿಕ ಗುಮಾಸ್ತನು ಜಹಗೀರಿಯ ಲೆಕ್ಕ ಪತ್ರಗಳೆಲ್ಲವನ್ನೂ ತೋರಿದನು. ಮಧುಸೂದನನು ಜಹಗೀರಿಯನ್ನು ಕೊಳ್ಳುವವನಿಗಿಂತಲೂ ಹೆಚ್ಚಾಗಿ ಗುಮಾಸ್ತನನ್ನು ಕುರಿತು ಈ ಜಹಗೀರಿಗೆ ಬೆಲೆಯೆಷ್ಟೆಂದು ಕೇಳಿದನು. ಹತ್ತು ಲಕ್ಷ ರೂಪಾಯಿಗಳಿಗೆ ಒಂದು ಕವಡೆಯೂ ಕಡಮೆಯಾಗಲಾರದೆಂದು ಗುಮಾಸ್ತನು ಉತ್ತರ ಕೊಟ್ಟನು.

ಇದನ್ನು ಕೇಳಿಕೊಂಡು ಇಬ್ಬರೂ ಹಿಂದಿರುಗಿ ಚೌಧುರಿಯ ಮನೆಗೆ ಬಂದುಬಿಟ್ಟರು. ಮಧುಸೂದನನು ತನ್ನ ಕೋಣೆಗೆ ಹೋಗಿ ಹೊಸ ವಸ್ತ್ರವನ್ನು ತೆಗೆದುಹಾಕಿ ಬೇರೊಂದನ್ನು ಧರಿಸಿಕೊಂಡು ಲಾಲಮಹಾಶಯನ ಕೋಣೆಗೆ ಬಂದು ನೋಡಿದನು, ಅಲ್ಲಿ ಆತನಿರಲಿಲ್ಲ; ಆದರೆ ಆತನ ಕಾಗದ ಪತ್ರಗಳು ಹಾಸುಗೆಯ ಮೇಲೆಯೇ ಬಿದ್ದಿದ್ದುವು. ಈ ಕಾಗದ ಪತ್ರಗಳಲ್ಲಿ ಏನಿರಬಹುದೆಂದು ತಿಳಿಯಲೋಸುಗ ಮಧುಸೂದನನು ಆ ಕೋಣೆಯೊಳಗೆ ನುಗ್ಗಿ ಒಂದೆರಡು ನಿಮಿಷಗಳೊಳಗಾಗಿಯೇ ಲಾಲಮಹಾಶಯನ ಕಾಗದ ಪತ್ರಗಳೆಲ್ಲವನ್ನೂ ತಿರುವಿಹಾಕಿ ಹೊರಗೆ ಬಂದುಬಿಟ್ಟನು.

ತರುವಾಯ ಮಧುಸೂದನನು ಮನೆಯೊಳಗೆ ಸ್ವರ್ಣಕುಮಾರಿಯನ್ನು ಹುಡುಕಿ ನೋಡಿದನು. ಅವಳು ಅಲ್ಲಿಲ್ಲದಿರಲು, ಹೂದೋಟದಲ್ಲಿಯಾದರೂ ವಿಹರಿಸುತ್ತಿರಬಹುದೆಂದು ತಿಳಿದು ಆತನು ಅವಳಿದ್ದಲ್ಲಿಗೆ ಹೋದನು.

---

## ಆರನೆಯ ವಿಲಾಸ

### ಸಂದೇಹ ನಿವೃತ್ತಿ

ಮಧುಸೂದನನು ಸರಕಾರವಾಡಿಗೆ ಬಂದು ಒಂದು ತಿಂಗಳಾಗುತ ಬಂದಿತು. ಆದರೂ ವ್ರಜವಿಹಾರಿಲಾಲನು ಮುಂದಕ್ಕೆ ತೆರಳುವ ಆಲೋಚನೆಯೇ ಕಂಡು ಬರಲಿಲ್ಲ. ಲಾಲಮಹಾಶಯನು ಇಂದು ತೆರಳುವೆನು, ನಾಳೆ ತೆರಳುವೆನು ಎಂದು ದಿನಗಳನ್ನು ತಳ್ಳಿಕೊಂಡೇ ಬರುತಿದ್ದನು. ಇತರರಾರೂ ಈ ವಿಚಾರವಾಗಿ ಜಿಜ್ಞಾಸೆಮಾಡಲು ಮುಂದುವರಿದು ಬಂದವರಿಲ್ಲ. ಅನೇಕ ದಿನಗಳು ಒಂದೆಡೆಯಲ್ಲಿ ವಾಸವಾಗಿದ್ದ ಬಳಿಕ, ಒಬ್ಬರಿಗೊಬ್ಬರಿಗೆ ಪ್ರೀತಿವಿಶ್ವಾಸಗಳು ಬೆರೆತುಹೋಗುವುವು.

ತರುವಾಯ ಒಬ್ಬೊಬ್ಬರೂ ಅಗಲಿ ದೂರ ಸರಿದುಹೋಗುವುದಾದರೆ, ಆ ಅಗಲಿಕೆಯಿಂದುಂಟಾಗುವ ದುಃಖವು ತೀವ್ರಯಾತನೆಯುಳ್ಳದಾಗಿರುವುದು. ಚೌಧುರಿ ಲಾಲಮಹಾಶಯರಿಬ್ಬರೂ ಅಗಲಿಕೆಯ ದುಃಖಪರಿಣಾಮವನ್ನು ಅರಿತವರಾದುದರಿಂದ, ಚೌಧುರಿಯು ಕಳುಹಿಸಿಕೊಡುವುದಕ್ಕೂ ಇಷ್ಟಪಡಲಿಲ್ಲ, ಲಾಲಮಹಾಶಯನೂ ಬಿಟ್ಟು ಹೋಗುವುದಕ್ಕೂ ಇಷ್ಟಪಡಲಿಲ್ಲ. ಹೊಸದಾಗಿಬಂದ ಮಧುಸೂದನನೂ ಲಾಲಮಹಾಶಯನ ವಿಷಯದಲ್ಲಿ ಹೆಚ್ಚಿನ ಅಭಿಮಾನವನ್ನಿಟ್ಟುಕೊಂಡು ಹಗಲಿರುಳೂ ಎಡೆಬಿಡದೆ ವೃದ್ಧನ ಬಳಿಯಲ್ಲಿಯೇ ಕಾಲವನ್ನು ಕಳೆಯುತಿದ್ದನು. ಪ್ರೀತಿರಸಾಯನದ ರುಚಿಯನ್ನು ಬಲ್ಲವರೇ ಬಲ್ಲರು.

ಮಧುಸೂದನನು ಬೆಳಗಿನಿಂದ ಮಧ್ಯಾಹ್ನದ ವರೆಗೂ ಲಾಲ ಮಹಾಶಯನ ಬಳಿಯಲ್ಲಿ ಕುಳಿತುಕೊಂಡು ಬಗೆಬಗೆಯ ಮಾತುಕತೆಗಳನ್ನಾಡುವನು. ಸಾಯಂಕಾಲದಲ್ಲಿ ಮಟ್ಟಿಗೆ ಹೂದೋಟದಲ್ಲಿ ಸಂಚರಿಸುತ್ತಾ ಸಮಯವು ದೊರೆತಾಗಲೆಲ್ಲಾ ಸ್ವರ್ಣಕುಮಾರಿಯೊಡನೆ ಏಕಾಂತವಾಗಿ ಮಾತನಾಡುವುದಕ್ಕೆ ಸಿದ್ಧನಾಗಿರುತಿದ್ದನು. ಸ್ವರ್ಣಕುಮಾರಿಯೂ ಸಂಧ್ಯಾಕಾಲಗಳಲ್ಲಿ ಆವುದಾದರೊಂದು ನೆಪವನ್ನು ಹೂಡಿಕೊಂಡು ಹೂದೋಟದಲ್ಲಿ ಸಂಚರಿಸುತ್ತಿರುವ ಮಧುಸೂದನನಿಗೆ ಕಾಣಿಸಿಕೊಳ್ಳುವಳು. ಇಬ್ಬರೂ ಒಂದೆಡೆಯಲ್ಲಿ ಕುಳಿತುಕೊಂಡು ಸರಸಸಲ್ಲಾಪಗಳನ್ನು ಮಾಡುವರು. ಇದರಿಂದ ಮೋಹನನು ಸ್ವರ್ಣಕುಮಾರಿಯೊಡನೆ ಒಂದೆರಡು ಮಾತುಗಳನ್ನಾಡುವುದಕ್ಕೂ ಅವಕಾಶವು ದೊರೆಯದೇ ಹೋಯಿತು. ಮಧುಸೂದನನು ಬಂದಾಗಿನಿಂದಲೂ ಸ್ವರ್ಣ ಕುಮಾರಿಯು ತನ್ನ ಹೃದಯಾಲವಾಲದಲ್ಲಿ ಮೋಹನನು ನಟ್ಟಿದ್ದ ಪ್ರಣಯ ಬೀಜವನ್ನು ಲಕ್ಷ್ಯಕ್ಕೆ ತಾರದೆ ಒಣಗಿಸಲಾರಂಭಿಸಿದಳು. ಅದರ ಸ್ಥಾನದಲ್ಲಿ ಮಧುಸೂದನನ ಪ್ರಣಯಾಂಕುರಗಳು ಕಳೆಗಳಂತೆ ಬೆಳೆಯಲಾರಂಭಿಸಿದುವು. ಮೋಹನನು ಪ್ರಣಯಭಂಗದಿಂದ ದಿನದಿನಕ್ಕೆ ಸವೆದು ಹೋಗುತ್ತಾ ಬಂದನು. ಕೃತ್ರಿಮದ ಲಕ್ಷಣವನ್ನೇ ಅರಿಯದ ಚೌಧುರಿಯು ಈ ವಿದ್ಯಮಾನವಾವುದನ್ನೂ ತಿಳಿಯಲಾರದೇ ಹೋದನು. ಅವನಿಗೆ ಬೆಳ್ಳಗಿರುವುದೆಲ್ಲವೂ ಹಾಲೇ ಆಗಿದ್ದಿತು.

ಹೀಗಿರಲೊಂದು ದಿನ ಚೌಧುರಿಮಹಾಶಯನು ಅಪರಾಹ್ಣಕಾಲದಲ್ಲಿ ಮಧುಸೂದನನನ್ನು ತನ್ನ ಜತೆಯಲ್ಲಿ ಕರೆದುಕೊಂಡು ಆವುದೋ ಕೆಲಸಕ್ಕಾಗಿ ಮನೆಯನ್ನು ಬಿಟ್ಟು ಹೊರಗೆ ಹೊರಟನು. ಮಧುಸೂದನನಿಗೆ ಸ್ವರ್ಣಕುಮಾರಿಯೊಡನೆ ಮಾತನಾಡುವುದನ್ನು ಬಿಟ್ಟು ಬೇರೆಯ ಕಡೆಗೆ ಹೋಗುವುದಕ್ಕೆ ಕಾಲೇ ಬಾರದು. ಆದರೂ ಮನೆಯ ಯಜಮಾನನು ಕರೆದರೆ ಬರುವುದಕ್ಕಾಗುವುದಿಲ್ಲವೆಂದು ಹೇಳುವುದು ಗೌರವಕ್ಕೆ ಕಡಮೆಯೆಂದು ತಿಳಿದು ಮಧುಸೂದನನು

ಅತಿಸಂಕಟಪಟ್ಟುಕೊಂಡು ಚೌಧುರಿ ಮಹಾಶಯನೊಡನೆ ಹೊರಹೊರಟನು. ಯೌವನದಲ್ಲಿ ಯುವಕರಿಗೆ ಪ್ರಣಯ ಸಲ್ಲಾಪಗಳಲ್ಲಿ ಅಭಿರುಚಿಯು ಅಧಿಕವಾಗಿರುವುದೇ ಹೊರತು ಇತರ ವ್ಯಾಪಾರಗಳಲ್ಲಿ ಕೊಂಚವಾದರೂ ಆಸಕ್ತಿಯೆಂಬುದೇ ಇರುವುದಿಲ್ಲ.

ಮಧುಸೂದನನು ತನ್ನ ಆಂತರ್ಯದ ಇಷ್ಟಕ್ಕೆ ವಿರೋಧವಾಗಿಯೇ ಚೌಧುರಿ ಮಹಾಶಯನೊಡನೆ ಹೊರಗೆ ಹೊರಟುಹೋದನು. ಇದೇ ಸಮಯದಲ್ಲಿ ಲಾಲಮಹಾಶಯನು ಮೋಹನನಿಗೆ ಬರುವುದಕ್ಕೆ ಹೇಳಿಕಳುಹಿಸಿದನು. ಮೋಹನನೂ ತಡಮಾಡದೆ ವೃದ್ಧನ ಬಳಿಯಲ್ಲಿ ಬಂದು ಕುಳಿತನು. ಲಾಲಮಹಾಶಯನು ಮೋಹನನನ್ನು ನೋಡಿ, "ಮಗು, ಮೋಹನ! ನಿನ್ನೊಡನೆ ಒಂದುಮಾತನ್ನು ಹೇಳಬೇಕೆಂದಿರುವೆನು. ನೀನು ಅದನ್ನು ತಿರಸ್ಕರಿಸ ತಕ್ಕವನಲ್ಲವೆಂಬುದನ್ನೂ ನಾನು ಚೆನ್ನಾಗಿಯೂ ಬಲ್ಲೆನು. ಈಗ ನಾನು ಹೇಳುವುದೆಲ್ಲವನ್ನೂ ಗುಟ್ಟಾಗಿಟ್ಟಿರ ಬಲ್ಲೆಯಾ? ಹಾಗೆ ಗುಟ್ಟಾಗಿಟ್ಟುಕೊಳ್ಳುವುದಾದರೆ ಮುಂದೆ ತುಂಬಾ ಅನುಕೂಲತೆಯುಂಟು. ನೀನು ಸ್ವರ್ಣಕುಮಾರಿಯನ್ನು ಅಂತರಾತ್ಮಸಾಕ್ಷಿಯಾಗಿಯೂ ಪ್ರೀತಿಸುವೆಯಾ? ಎಂದು ಕೇಳಲಾಗಿ ಮೋಹನನು ನಾಚುಗೆಯಿಂದ ತಲೆವಾಗಿದವನಾಗಿ ಏನೊಂದುತ್ತರವನ್ನೂ ಕೊಡದೆ ನೆಲವನ್ನೇ ನೋಡುತ್ತಾ ಕುಳಿತನು. ಲಾಲಮಹಾಶಯನು ಮೋಹನನನ್ನು ಆಪಾದಕೇಶಾಂತವಾಗಿ ನೋಡಿ ಮತ್ತೆ, "ಮೋಹನ, ನನಗೆಲ್ಲವೂ ಗೊತ್ತು. ನನ್ನಲ್ಲಿ ನಿನಗೆ ನಾಚುಗೆಯೆಂದರೇನು? ಎಲ್ಲವನ್ನೂ ಮುಚ್ಚುಮರೆಯಿಲ್ಲದೆ ತಿಳಿಸು. ನೀನು ಸ್ವರ್ಣಕುಮಾರಿಯನ್ನು ಪ್ರೀತಿಸುವೆಯೋ ಇಲ್ಲವೋ ಹೇಳು," ಎಂದು ಕೇಳಿದನು.

ಮೋಹನ—(ಮೃದು ಸ್ವರದಿಂದ) ಪೂಜ್ಯ ಮಹಾಶಯ, ನಿಮ್ಮಲ್ಲಿ ವಂಚನೆಯೇನು? ನಾನು ನಿಜವಾಗಿಯೂ ಸ್ವರ್ಣಕುಮಾರಿಯನ್ನು ಪ್ರೀತಿಸುವೆನು. ಆಕೆಯನ್ನು ನನ್ನ ಪ್ರಾಣಕ್ಕಿಂತಲೂ ಅಧಿಕವಾಗಿಯೇ ಪ್ರೀತಿಸುವೆನು. ನನ್ನ ಪ್ರೀತಿಯು ಆಕೆಯಲ್ಲಿ ಎಷ್ಟರ ಮಟ್ಟಿಗೆ ಇದೆ ಎಂಬುದನ್ನು ಪರಮೇಶ್ವರನೊಬ್ಬನೇ ಬಲ್ಲನು.

ವ್ರಜವಿಹಾರಿ—ನೀನು ಕುಮಾರಿಯನ್ನು ಪ್ರೀತಿಸುವುದು ಸಹಜವಾಗಿಯೇ ಇರುವುದು. ಚೌಧುರಿಮಹಾಶಯನು ತನ್ನ ಮಗಳನ್ನು ನಿನಗೇ ಕೊಟ್ಟು ವಿವಾಹ ಮಾಡುವುದಾಗಿ ಅಭಿಪ್ರಾಯವನ್ನು ಸೂಚಿಸಿರುವುದರಿಂದ ನೀನು ಮುಂದೆ ಹೆಂಡತಿಯಾಗತಕ್ಕ ಹುಡುಗಿಯನ್ನು ಪ್ರೀತಿಸುವುದು ತಪ್ಪಾಗಲಾರದು. ನಿನಗೆ ಈ ವಿಷಯಗಳೆಲ್ಲವೂ ಮೊದಲೇ ಗೊತ್ತುಂಟಷ್ಟೇ?

ಮೋಹನ—ಗೊತ್ತುಂಟು, ಮಹಾಶಯ!

ವ್ರಜವಿಹಾರಿ—ಈ ಮಾತು ಹಾಗಿರಲಿ. ಮೋಹನ, ಕೇಳು ; ಮತ್ತೊಂದು ವಿಷಯವನ್ನು ಹೇಳುವೆನು. ನೀನು ಸ್ವರ್ಣಕುಮಾರಿಯನ್ನು ಪ್ರೀತಿಸುವ ಹಾಗೆ ಸ್ವರ್ಣಕುಮಾರಿಯೂ ನಿನ್ನನ್ನು ಪ್ರೀತಿಸುವುದಾದರೆ, ಪರಸ್ಪರ ಪ್ರೀತಿಯು ದಾಂಪತ್ಯದಲ್ಲಿ ಏಕಾಧಿಪತ್ಯ ಮಾಡುವುದು. ಒಬ್ಬರು ಪ್ರೀತಿಸಿ ಮತ್ತೊಬ್ಬರು ಪ್ರೀತಿಸದೇ ಹೋದಲ್ಲಿ,. ಅಂತಹ ದಾಂಪತ್ಯವೂ ನರಕಯಾತನೆಯೂ ಒಂದೇ ಎಂದು ಹೇಳಬಹುದು. ಈಗ ಸ್ವರ್ಣಕುಮಾರಿಯೂ ನಿನ್ನನ್ನು ಪ್ರೀತಿಸುವುದಾದರೆ, ನೀನು ಆಕೆಯನ್ನು ಪ್ರೀತಿಸಿದುದಕ್ಕೆ ಸಾರ್ಥಕತೆಯುಂಟಾಂದಂತಾಗುವುದು. ಸ್ವರ್ಣಕುಮಾರಿಯು ನಿನ್ನನ್ನು ಪ್ರೀತಿಸುವಳೋ ಇಲ್ಲವೋ ನನಗೆ ಚೆನ್ನಾಗಿ ಗೊತ್ತಿಲ್ಲ. ಆಕೆಯು ಮಧುಸೂದನನೊಡನೆ ವಿಶೇಷವಾಗಿ ಈಚೀಚೆಗೆ ಸೇರುವುದು ನೋಡಿದರೆ ನನಗೇನೋ ಸಂಶಯವೇ ಕಂಡುಬರುತ್ತಿರುವುದು. ನೀನು ದಿನದಿನಕ್ಕೆ ಸವೆಯುತ್ತಿರುವುದನ್ನು ನೋಡಿದರೆ, ನೀನು ಆಕೆಯನ್ನು ಪ್ರೀತಿಸುವಂತೆ, ಆಕೆಯು ನಿನ್ನನ್ನು ಪ್ರೀತಿಸುತ್ತಿಲ್ಲವೆಂದು ದೃಢವಾಗಿಯೂ ನಂಬಬಹುದಾಗಿದೆ. ಇದೇ ನಿಜವಾದ ವಿಷಯವಾಗಿರುವುದಾದರೆ, ನೀನು ಮನದಲ್ಲಿ ಏನೇನೋ ಅಭಿಪ್ರಾಯವಿಟ್ಟುಕೊಂಡು ಕೊರಗಿ ಕೊರಗಿ ಸಾಯುವುದು ಸರಿಯಲ್ಲ. ನೀನು ಸ್ವರ್ಣಕುಮಾರಿಯ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಯಬಾರದೇತಕೆ ? ತಿಳಿದಲ್ಲಿ ನೀನೂ ಸುಖವಾಗಿರಬಹುದು, ಆಕೆಯೂ ಸುಖವಾಗಿರಬಹುದು. ಬಳಿಕ ನೀನು ನಿನ್ನ ಇಷ್ಟವಿದ್ದಂತೆ ಮಾಡಬಹುದು. ಈ ಸಮಯದಲ್ಲಿ ಆವುದಾದರೊಂದು ಇತ್ಯರ್ಥವಾಗುವುದೇ ಮೇಲು. ನಾನು ನಿನಗೆ ಹಿತೈಷಿಯಾದುದರಿಂದ ಇಷ್ಟುದೂರ ಮಾತನಾಡಬೇಕಾಯಿತು. ನೀನು ಇದನ್ನು ಸಿದ್ಧಾಂತಪಡಿಸಿಕೊಂಡಲ್ಲದೆ ಮುಂದಣ ಆವ ಮಾರ್ಗವನ್ನೂ ಅವಲಂಬಿಸುವುದಕ್ಕಾಗಲಾರದು. ಅಲ್ಲದೆಯೂ ನಾನು ಆವ ಸತ್ಪರಾಮರ್ಶವನ್ನು ಕೊಡುವುದಕ್ಕೂ ಸಾಧ್ಯವಿಲ್ಲ. ಮೋಹನ, ಈಗ ನನ್ನ ಮಾತನ್ನು ಕೇಳು. ಈ ಸಮಯದಲ್ಲಿ ಸ್ವರ್ಣಕುಮಾರಿಯು ಹೂದೋಟದಲ್ಲಿರುವಂತಿದೆ. ನೀನು ಅವಳ ಬಳಿಗೆ ಹೋಗಿ ಆವುದಾದರೊಂದನ್ನು ನಿಶ್ಚಯಮಾಡಿಕೊಂಡು ಬಾ. ಮುಂದಣ ಕೆಲಸಗಳು ಬಹುವಾಗಿರುವುದರಿಂದ ಕಾಲಹರಣಕ್ಕೆ ಮಟ್ಟಿಗೆ ಅವಕಾಶ ಕೊಡದಿರು, ಕಂಡೆಯಾ ?

ಮೋಹನ—ಪೂಜ್ಯ ಮಹಾಶಯ, ನಾನು ನಾಚುಗೆ ಬಿಟ್ಟು ಅವಳನ್ನು ಹೇಗೆ ಕೇಳಲಿ ? ಮಧುಸೂದನನು ಬಂದ ದಿನ ಸ್ವರ್ಣಕುಮಾರಿಯ ಮನೋಭಾವವು ಒಂದು ಬಗೆಯಾಗಿ ಗೊತ್ತಾಗಿಯೇ ಇರುವುದು.

ವ್ರಜವಿಹಾರಿ—ನಿನಗಿಂತಲೂ ಹುಚ್ಚನಾರಿರುವರು ? ನಾಚುಗೆಯಿಂದ ಮಾಡಿದ ಕೆಲಸಕ್ಕೆ ನೀನು ಅಭಿಪ್ರಾಯವನ್ನು ಕಲ್ಪಿಸುವುದು ಆವಾವ ಧರ್ಮ ?

ಮೋಹನ—ಅದು ನಾಚುಗೆಯ ಕೆಲಸವೆಂದೇ ತಿಳಿದು ಇನ್ನೂ ಸುಮ್ಮ ನಿರುವೆನು.

ವ್ರಜವಿಹಾರಿ—ಅದರಿಂದ ಪ್ರಯೋಜನವೇನೂ ಇಲ್ಲ. ನೀನು ಹೋಗಿ ಅವಳ ಬಾಯಿಂದಲೇ ಉಂಟು, ಇಲ್ಲ, ಎಂಬುದನ್ನು ಕೇಳಿ ತಿಳಿದುಕೊಂಡು ಬರ ಬೇಕು. ಹೊರಡು, ಈಗಳೇ ಹೊರಡು. ಎಷ್ಟು ದಿವಸ ಸಂಶಯದಲ್ಲಿ ಕೊರಗಿ ಸಾಯುವುದು ?

ಮೋಹನನು ವ್ರಜವಿಹಾರಿಯ ಅಪ್ಪಣೆಯಂತೆಯೇ ಹೂದೋಟದ ಕಡೆಗೆ ತೆರಳಿದನು. ಅಲ್ಲಿ ಸ್ವರ್ಣಕುಮಾರಿಯು ಒಂದೆಡೆಯಲ್ಲಿ ಕುಳಿತುಕೊಂಡು ಬಗೆ ಬಗೆಯ ಆಲೋಚನೆಯಲ್ಲಿ ಮಗ್ನೆಯಾಗಿದ್ದವಳು ಮೋಹನನನ್ನು ಕಂಡಕೂಡಲೆ ಎದ್ದು ನಿಂತಳು. ಮೋಹನನು ಕುಮಾರಿಯನ್ನು ಕುರಿತು, "ಕುಮಾರಿ, ನಿನ್ನೊ ಡನೆ ಒಂದೆರಡು ಮಾತುಗಳನ್ನಾಡಿ ಹೋಗಬೇಕೆಂದಿರುವೆನು. ನೀನು ಬೇಸರ ಪಟ್ಟುಕೊಳ್ಳದಿದ್ದರೆ ನಾನು ಕೇಳುವೆನು," ಎಂದನು. ಸ್ವರ್ಣಕುಮಾರಿಯು ಮಾತಿನ ಪರಿಪಾಟಿಯನ್ನು ಕೇಳಿ ಅಚ್ಚರಿಗೊಂಡು, ಇಂದು ಹೀಗೇಕೆ ಮಾತ ನಾಡುವಿರಿ? ಎಂದೂ ಇಲ್ಲದ ಹೊಸ ಪದ್ಧತಿಯನ್ನು ಇಂದು ಅವಲಂಬಿಸಿದಂ ತಿದೆ," ಎಂದು ಮಾತನಾಡಿದಳು.

ಸ್ವರ್ಣಕುಮಾರಿಯು ಇಷ್ಟು ಹೇಳಿದುದಕ್ಕೇ ಮೋಹನನ ಶರೀರವೆಲ್ಲವೂ ಗದಗದನೆ ನಡುಗಿತು, ಬಾಯಿ ಒಣಗಿ ಹೋಯಿತು, ಕಣ್ಣುಗಳಲ್ಲಿ ಶೋಕರಸವು ತಲೆದೋರಿತು. ಮೋಹನನು ದುಃಖದ ಆವೇಗವನ್ನು ಅತಿ ಪ್ರಯಾಸದಿಂದ ಅಡಗಿಸಿಕೊಂಡು, "ಕುಮಾರಿ, ಅವಸ್ಥೆಗೆ ತಕ್ಕಂತೆಯೇ ಮಾತನಾಡಬೇಕಾಗಿದೆ, ಯತ್ನವಿಲ್ಲ; ನಾನು ಕೆಲವು ದಿನಗಳಿಂದೀಚೆಗೆ ದಾರುಣವಾದ ಸಂದೇಹದಲ್ಲಿ ಬಿದ್ದು ಒದ್ದಾಡುತ್ತಿರುವೆನು. ನೀನು ಆ ಸಂದೇಹವನ್ನು ಹೋಗಲಾಡಿಸಬೇಕು. ವಿಷಯವೇನೆಂದರೆ—ನನಗೆ ತಂದೆಯಿಲ್ಲ, ತಾಯಿಯಿಲ್ಲ, ಹುಟ್ಟಿದ ಮೊದಲ್ಗೊಂಡು ನಾನು ಇತರರ ಮನೆಯಲ್ಲಿಯೇ ಬಳೆದವನು. ನನಗೆ ಜಾತಿಕುಲಶೀಲಗಳಾವುವೂ ಇಲ್ಲವೆಂದೇ ತೋರುವುದು. ಹೀಗಿರುವುದರಿಂದ ನನ್ನಲ್ಲಿ ಗುಣವಿರುವುದೆಂದರೇನು? ಒಂದು ವೇಳೆ ಏನಾದರೂ ಇರುವುದಾದರೆ, ಅದು ನಿಮ್ಮ ಅಣ್ಣ ಪ್ರಭಾವದಿಂ ದಲೇ. ಏನಿದ್ದರೂ ನನ್ನ ಅವಸ್ಥೆಯೂ ಬಿಕಾರಿಯ ಅವಸ್ಥೆಯೂ ಒಂದೇ ಎಂದು ಹೇಳಬಹುದು. ಸ್ವತಂತ್ರವಾಗಿ ಬದುಕುವುದು ನನ್ನ ಹಣೆಯಲ್ಲಿಯೇ ಬರೆದಿಲ್ಲವೆಂದು ತೋರುವುದು. ಈ ಕಾರಣಗಳಿಂದ ನಾನು ಎಲ್ಲರ ದೃಷ್ಟಿಯಲ್ಲಿಯೂ ಅಸಭ್ಯನಾಗಿ ಕಂಡುಬಂದರೂ, ನನ್ನ ನಡೆನುಡಿಗಳಲ್ಲಿ ಆವ ದುರ್ಗುಣವೂ ಕಂಡುಬರುವುದಿಲ್ಲ," ಎಂದು ಹೇಳಿದುದನ್ನು ಕೇಳಿ, ಸ್ವರ್ಣಕುಮಾರಿಯು

ಅನಿರ್ವಚನೀಯವಾದದೊಂದು ಸಂಕಟದಿಂದ ತಳಮಳಗುಟ್ಟುತ್ತೆ, "ಮೋಹನ ಮಹಾಶಯ, ನೀವು ಇಂದು ಈ ರೀತಿ ಮಾತನಾಡಲು ಕಾರಣವೇನು? ನಾನು ನಿಮ್ಮ ಸ್ವಭಾವವನ್ನು ಅರಿಯದವಳೇ? ನಿಮ್ಮಲ್ಲಿ ಯಾವ ದುರ್ಗುಣಗಳೂ ಇಲ್ಲವೆಂಬುದನ್ನು ಎಲ್ಲರೂ ಬಲ್ಲರು," ಎಂದು ಉತ್ತರವಿತ್ತಳು.

"ಹಾಗಾದರೆ, ನಾನು ನಿನ್ನನ್ನು ಪ್ರೀತಿಸುವುದಾದರೂ ನೀನು ಮಟ್ಟಿಗೆ ನನ್ನನ್ನು ಪ್ರೀತಿಸುವುದಿಲ್ಲವೇತಕೆ? ನನ್ನ ಜೀವಮಾನದ ಸುಖದುಃಖಗಳೆಲ್ಲವೂ ನಿನ್ನ ಅಭಿಪ್ರಾಯದ ಮೇಲೆ ನಿಂತಿರುವುವು. ನೀನು ನನ್ನನ್ನು ಪ್ರೀತಿಸುವುದು, ಪ್ರೀತಿಸದಿರುವುದು, ಆವುದಾದರೊಂದು ತಿಳಿದು ಬಂದಲ್ಲಿ ನಾನು ನಿಶ್ಚಿಂತನಾಗಿರ ಬಹುದು," ಎಂದು ಮೋಹನನು ಧೈರ್ಯದಿಂದ ಮಾತನಾಡಿದನು.

ಮೋಹನನು ಈ ರೀತಿಯಾಗಿ ಮಾತನಾಡಿದುದನ್ನು ಕೇಳಿದ ಕೂಡಲೆ, ಸ್ವರ್ಣಕುಮಾರಿಯ ಹೃದಯವು ವ್ಯಾಕುಲವಾಯಿತು. ಒಂದು ಕ್ಷಣಕಾಲದಲ್ಲಿಯೇ ನೂರಾರು ಚಿಂತೆಗಳು ಅವಳ ಹೃದಯದಲ್ಲಿ ಪರಸ್ಪರ ಜಯಾಪೇಕ್ಷೆಯಿಂದ ಹೋರಾಡ ತೊಡಗಿದುವು. ಸ್ವರ್ಣಕುಮಾರಿಯು ಮೋಹನನನ್ನು ಪ್ರೀತಿಸುವಳು, ಅವನ ದುಃಖದಲ್ಲಿ ದುಃಖಪಡುವಳು, ಅವನ ಅಸ್ವಾದೃಶವಾದ ಗುಣಗಳಿಗೆ ಸಂತೋಷಿಸುವಳು ; ಇವೆಲ್ಲವೂ ನಿಜವೇ ಅಹುದು. ಆದರೆ ಮಧುಸೂದನನ ರೂಪವೂ, ಮಾತಿನ ಚಮತ್ಕಾರವೂ, ಮುಗುಳು ನಗೆಯೂ, ಕಾಲೋಚಿತವಾದ ವೇಷಭೂಷೆಗಳೂ ಸ್ವರ್ಣಕುಮಾರಿಯ ಹೃದಯವನ್ನು ಆಕರ್ಷಣಮಾಡಿದ್ದುವು. ತಂದೆಯು ತನ್ನನ್ನು ಮೋಹನನ ಕೈಯಲ್ಲಿಟ್ಟುಬಿಡುವುದಾಗಿ ಸಂಕಲ್ಪಮಾಡಿರುವುದು ಸ್ವರ್ಣಕುಮಾರಿಗೆ ಜ್ಞಾಪಕದಲ್ಲಿಯೇ ಇರುವುದಾದರೂ, ಆಕೆಯ ಮನಸ್ಸು ಮಧುಸೂದನನಲ್ಲಿ ಲೀನವಾಗಿರುವುದು. ತಂದೆ ತಾಯಿಯರ ಅಪ್ಪಣೆಯು ಮಕ್ಕಳಿಗೆ ಮಾನ್ಯವೇ ಅಹುದು ; ಪ್ರಣಯ ಪ್ರಸಂಗಗಳಲ್ಲಿ ಮಟ್ಟಿಗೆ ಹಿರಿಯರ ಮನೋಭಿಪ್ರಾಯಗಳು ಅಷ್ಟಾಗಿ ಪ್ರಯೋಜನಕ್ಕೆ ಬರಲಾರವು. ಲೋಕದಲ್ಲಿ ನಾವು ಅನೇಕ ಕಡೆ ನೋಡಿರುವೆವು. ಯುವಕರ ಪ್ರಣಯವೇ ಎಲ್ಲೆಲ್ಲಿಯೂ ವಿಜಯ ಪತಾಕೆಯನ್ನು ನಟ್ಟಿರುವುದು. ಅದನ್ನು ಇದಿರಿಸುವುದಕ್ಕೆ ಯಾರಿಗೂ ಶಕ್ತಿ ಸಾಲದು. ಯಾರಾದರೂ ಈ ಅನುಭವವನ್ನು ಸುಳ್ಳೆಂದು ಸ್ಥಾಪಿಸುವುದಾದರೆ, ನಾವು ಆ ಅನುಭವವನ್ನು ತೆಗೆದುಕೊಳ್ಳುವುದಕ್ಕೂ ಸಿದ್ಧರಾಗಿಯೇ ಇರುವೆವು. ಪ್ರಕೃತದ ಸ್ಥಿತಿಯಲ್ಲಿ ಸ್ವರ್ಣಕುಮಾರೀ ಮಧುಸೂದನರ ಪರಸ್ಪರವಾದ ಪ್ರಣಯಾನು ಬಂಧವು ಅಭೇದ್ಯವಾದುದು. ಇದನ್ನು ಹೋಗಲಾಡಿಸುವುದಕ್ಕೆ ಸ್ವರ್ಣಕುಮಾರಿಗೆ ಇನ್ನು ಸಾಧ್ಯವಲ್ಲ. ಪ್ರಣಯಕ್ಕೆ ಪರತಂತ್ರರಾದವರು ಉಚ್ಚನೀಚಗಳನ್ನೂ, ಹಿರಿಕಿರಿಯರನ್ನೂ, ಗುಣದೋಷಗಳನ್ನೂ, ಸುಖದುಃಖಗಳನ್ನೂ,

ಮಾನಾಪಮಾನಗಳನ್ನೂ ಗಣನೆಗೆ ತಾರರು. ಪ್ರಣಯಾಧೀನೆಯಾದ ಸ್ವರ್ಣ ಕುಮಾರಿಯೂ ಮಧುಸೂದನನ ಮೋಹಪಾಶದಲ್ಲಿ ಸಿಲುಕಿ ಯುಕ್ತಾಯುಕ್ತ ವಿವೇಕವನ್ನು ಕಳೆದುಕೊಂಡವಳಂತಾಗಿ ಮೋಹನನ್ನು ಕುರಿತು, "ಅಣ್ಣ, ಮೋಹನ! ನಿನ್ನನ್ನು ನಾನು ಪ್ರೀತಿಸುವುದಿಲ್ಲವೆಂದು ಹೇಳಿದವರಾರು? ನೀನು ನನ್ನ ಅಣ್ಣನಿಗೆ ಸಮಾನನಲ್ಲವೇ? ತಂಗಿಯಾದವಳು ಅಣ್ಣನನ್ನು ಹೇಗೆ ಪ್ರೀತಿಸುವಳೋ, ಹಾಗೆಯೇ ನಾನೂ ನಿನ್ನನ್ನು ನಿರ್ವಂಚನೆಯಾಗಿ ಪ್ರೀತಿಸುವೆನು. ಇದರಲ್ಲಿ ಕೊಂಚವೂ ಸಂಶಯವಿಲ್ಲ. ಆದರೆ—

"ನನ್ನ ಪ್ರಶ್ನೆಗೆ ಉತ್ತರ ಬಂದಿತು; ಇನ್ನು ಹೆಚ್ಚಾಗಿ ನೀನು ಹೇಳಬೇಕಾದುದೇನೂ ಇರುವುದಿಲ್ಲ," ಎಂದು ಮೋಹನನು ಹೇಳುವಷ್ಟರೊಳಗಾಗಿಯೇ ಅವನ ಕಂಠಸ್ವರವು ಕಿಗ್ಗಿಹೋಯಿತು, ಕಣ್ಣುಗಳಿಂದ ನೀರು ದರದರನೆ ಸುರಿಯಲಾರಂಭವಾಯಿತು. ಮೋಹನನು ಈ ಅವಸ್ಥೆಯಲ್ಲಿ ಕೊಂಚಹೊತ್ತು ತೊಳಲುತಲಿದ್ದು ಬಳಿಕ ತನ್ನ ಮನೋಯಾತನೆಯನ್ನು ಅತಿಪ್ರಯಾಸದಿಂದ ಅಡಗಿಸಿಕೊಂಡು ಮತ್ತೆ "ಸ್ವರ್ಣಕುಮಾರೀ ದೇವಿ! ಭಗವಂತನು ನಿನಗೆ ಮಂಗಳ ಪರಂಪರೆಯನ್ನುಂಟುಮಾಡಲಿ. ನೀನು ನಿಷ್ಕಂಟಕವಾದ ಸುಖವನ್ನು ಅನುಭವಿಸು." ಎಂದು ಆಶೀರ್ವಾದವನ್ನು ಮಾಡಿ ಅಲ್ಲಿ ಒಂದು ಕ್ಷಣವೂ ನಿಲ್ಲದೆ ವೇಗವಾಗಿ ಮನೆಯ ಕಡೆಗೆ ಬಂದುಬಿಟ್ಟನು.

ಸ್ವರ್ಣಕುಮಾರಿಯು ಮೋಹನನನ್ನು ಕಣ್ಮರೆಯಾಗುವವರೆಗೂ ನೋಡಿ ಉಸ್ಸೆಂದು ಒಂದು ಕಲ್ಲಿನ ಮೇಲೆ ಕುಳಿತುಬಿಟ್ಟಳು. ಪುಷ್ಪಮಾಲಿಕೆಯ ದಿನದ ಮೊದಲ್ಗೊಂಡು ಇಂದಿನ ವರೆಗೂ ನಡೆದ ಘಟನಾವಳಿಯೆಲ್ಲವೂ ಕಣ್ಣಮುಂದೆ ಬಂದು ನಿಂತವು. ಸ್ವರ್ಣಕುಮಾರಿಯು ತನ್ನೊಳಗೆ ತಾನೇ ಮಾತನಾಡಿಕೊಂಡಳು. ಆ ಮಾತುಗಳ ಅಭಿಪ್ರಾಯವು ಈ ರೀತಿಯಾಗಿದ್ದುವು:—

"ನಾನು ವಿವೇಕ ವಿಲ್ಲದೆಯೇ ಮೋಹನನೊಡನೆ ಏನ ಮಾತನಾಡಿದೆ! ನನ್ನ ಬುದ್ಧಿಯು ಮಣ್ಣಿನ ಮುದ್ದೆಯೇ ಸರಿ. ನಾನು ಯಾರಿಗೂ ಯಾವಾಗಲೂ ಬಿರುನುಡಿಗಳನ್ನಾಡಿ ಮನನೋಯಿಸಿದವಳೇ ಅಲ್ಲ; ಈಗ ನನಗೆ ಬಂದುದೇನು? ನಿಜವಾಗಿಯೂ ನನ್ನ ಬುದ್ಧಿಯಲ್ಲಿ ಪಿಶಾಚಿಯು ಆವರಿಸಿರಬೇಕು. ಇಲ್ಲದಿದ್ದರೆ ಮೋಹನನು ನನ್ನಲ್ಲಿ ಹೀಗೆ ಉಪೇಕ್ಷೆಯನ್ನು ತೋರಿಸಿ ಹೊರಟು ಹೋಗುತಿದ್ದನೇ? ಮೋಹನನು ನನ್ನನ್ನು ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುವನೆಂಬುದನ್ನು ನಾನು ತಿಳಿತಿಳಿದೂ, ಅವನ ಮನಸ್ಸಿಗೆ ವ್ಯಥೆಯನ್ನುಂಟುಮಾಡಬಹುದೇ! ನನ್ನ ತಿರಸ್ಕಾರದಿಂದ ಅವನ ಎದೆಯು ಒಡೆದುಹೋಯಿತು. ನಾನು ಮಧುಸೂದನನನ್ನು ಪ್ರೀತಿಸಿದುದರಿಂದ ಮೋಹನನ ಸರ್ವನಾಶಕ್ಕೆ ಕಾರಣ

ವಾದೆನು. ಒಂದುವೇಳೆ ಕಾರಣಾಂತರದಿಂದ ನನ್ನ ತಂದೆಯ ಸಂಕಲ್ಪವು ಈಡೇರುವುದಾದರೆ, ನನ್ನ ಬಾಳು ನಾಯ ಬಾಳಲ್ಲವೇ! ಇದನ್ನರಿಯದೆ ನಾನು ರಾತ್ರಿಕಂಡ ಬಾವಿಯಲ್ಲಿ ಹಗಲು ಹೊತ್ತಿನಲ್ಲಿಯೇ ಬಿದ್ದುಬಿಟ್ಟೆನಲ್ಲಾ! ಒಂದು ವೇಳೆ ನಾನು ಮಧುಸೂದನನನ್ನು ಪ್ರೀತಿಸುವೆನೆಂದು ಹೇಳಿ ತಂದೆಯ ಕೆಲಸಕ್ಕೆ ಅಡ್ಡಿಯನ್ನೊಡ್ಡುವುದೂ ಧರ್ಮವಲ್ಲ, ಪರಿಣಾಮದಲ್ಲಿ ನನಗೆ ಕ್ಷೇಮವೂ ಅಲ್ಲ. ಈಗ ನಾನು ಏನ ಮಾಡಲಿ? ಒಂದು ಕಡೆ ಮಧುಸೂದನ, ಮತ್ತೊಂದು ಕಡೆ ಮೋಹನ. ಮಧುಸೂದನನನ್ನು ಪ್ರೀತಿಸುವುದು ಬಿಟ್ಟು ಹೊಸದಾಗಿ ಮೋಹನನನ್ನು ಪ್ರೀತಿಸಲೇ? ಮದುವೆಯಾಗುವುದಾದರೆ ಪ್ರೀತಿಸಿಯೇ ತೀರಬೇಕು; ಇದಕ್ಕಾಗಿ ಚಿಂತಿಸುವುದೇನಿದೆ? ನನ್ನ ತಂದೆಯಾದರೋ ಸಾಧು ಪ್ರಕೃತಿಯುಳ್ಳವನು. ಅವನು ಏಕಮಾತ್ರ ಪುತ್ರಿಯಾದ ನನ್ನಲ್ಲಿ ಕೆಡುಕನ್ನು ಎಂದಿಗೂ ಬಯಸತಕ್ಕವನಲ್ಲ. ಅವನಿಗೆ ಮಧುಸೂದನನೂ ಗೊತ್ತು, ಮೋಹನನೂ ಗೊತ್ತು. ನನ್ನನ್ನು ಮೋಹನನಿಗೇ ಕೊಡಬೇಕೆಂದ ಆತನ ಸಂಕಲ್ಪಕ್ಕೆ ಅರ್ಥವೇನಿರಬಹುದು? ಆತನ ಅಭಿಪ್ರಾಯಕ್ಕೆ ವಿರೋಧವಾಗಿ ನನ್ನ ಮನಸ್ಸು ಮಧುಸೂದನನಲ್ಲಿಯೇ ಲೀನವಾಗುವುದರ ಮರ್ಮವೇನು? ನನಗೊಂದೂ ಗೊತ್ತಾಗುವುದೇ ಇಲ್ಲ. ಹಣೆಯಲ್ಲಿ ಬರೆದಿರುವಂತೆ ನಡೆದುಹೋಗುವುದೆಂದು ತಿಳಿದು ನಾನು ಸುಮ್ಮನಿರದೇ ಮಧುಸೂದನನ ರೂಪದಲ್ಲಿ ಮುಗ್ಧೆಯಾದೆನು. ಲೋಕಾನುಭವವಿಲ್ಲದ ಹುಡುಗರು ಮಾಡುವ ಕೆಲಸಗಳೇ ಹೀಗೆ. ಹಾ ವಿಧಿಯೆ! ನನ್ನನ್ನು ಈ ಕಷ್ಟಗಳಿಂದ ಪಾರಗಾಣಿಸಬಾರದೆ?"

ಸ್ವರ್ಣಕುಮಾರಿಯು ಈ ಬಗೆಯ ಚಿಂತೆಯಲ್ಲಿ ಎಷ್ಟು ಕಾಲವನ್ನು ಕಳೆದಳೋ ಅದು ಅವಳ ತಿಳಿವಿಗೇ ಬರಲಿಲ್ಲ. ಹಠಾತ್ತಾಗಿ ಅವಳಿಗೆ ಧ್ಯಾನಭಂಗವಾಯಿತು. ಆಕೆಯು ಕಣ್ಣು ತೆರೆದು ನೋಡುವಷ್ಟರೊಳಗಾಗಿ, ಮಧುಸೂದನನು ಅವಳ ಕೈಯನ್ನು ಹಿಡಿದುಕೊಂಡು, "ಕುಮಾರಿ, ಇದೇನು, ಮಕ್ಕಳಂತೆ ಅಳುತ್ತಿರುವೆ? ನಿನಗೇನಾಯಿತು? ನಿನ್ನ ದುಃಖಕ್ಕೆ ಕಾರಣವೇನೆಂಬುದನ್ನು ಬೇಗನೆ ತಿಳಿಸು. ನಿನ್ನನ್ನು ನೋಡಿದರೆ ನನ್ನ ಹೃದಯವು ಗಡಗಡನೆ ನಡುಗುವುದು. ನಿನ್ನ ದುಃಖವೇ ನನ್ನ ದುಃಖವು. ಸ್ವರ್ಣಕುಮಾರಿ, ನಿನ್ನ ಪ್ರಾಣಪ್ರಿಯನಾದ ನನ್ನಲ್ಲಿ ಮುಚ್ಚುಮರೆ ಮಾಡಬೇಡ, ಕಂಡೆಯಾ? ಎಂದು ಬೆಣ್ಣೆಯಲ್ಲಿ ಕೂದಲು ಎಳೆದಂತೆ ಮಾತನಾಡಿದನು.

ಈ ಮಾತುಗಳನ್ನು ಕೇಳಿದ ಸ್ವರ್ಣಕುಮಾರಿಯ ಕಿವಿಗಳಲ್ಲಿ ವೀಣಾಗಾನವಾದಂತಾಯಿತು. ಆ ಕೂಡಲೆ ಮೋಹನನ ವಿಷಯವು ಮರತೇ ಹೋಯಿತು; ಹಿಂದೆ ಮಾಡಿದ ಆಲೋಚನೆಗಳೆಲ್ಲವೂ ಎಲ್ಲಿಯೋ ಮಾಯವಾಗಿಬಿಟ್ಟುವು. ಸ್ವರ್ಣ

ಕುಮಾರಿಯು ಮಧುಸೂದನನನ್ನು ಕಂಡೊಡನೆಯೇ ಕಣ್ಣುಗಳನ್ನೊರಸಿಕೊಂಡು, "ನಾನೇನೂ ಅಳಲಿಲ್ಲವಲ್ಲಾ! ಅಳುವುದಕ್ಕೆ ಕಾರಣ ತಾನೇ ಏನಿರುವುದು?" ಎಂದು ಪ್ರತ್ಯುತ್ತರ ಕೊಟ್ಟಳು.

ಪ್ರಿಯ ಪಾಠಕ ಮಹಾಶಯ! ಪ್ರಣಯಿಗಳ ಮನೋಭಾವವನ್ನು ವರ್ಣಿಸುವುದು ಅನಾವಶ್ಯಕವೆಂದು ತೋರುವುದು. ಅನುಭವಿಸಿದವರಿಗೆ ಪ್ರಣಯ ವಿಲಾಸವನ್ನು ತಿಳಿಸಬೇಕಾದುದಿರುವುದಿಲ್ಲ; ಅನುಭವಿಸದವರಿಗೆ ಅದರ ತತ್ತ್ವವನ್ನು ತಿಳಿಸಿದರೂ ಗೊತ್ತಾಗಲಿಕ್ಕಿಲ್ಲ. ಆದುದರಿಂದ ನಾವು ಈ ವಿಷಯದಲ್ಲಿ ಮೌನವನ್ನು ಅವಲಂಬಿಸುವುದು ಶ್ಲಾಘ್ಯವಾದುದಾಗಿಯೇ ಇರುವುದು. ಒಂದು ವೇಳೆ ನಾವು ವರ್ಣನೆ ಮಾಡುವುದಕ್ಕೆ ಕುಳಿತರೂ ಪ್ರಣಯಾತ್ಮಕವಾದ ಮನೋಭಾವವನ್ನು ಸೂಚಿಸತಕ್ಕ ಸರಿಯಾದ ಪದಗಳು ಯಾವ ಭಾಷೆಯಲ್ಲಿಯೂ ದೊರೆಯುವುದೇ ಅಸಂಭವವಾದುದರಿಂದ, ನಮ್ಮ ಪ್ರಯತ್ನವೆಲ್ಲವೂ ನೀರಿನಲ್ಲಿ ಹೋಮಮಾಡಿದಂತಾಗಿಬಿಡುವುದು. ತಿಳಿದಷ್ಟು ಮಟ್ಟಿಗೆ ವರ್ಣನೆ ಮಾಡುವುದಕ್ಕೂ ಸರಿಯಾದ ಸಮಯಸಂದರ್ಭಗಳು ಒದಗಿಬಂದಿರಬೇಕು. ಈಗ ರಾತ್ರಿಯಾಗುತ ಬಂದುದರಿಂದ ಬಲುಹೊತ್ತು ಹೂದೋಟದಲ್ಲಿರುವುದು ಅಪಾಯಕರವಾದ ಕಾರಣ, ನಾವೆಲ್ಲರೂ ಚೌಧುರಿಮಹಾಶಯನ ಮನೆಗೆ ತೆರಳುವ. ಅಲ್ಲಿ ರಾತ್ರಿ ಭೋಜನಕ್ಕೆ ಎಲ್ಲವೂ ಸಿದ್ಧವಾಗಿರುವುದು. ಮೋಹನನು ಹೊರತಾಗಿ ಉಳಿದವರೆಲ್ಲರೂ ಭೋಜನ ಮಾಡುವುದಕ್ಕೆ ಸಿದ್ಧರಾಗಿ ಕುಳಿತಿರುವರು.

ಚೌಧುರಿಮಹಾಶಯನು ಮೋಹನನು ಊಟಕ್ಕೆ ಬಾರದಿರುವುದನ್ನು ನೋಡಿ, "ಮೋಹನನು ಕೆಲಸದ ಮೇಲೆ ಎಲ್ಲಿಗೋ ಹೋಗಿರಬಹುದು. ಅವನು ಆವಾಗ ಬರುವನೋ ಗೊತ್ತಾಗುವುದಿಲ್ಲ. ಆದುದರಿಂದ ನಾವೆಲ್ಲರೂ ಊಟ ಮಾಡುವ. ಅವನಿಗಾಗಿ ಎಲ್ಲರೂ ಕಾದುಕೊಂಡಿರಬೇಕಾದುದೇನೂ ಇಲ್ಲ," ಎಂದನು.

ಲಾಲಮಹಾಶಯನು ಇದನ್ನು ಕೇಳಿ, "ಇದೆಂತಹ ಮಾತು. ಮನೆಯಲ್ಲಿ ಮೂರೂ ಮತ್ತೊಂದು ಜನರಿಲ್ಲ. ಒಬ್ಬರನ್ನೊಬ್ಬರು ಬಿಟ್ಟು ಊಟಮಾಡುವುದು ಎಂದಿಗೂ ಸರಿಯಲ್ಲ. ಅವನು ಕೋಣೆಯಲ್ಲಿರಬಹುದೋ ಹೇಗೊ! ಯಾರಾದರೂ ಹೋಗಿ ನೋಡಿಕೊಂಡು ಬರುವುದು ಮೇಲು," ಎಂದು ಹೇಳಿದನು.

ಚೌಧುರಿಯು ಮೋಹನನ ಕೋಣೆಗೆ ಒಬ್ಬ ಪರಿಚಾರಕನನ್ನು ಕಳುಹಿಸಿಕೊಟ್ಟನು. ಪರಿಚಾರಕನು ಒಂದು ಕಾಗದವನ್ನು ಕೈಯ್ಯಲ್ಲಿ ಹಿಡಿದುಕೊಂಡು ಬಂದು, "ಮೋಹನನು ಅವನ ಕೋಣೆಯಲ್ಲಿಲ್ಲ. ಈ ಕಾಗದವು ಅವನ ಹಾಸು

ಗೆಯ ಮೇಲೆ ಬಿದ್ದಿದ್ದಿತು," ಎಂದು ಕಾಗದವನ್ನು ಚೌಧುರಿಮಹಾಶಯನ ಕೈಗೆ ಕೊಟ್ಟನು.

ಚೌಧುರಿಯು ಕಾಗದವನ್ನು ಬಿಚ್ಚಿ ಓದಿದನು. ಅದರಲ್ಲಿ ಈ ರೀತಿಯಾಗಿ ಬರೆದಿದ್ದಿತು :—

"ಶ್ರೀಮತ್ಪೂಜ್ಯ ಚರಣರಾದ ಗೋವಿಂದ ಚಂದ್ರ ಚೌಧುರಿ ಮಹಾಶಯರಲ್ಲಿ, ಪುತ್ರವತ್ಪಾಲಿತನಾದ ಮೋಹನನೆಂಬ ಅನಾಥ ಬಾಲಕನು ಮಾಡುವ ಸಾಷ್ಟಾಂಗ ನಮಸ್ಕಾರಗಳು. ಅದಾಗಿ,

ಅಜ್ಞಾತ ಕುಲಶೀಲನಾದ ನನ್ನನ್ನು ತಾವು ಬಾಲ್ಯದಿಂದಲೂ ಮಗನಂತೆಯೇ ತಿಳಿದು ಕಾಪಿಟ್ಟುದಕ್ಕಾಗಿ ನಾನು ನನ್ನ ಜನ್ಮವನ್ನೇ ನಿಮ್ಮ ಪಾದಮೂಲದಲ್ಲಿ ಧಾರೆಯೆರೆದಿರುವೆನು. ತಮ್ಮ ಉಪಕಾರಕ್ಕೆ ಪ್ರತಿಯಾಗಿ ನಾನು ಏನನ್ನೂ ಮಾಡಲಾರದ ಬಿಕಾರಿಯಾಗಿರುವುದಕ್ಕಾಗಿ ಎಷ್ಟು ಸಂಕಟಪಟ್ಟರೂ ಸಾಲದು. ನನ್ನ ಸಹೋದರಿಯಾದ ತಮ್ಮ ಪ್ರಿಯ ಕುಮಾರಿ ಸ್ವರ್ಣಕುಮಾರಿಗೆ ನನ್ನ ತ್ರಿಕರಣ ಶುದ್ಧವಾದ ಮಂಗಳಾಶಾಸನವನ್ನು ಇದರಿಂದ ಅರ್ಪಿಸುವನಾಗಿರುವೆನು. ತಮ್ಮ ಮಧುಸೂದನ ಮಹಾಶಯರಿಗೂ ವ್ರಜವಿಹಾರಿ ಲಾಲಮಹಾಶಯರಿಗೂ ನನ್ನ ನಮಸ್ಕಾರವನ್ನು ತಿಳಿಯ ಹೇಳಬೇಕು. ನಿಮ್ಮೆಲ್ಲರನ್ನೂ ಸಾಕ್ಷಾತ್ತಾಗಿ ಕಂಡು ನಿಮ್ಮಗಳಿಂದ ಅಪ್ಪಣೆಯನ್ನು ಪಡೆದುಕೊಂಡು ತೆರಳುವ ಯೋಗವು ನನ್ನ ಹಣೆಯಲ್ಲಿ ಬರೆಯಲಿಲ್ಲವಾದುದರಿಂದ, ಈ ದೋಷವನ್ನು ಎಲ್ಲರೂ ಕ್ಷಮಿಸಬೇಕಾಗಿ ಪ್ರಾರ್ಥನೆ.

ಸಮಾಜದ ಸ್ಥಿತಿಯು ಬಲುಮಟ್ಟಿಗೆ ಕೆಟ್ಟುಹೋಗಿರುವುದರಿಂದಲೂ ಅದರ ಹಾವಳಿಯಿಂದ ಪಾರಾಗುವುದು ಅತಿ ದುರ್ಲಭವಾಗಿರುವುದರಿಂದಲೂ, ನಾನು ಒಂದೇ ತಡವೆಗೆ ಸರಕಾರವಾಡಿಯನ್ನು ತ್ಯಾಗಮಾಡಿ ಹೊರಟುಹೋಗಿರುವೆನು. ನನಗೆ ಕುಲವಿಲ್ಲ, ಶೀಲವಿಲ್ಲ, ರೂಪವಿಲ್ಲ, ಪಿತೃಪೈತಾಮಹವಾದ ಸಂಪತ್ತು ಮೊದಲೇ ಇಲ್ಲ. ಗುಣಗಳ ಲವಲೇಶವೂ ಇಲ್ಲವೆಂಬುದು ನಾನಿಲ್ಲಿ ತಿಳಿಸಬೇಕಾದುದೇನೂ ಇರುವುದಿಲ್ಲ. ಇಂತಹ ಗಾಂಪರೊಡೆಯನಾದ ನಾನು ಯಾರಿಗಾದರೂ ಅಪಚಾರವನ್ನುಂಟುಮಾಡಿ ತೊಂದರೆ ಪಡಿಸಿದ್ದಲ್ಲಿ, ಅಂತಹ ದೋಷವನ್ನು ಎಲ್ಲರೂ ಏಕವಾಕ್ಯತೆಯಿಂದ ಮನ್ನಿಸಬೇಕು. ನನ್ನನ್ನು ನೀವು ಹುಡುಕುವ ಯತ್ನಮಾಡ ಕೆಲಸವಿಲ್ಲ. ನನ್ನಂತಹವನು ಮನೆಯಲ್ಲಿರುವುದರಿಂದ ಮನೆಯ ಜನರಿಗೆ ಅನೇಕ ಸಂದರ್ಭಗಳಲ್ಲಿ ತೊಂದರೆಯೇ ಆಗುವುದು. ಇನ್ನು ಮೇಲಾದರೂ ಎಲ್ಲವೂ ಸುಮುಖವಾಗಿಯೇ ಪರಿಣಮಿಸಬಹುದೆಂದು ನಾನು ದೃಢವಾಗಿಯೂ ನಂಬಿ ಈ ಕಾಗದವನ್ನು ಬರೆದಿರುವೆನು. ಎಲ್ಲರೂ ನನಗೆ ಆಶೀರ್ವಾದ ಮಾಡೋಣವಾಗಲಿ.

ನಾನು ಎಲ್ಲಿಯಾದರೂ ಮಾನದಿಂದ ಬದುಕಿಕೊಳ್ಳುವೆನು. ಇದೇ ನನ್ನ ಚರಮ ಪ್ರಾರ್ಥನೆ.

ತಮ್ಮ ಪ್ರೇಮಾಸ್ಪದ ಪುತ್ರವತ್ಪಾಲಿತನಾದ,

ಮೋಹನ ಕುಮಾರ.

ಚೌಧುರಿಮಹಾಶಯನು ಈ ರೀತಿಯಾಗಿ ಕಾಗದವನ್ನು ಓದಿ ಮುಗಿಸಿದನು. ಸ್ವರ್ಣಕುಮಾರಿಯು ಈ ಕಾಗದದ ಮರ್ಮವನ್ನು ಅರಿತವಳಾಗಿ ಬೆಂಕಿಯಲ್ಲಿ ಬಿದ್ದ ಹುಳದಂತೆ ವಿಲಿ ವಿಲಿ ಒದ್ದಾಡಿದಳು. ಚೌಧುರಿಮಹಾಶಯನ ಬಾಯಲ್ಲಿ ಯಾವ ಮಾತು ಹೊರಡದಿದ್ದರೂ, ಕಣ್ಣುಗಳಲ್ಲಿ ಜಲಪ್ರಳಯವೇ ಆಗಿಹೋಯಿತು. ಬಲುಹೊತ್ತಿನ ಮೇಲೆ ಚೌಧುರಿಯು ಚೇತರಿಸಿಕೊಂಡು, "ಮೋಹನ ಕುಮಾರ! ಹೊರಟುಹೋದೆಯಾ? ನಿನ್ನನ್ನು ಸಾಕುವುದಕ್ಕೆ ನಾನು ಎಷ್ಟು ಕಷ್ಟ ಪಟ್ಟೆನು! ಇದನ್ನು ನೀನು ತಿಳಿದುಕೊಳ್ಳದೆಯೇ ನನ್ನ ಕೈಬಿಟ್ಟು ಹೊರಟುಹೋದೆಯಾ? ಮೋಹನ, ಎಲ್ಲಿಗೆ ಹೊರಟುಹೋದೇ? ಏತಕ್ಕೆ ಹೊರಟುಹೋದೇ? ನಮ್ಮ ಮನೆಯಲ್ಲಿ ನಿನಗುಂಟಾದ ಉಪದ್ರವವೇನು? ನಿನಗೆ ಯಾರೇನೆಂದರು? ನಿನ್ನನ್ನು ಯಾರು ಏನ ಮಾಡಿದರು? ನನಗೆ ಗಂಡು ಮಕ್ಕಳು ಯಾರಿರುವರು? ಹಾ ದೈವವೇ! ಇದ್ದವನೊಬ್ಬನನ್ನೂ ದೂರ ಕಳುಹಿಸಿ ಬಿಟ್ಟೆಯಾ? ಈಗ ಯಾರನ್ನು ಮೋಹನನೆಂದು ಕರೆಯಲಿ? ಮೋಹನ! ನಿನ್ನ ಸಂಕಟವನ್ನು ನನ್ನಲ್ಲಿ ತಿಳಿಸಿದ್ದರೆ, ನಾನು ಎಲ್ಲವನ್ನೂ ಸರಿಪಡಿಸುತ್ತಿರಲಿಲ್ಲವೇ! ನೀನು ನನಗೂ ಹೇಳದೆ ಹೊರಟುಹೋಗಬಹುದೇ? ಮೋಹನ! ವೃದ್ಧನಾದ ನನ್ನನ್ನು ಅನಾಥನನ್ನಾಗಿ ಮಾಡಿ ಇಂತಹ ಕಾಲದಲ್ಲಿ ನನ್ನ ಕೈಬಿಟ್ಟು ಹೊರಟುಹೋದೆಯಲ್ಲಾ? ನನಗೆ ಇನ್ನಾರು ಗತಿ?" ಎಂದು ಹಂಬಲಿಸುತ್ತಾ ನೆಲದ ಮೇಲೆ ಬಿದ್ದು ಬಿಟ್ಟನು. ಎಲ್ಲರೂ ಶೈತ್ಯೋಪಚಾರ ಮಾಡಿದ ಬಳಿಕ—ಚೌಧುರಿಯು ಚೇತರಿಸಿಕೊಂಡು ಮತ್ತೆ ಮತ್ತೆ ಅಳತೊಡಗಿದನು. ಲಾಲಮಹಾಶಯನು ಬೆಪ್ಪಾಗಿಬಿಟ್ಟನು. ಮಧುಸೂದನನು ಬಹಿರಂಗದಲ್ಲಿ ವ್ಯಸನವನ್ನು ತೋರ್ಪಡಿಸಿದರೂ ಅಂತರಂಗದಲ್ಲಿ ಮೋಹನನು ಹೋದುದೇ ಮೇಲಾಯಿತೆಂದು ಸಂತೋಷಪಟ್ಟುಕೊಂಡು ಸ್ವರ್ಣಕುಮಾರಿಗೆ ಒಂದುಬಗೆಯ ಅಡಚಣೆಯು ದೂರ ತೊಲಗಿತು. ಇನ್ನುಮೇಲೆ ತನಗೆ ಸ್ವರ್ಣಕುಮಾರಿಯನ್ನು ಕೊಟ್ಟು ವಿವಾಹವಾಗುವುದರಲ್ಲಿ ಯಾವ ಪ್ರತಿಬಂಧಕವೂ ಇರುವುದಿಲ್ಲವೆಂದು ದೃಢವಾಗಿಯೂ ನಂಬಿದನು. ಚೌಧುರಿಮಹಾಶಯನು ಮಧುಸೂದನನ ದುರ್ವ್ಯವಹಾರದಿಂದ ಮೋಹನನು ಮನೆಯಿಂದ ಓಡಿಹೋಗಿರುವನೆಂದು ತಿಳಿದುಕೊಂಡು ಸುಮ್ಮನಾಗಿಬಿಟ್ಟನು.

---

## ಏಳನೆಯ ವಿಲಾಸ

### ಚಂದ್ರವದನೆ

ಮರುದಿನ ಬೆಳಗ್ಗೆ ಚೌಧುರೀಮಹಾಶಯನು ಹಾಸುಗೆಯಿಂದೆದ್ದು ಲಾಲ ಮಹಾಶಯನ ಬಳಿಗೈತಂದು, "ಮಹಾಶಯ, ನನಗಾರೂ ಸಲಹೆಗಳನ್ನು ಕೊಡ ತಕ್ಕವರೇ ಇಲ್ಲ ; ನೀವೇ ನನಗೆ ಎಲ್ಲಾ ವಿಷಯದಲ್ಲಿಯೂ ಬಂಧುವು, ಅಲ್ಲದೆಯೂ ಸತ್ಪರಾಮರ್ಶವನ್ನು ಕೊಡತಕ್ಕವರು. ಈಗ ನಾನೇನು ಮಾಡಲಿ; ತಿಳಿಸೋಣ ವಾಗಲಿ," ಎಂದನು.

ವ್ರಜವಿಹಾರಿ—ನೀವೇನು ಮಾಡಬೇಕೆಂದಿರುವಿರಿ ?

ಚೌಧುರಿ—ನಾನು ತಿಳಿದಿರುವುದೇನೆಂದರೆ—ಇಷ್ಟು ಹೊತ್ತಿಗೆ ಮೋಹ ನನು ಬಹುದೂರ ಹೋಗಿರಲಿಕ್ಕಿಲ್ಲ. ನಾಲ್ಕು ದಿಕ್ಕಿಗೂ ಜನರನ್ನು ಕಳುಹಿರುವೆನು. ಅವರು ಹೇಗಾದರೂ ಮಾಡಿ ಮೋಹನನನ್ನು ಕಂಡುಹಿಡಿದು ಕರೆದುಕೊಂಡು ಬರಬಹುದು.

ವ್ರಜವಿಹಾರಿ—ಇದರಿಂದ ಪ್ರಯೋಜನವೇನೂ ಆಗಲಾರದೆಂದು ನನ್ನ ನಂಬುಗೆ. ಮೋಹನನು ಎಲ್ಲಿಗೆ ಹೋಗಿರುವನೋ ಗೊತ್ತಾಗಲೊಲ್ಲದು. ದೈವಾನು ಕೂಲತೆಯಿರುವುದಾದರೆ, ಮೋಹನನು ತಾನಾಗಿಯೇ ಹಿಂತಿರುಗಿ ಬರಬಹುದು, ಇಲ್ಲವಾದರೆ ನಾವು ಎಷ್ಟು ಪ್ರಯತ್ನಮಾಡಿದರೂ ಅವನು ಸಿಕ್ಕುವ ಸಂಭವವೇ ಇಲ್ಲ. ಈಗ ಅವನು ಹೊರಟುಹೋದುದರಿಂದ ಎಲ್ಲರಿಗೂ ವ್ಯಸನವುಂಟಾ ಗಿರುವುದೇನೋ ನಿಜ ; ಕೆಲವು ದಿನಗಳೊಳಗಾಗಿ ಇದೆಲ್ಲವೂ ಮರತೇ ಹೋಗು ವುದು. ಮಹಾಶಯ, ನೀವು ಇದಕ್ಕಾಗಿ ಸಂಕಟಪಡಬೇಕಾದುದೇನೂ ಇರುವು ದಿಲ್ಲ. ಮೋಹನನು ಹೆಣ್ಣು ಹುಡುಗಿಯಲ್ಲ, ಅವನು ಸಚ್ಚರಿತ್ರನಾದ ಹುಡುಗ ನಾಗಿರುವುದರಿಂದ, ಎಲ್ಲಿಯಾದರೂ ಬದುಕಿಕೊಳ್ಳುವನು. ಮೋಹನನು ಹೊರಗೆ ಹೋಗಿ ಲೋಕಾನುಭವವನ್ನು ಸಂಪಾದಿಸಿಕೊಂಡುಬರಲಿ. ದೇವರ ದಯೆಯಿದ್ದರೆ ಕೆಲವು ದಿನಗಳ ಮೇಲೆ ಅವನಿಂದ ಯೋಗಕ್ಷೇಮಕ್ಕೆ ಪತ್ರ ಬಂದರೂ ಬರ ಬಹುದು.

ಚೌಧುರಿಗೆ ಲಾಲಮಹಾಶಯನು ಹೇಳಿದುದೆಲ್ಲವೂ ನಿಜವಾಗಿಯೇ ಕಂಡು ಬಂದಿತು. "ಮೋಹನನು ಎಲ್ಲಿಗೆ ಹೋದನೋ ಅದು ಯಾರಿಗೂ ಗೊತ್ತಿಲ್ಲ, ಎಂದ ಮೇಲೆ ಅವನನ್ನು ಹುಡುಕಿ ಪ್ರಯೋಜನವೇನು ? ಮೋಹನನು ಚಿಕ್ಕ ಹುಡುಗನೇನೂ ಅಲ್ಲ, ಅವನು ದೇಶಗಳನ್ನು ನೋಡಿಕೊಂಡುಬರುವುದರಿಂದ

ಕೆಡುಕೇನೂ ಆಗಲಾರದು. ಗಂಡಸಾಗಿ ಹುಟ್ಟಿದ ಮೇಲೆ ಪರಸ್ಥಳಗಳಲ್ಲಿ ಸಂಚಾರಮಾಡಿಲೋಕಾನುಭವವನ್ನು ಸಂಪಾದಿಸುವುದರಿಂದ ಸಂಸಾರದಲ್ಲಿ ಸುಖವುಂಟು. ಏಕಾಕಿಯಾದ ಯುವಕನು ಪರಸ್ಥಳದಲ್ಲಿ ಕೆಟ್ಟುಹೋಗುವ ಸಂಭವವುಂಟೆಂದು ಅನುಭವಿಸಿದವರು ಹೇಳುವರು. ಮೋಹನನು ಗುಣಾಢ್ಯನಾದುದರಿಂದ ಈ ಸಂಶಯಕ್ಕೂ ಅವಕಾಶ ವಿರಲಾರದು. ಮೋಹನನು ಸಂಚಾರಮಾಡಿಕೊಂಡು ಬರಲಿ.'' ಎಂದು ಮುಂತಾಗಿ ಆಲೋಚಿಸಿ, ಚೌಧುರಿಯು ತನ್ನ ಮನಸ್ಸಿಗೆ ಸಮಾಧಾನವನ್ನು ತೆಗೆದುಕೊಂಡು ಹೂದೋಟದ ಕಡೆಗೆ ಹೊರಟುಹೋದನು.

ಕೆಲವು ದಿನಗಳು ಸಾಮಾನ್ಯವಾಗಿಯೇ ಕಳೆದು ಹೋದುವು. ಹೀಗಿರಲೊಂದುದಿನ ಭೋಜನಾನಂತರದಲ್ಲಿ ಚೌಧುರಿಯು ಮಧುಸೂದನ ಲಾಲಮಹಾಶಯರೊಡನೆ ಮಾತನಾಡುತ್ತಾ ಕುಳಿತಿರುವಲ್ಲಿ ಚೌಧುರಿಯ ಅಕ್ಕನು ಬಂದು, ''ಚೌಧುರಿ, ಇಷ್ಟು ದಿನಗಳಾದರೂ ನೀನು ಇನ್ನೂ ಸುಮ್ಮನಿರುವೆಯಲ್ಲಾ! ನಿನಗೆ ಲೋಕದ ವಿಚಾರವೇ ಗೊತ್ತಾಗುವುದಿಲ್ಲ. ಸ್ವರ್ಣಕುಮಾರಿಯನ್ನು ಮೋಹನ ಕುಮಾರನಿಗೆ ಕೊಟ್ಟು ಮದುವೆಮಾಡಬೇಕೆಂದು ನೀನು ಮಾಡಿದ್ದ ಸಂಕಲ್ಪವು ಏನಾಯಿತು? ಈಗ ಮೋಹನನು ಓಡಿಹೋದನು. ಹೇಗಾದರೂ ಬೇರೆಯ ಮುಂದಣ ಪ್ರಯತ್ನವನ್ನು ಮಾಡಿಯೇ ತೀರಬೇಕು. ಹುಡುಗಿಯು ಇನ್ನೂ ಮದುವೆಯಿಲ್ಲದೆ ಮನೆಯಲ್ಲಿರುವುದನ್ನು ನೋಡಿ ನನಗೆ ಭಯವಾಗುವುದು. ಹೆಂಗುಸರ ಮನಸ್ಸು ಗಂಡಸರಿಗೆ ಗೊತ್ತಾಗುವುದೇ ಇಲ್ಲ. ಇದನ್ನು ಗಂಡಸರಿಗೆ ಹೇಗೆ ತಿಳಿಸಬೇಕೋ ದೇವರೊಬ್ಬನೇ ಬಲ್ಲನು,'' ಎಂದು ಹೇಳಿದಳು.

ಚೌಧುರಿಯು ಮೋಹನನನ್ನು ಜ್ಞಾಪಿಸಿಕೊಂಡು ಬಿಕ್ಕಿ ಬಿಕ್ಕಿ ಅಳುತ್ತಾ, ''ಅಕ್ಕ! ನನಗೇನೂ ಗೊತ್ತಾಗುವುದಿಲ್ಲ; ಈ ಸಂದರ್ಭದಲ್ಲಿ ನೀವುಗಳೆಲ್ಲರೂ ಹೇಗೆ ಹೇಳುವಿರೋ, ಹಾಗೆಯೇ ನಾನು ನಡೆದುಕೊಳ್ಳುವೆನು,'' ಎಂದುತ್ತರ ಕೊಟ್ಟನು.

ಅಕ್ಕ—ಹುಡುಗಿಗೆ ಸರಿಯಾದ ವರನನ್ನು ದೂರದಿಂದ ಕರೆತರಬೇಕಾದುದಿಲ್ಲ. ನಮ್ಮ ಮಧುಸೂದನನೇ ಇರುವನು. ಮಧುವು ಆವುದರಲ್ಲಿಯೂ ಮೋಹನನಿಗೇನೂ ಕಡಿಮೆಯಾಗಿಲ್ಲ. ಹೀಗಿರುವಲ್ಲಿ ಈ ಸಂಬಂಧವನ್ನು ಏಕೆ ಬೆಳೆಸಬಾರದು?

ತಮ್ಮ—ನೀವೆಲ್ಲರೂ ಸಮ್ಮತಿಸಿ ಮಧುಸೂದನನೂ ಒಪ್ಪುವುದಾದರೆ ನನ್ನ ಅಡ್ಡಿಯೇನೂ ಇರುವುದಿಲ್ಲ.

ಚೌಧುರಿಯ ಅಕ್ಕನು ತಮ್ಮನ ಅಭಿಪ್ರಾಯವನ್ನು ತಿಳಿದುಕೊಂಡು ತನ್ನ ಕೆಲಸದ ಮೇಲೆ ಹೊರಟುಹೋದಳು. ಮೋಹನನು ಹೊರಟುಹೋದಂದಿನಿಂದಲೂ ಚೌಧುರಿಯು ಎಲ್ಲಾ ಕೆಲಸಗಳನ್ನೂ ತಾನೇ ನೋಡಿಕೊಳ್ಳಬೇಕಾಗಿ ಬಂದುದರಿಂದ, ಅವನು ಊಟವಾದ ಕೂಡಲೆ ಮನೆಯಲ್ಲಿ ಒಂದು ಕ್ಷಣಕಾಲವೂ ನಿಲ್ಲದೆ ಹೊರಗೆ ಹೊರಟುಹೋಗುತ್ತಿದ್ದನು. ಎಂದಿನಂತೆಯೇ ಈ ದಿನವೂ ಚೌಧುರಿಯು ಊಟಮಾಡಿ ಕೈತೊಳೆದುಕೊಂಡೊಡನೆಯೇ ತನ್ನ ಕೆಲಸದ ಮೇಲೆ ಹೊರಟುಹೋದನು. ಮಧುಸೂದನನು ಲಾಲಮಹಾಶಯನ ಕೋಣೆಗೆ ಬಂದು ಕುಳಿತನು. ಲಾಲಮಹಾಶಯನು ಕಿಟಕಿಯ ಬಳಿ ಹಾಸುಗೆಯನ್ನು ಹಾಸಿ ಅದರ ಮೇಲೆ ಕುಳಿತುಕೊಂಡು ಮಧುಸೂದನನೊಡನೆ ಮಾತನಾಡುತ್ತಿದ್ದ ಹಾಗೆಯೇ ಮಲಗಿ ನಿದ್ರಿಸಿದನು. ಮಧುಸೂದನನು ನಿರಾತಂಕವಾಗಿ ಸ್ವರ್ಣಕುಮಾರಿಯೊಡನೆ ಮಾತನಾಡುವುದಕ್ಕೆ ಅವಕಾಶವು ಸಿಕ್ಕಿದುದಕ್ಕಾಗಿ ತನ್ನ ಅದೃಷ್ಟವನ್ನು ಕೊಂಡಾಡುತ್ತಾ ಹೂದೋಟದಲ್ಲಿ ಸ್ವರ್ಣಕುಮಾರಿಯನ್ನು ನೋಡುವುದಕ್ಕಾಗಿ ತೆರಳಿದನು. ಅಲ್ಲಿ ಸ್ವರ್ಣಕುಮಾರಿಯು ಇರಲಿಲ್ಲ.

ಮಧುಸೂದನನು ಸ್ವರ್ಣಕುಮಾರಿಯನ್ನು ನಿರೀಕ್ಷಿಸುತ್ತಾ ಒಂದು ಗಿಡದ ಕೆಳಗೆ ಕುಳಿತುಕೊಂಡು ಮುಂದೆ ಮಾಡಬೇಕಾದ ಕೆಲಸಗಳನ್ನು ಮೊದಲೇ ಸಿದ್ಧಾಂತಪಡಿಸಿಕೊಳ್ಳುತಿದ್ದನು. ಅಷ್ಟುಹೊತ್ತಿಗೆ ಸರಿಯಾಗಿ ಹೆಂಗುಸೊಬ್ಬಳು ಹೂದೋಟದ ದಕ್ಷಿಣ ದಿಕ್ಕಿನ ಬಾಗಿಲಿಂದ ಮೆಲ್ಲ ಮೆಲ್ಲನೆ ತೋಟದ ಮಧ್ಯಕ್ಕೆ ಬರುತ್ತಿದ್ದಳು. ಆಕೆಯು ಪೂರ್ಣಯುವತಿ. ಯುವತಿಯರಿಗೆ ಮುಖ್ಯವಾದ ಆಭರಣವೆನಿಸಿದ ನಾಚುಗೆಯು ಅವಳಲ್ಲಿ ಕಂಡುಬರುತ್ತಿರಲಿಲ್ಲ. ಆಕೆಯ ಕಣ್ಣುಗಳನ್ನು ನೋಡಿದರೆ ಭಯವಾಗುತಿದ್ದುವೇ ಹೊರತು ಸಂತೋಷವುಂಟಾಗುತ್ತಿರಲಿಲ್ಲ. ಇದರಿಂದ ಆಕೆಯ ಮುಖದಲ್ಲಿ ಪಾತಿವ್ರತ್ಯದ ಗುರುತುಗಳೇ ಲೋಪವಾಗಿದ್ದಿತೆಂದು ಆರು ಬೇಕಾದರೂ ಹೇಳಬಹುದಾಗಿದ್ದಿತು. ಆಕೆಯು ಬಾಲ್ಯದಲ್ಲಿ ಅತಿ ಸುಂದರಿಯಾಗಿದ್ದಳೆಂದು ಊಹಿಸುವುದಕ್ಕೆ ಸಾಕಾದಷ್ಟು ಕಾರಣಗಳು ಇನ್ನೂ ಕಂಡುಬರುತಿದ್ದುವು. ಆಕೆಯಲ್ಲಿ ಪೂರ್ಣಯೌವನವಿದ್ದರೂ ದೇಹವು ಗಳಿತಪ್ರಾಯವಾಗಿದ್ದುದನ್ನು ನೋಡಿದರೆ, ತಿನ್ನುವ ಅನ್ನಕ್ಕೇ ಅಭಾವವಾಗಿರಬಹುದೆಂದು ತೋರುತಿದ್ದಿತು. ಇಂತಹ ಹೆಂಗುಸು ಬರುತ್ತಿರುವುದನ್ನು ನೋಡಿ ಮಧುಸೂದನನು ಬೆಚ್ಚಿಬಿದ್ದವನಾಗಿ ತೋಟದ ಸುತ್ತಲೂ ನೋಡಿದನು. ಅಲ್ಲಿ ಮತ್ತಾರೂ ಕಣ್ಣಿಗೆ ಬೀಳದಿರಲು, ಮಧುಸೂದನನು ಆಕೆಯ ಬಳಿಗೆ ಓಡಿಬಂದು, "ಚಂದ್ರವದನೆ! ಇಲ್ಲಿಗೆ ಏತಕ್ಕೆ ಬಂದೆ?" ಎಂದು ಪಿಸುಮಾತಿನಿಂದ ಕೇಳಿದನು.

ಚಂದ್ರವದನೆಯು ಭಾವಬೋಧಕವಾದ ಮುಗಳು ನಗೆಯನ್ನು ನಕ್ಕು, "ಇಲ್ಲಿ ನನ್ನ ಪ್ರಾಣಕಾಂತನು ಬಂದಿರಬಹುದು, ನಾನು ಬರಕೂಡದೇತಕೆ?" ಎಂದುಸುರಿದಳು.

"ಚಂದ್ರ! ನಿನ್ನ ಕಾಲನ್ನು ಬೇಕಾದರೂ ಹಿಡಿದುಕೊಳ್ಳುವೆನು, ನೀನು ಮಟ್ಟಿಗೆ ಇಲ್ಲಿ ಗಲಾಟೆಯನ್ನು ಮಾಡದಿರಬೇಕು," ಎಂದು ಹೇಳಿ ಒಂದು ಮರೆಯಾದ ಸ್ಥಳವನ್ನು ತೋರಿಸಿ, "ಚಂದ್ರ! ನೀನು ಇಲ್ಲಿ ಕುಳಿತುಕೊಂಡು ಒಂದು ಗಳಿಗೆಯ ವರೆಗೆ ವಿಶ್ರಾಂತಿಯನ್ನು ತೆಗೆದುಕೊಳ್ಳು. ನಾನು ಇಷ್ಟರಲ್ಲಿಯೇ ಬಂದು ಬಿಡುವೆನು," ಎಂದನು.

ರಮಣಿಯು ಮಧುಸೂದನನ ಮಾತಿಗೆ ಪ್ರತಿಯಾಗಿ ಹೇಳದೆ, ಮರೆಯಾದ ಪ್ರದೇಶದಲ್ಲಿ ಹೋಗಿ ಕುಳಿತುಕೊಂಡಳು. ಮಧುಸೂದನನು ಮನೆಗೆ ಹೋಗಿ ನೋಡಿದನು, ಅಲ್ಲಿ ಆರೂ ಇರಲಿಲ್ಲ. ಲಾಲಮಹಾಶಯನು ಮಟ್ಟಿಗೆ ಗಾಳಿಯು ಬರಲೆಂದು ಕಿಟಕಿಯನ್ನು ತೆರೆದು ಅದರ ಪಕ್ಕದಲ್ಲಿಯೇ ಮಲಗಿ ನಿದ್ರಿಸುತ್ತಿದ್ದನು. ಮಧುಸೂದನನು ಇದೆಲ್ಲವನ್ನೂ ನೋಡಿಕೊಂಡು ತೋಟದಲ್ಲಿ ಚಂದ್ರವದನೆಯಿದ್ದಲ್ಲಿಗೆ ಬಂದನು.

ಲಾಲಮಹಾಶಯನು ನಿಜವಾಗಿಯೂ ನಿದ್ರೆಮಾಡುತ್ತಿರಲಿಲ್ಲ. ಆತನು ಕಿಟಕಿಯಿಂದ ಹೊಸ ಹೆಂಗುಸು ಬಂದುದನ್ನು ನೋಡಿ ಮರೆಯಲ್ಲಿಯೇ ಇದ್ದುಕೊಂಡು ವಿದ್ಯಮಾನವೇನೆಂಬುದನ್ನು ತಿಳಿಯಲಾರಂಭಿಸಿದನು. ಮಧುಸೂದನನು ಗಿಡದ ಮರೆಯಲ್ಲಿ ಕುಳಿತಿದ್ದ ಹೆಂಗುಸಿನ ಬಳಿಗೆ ಬಂದು ಅವಳ ಪಕ್ಕದಲ್ಲಿ ಕುಳಿತುಕೊಂಡು, "ಚಂದ್ರವದನೆ, ಈಗ ನಿನ್ನ ಅಭಿಪ್ರಾಯವೇನು? ನೀನು ನನಗೆ ಅಪಮಾನಮಾಡಬೇಕೆಂದು ಬಯಸಿ ಬಂದಿರುವೆಯಾ? ನೀನು ಇಷ್ಟು ದೂರ ಬರಲು ಕಾರಣವೇನು?" ಎಂದು ಮಾತನಾಡಿಸಿದನು.

"ನಾನೇತಕ್ಕೆ ಬಂದೆನೇ! ಹಣಕ್ಕಾಗಿ ಬಂದಿರುವೆನು. ನೀನು ನನಗೆ ಮೋಸಮಾಡಿ ಬಂದುದು ಮರೆತುಬಿಟ್ಟೆಯಾ? ಇದಾರು ಮಾಡುವ ಕೆಲಸ?" ಎಂದು ಹೇಳಿ ಒಂದು ಕ್ರೂರವಾದ ನೋಟವನ್ನು ಮಧುಸೂದನನ ಮೇಲೆ ಬೀರಿದಳು. ಮಧುಸೂದನನು ಈ ಬಿರುಗಣ್ಣಿನ ಬೆದರಿಕೆಯಿಂದ ಬೆಚ್ಚಿ ಬೆಂಡಾಗಿ ಹೋದನು.

ಬಳಿಕ ಮಧುಸೂದನನು ಕಂಗೆಟ್ಟವನಾಗಿ, "ನಿನಗಾವುದೂ ತಿಳಿಯದೇ? ಚಂದ್ರ! ಇನ್ನು ನಿನ್ನನ್ನು ಕಾಪಿಡುವುದು ನನ್ನಿಂದಾಗಲಾರದು. ನಿನಗೂ ನನಗೂ ಸಂಬಂಧವು ತಪ್ಪಿಹೋದ ಮೇಲೆ, ನನ್ನಿಂದ ನೀನು ಸಾಹಾಯ್ಯವನ್ನು

ಬಯಸುವುದು ಅದಾವ ಧರ್ಮ? ಈಗ ನಾನೇನ ಮಾಡುವುದಕ್ಕೂ ಸಾಧ್ಯವಿಲ್ಲ," ಎಂದನು.

ಚಂದ್ರವದನೆ—ಮಧುಸೂದನ, ನಡುನೀರಿನಲ್ಲಿ ಕೈಬಿಟ್ಟರೆ ನನ್ನ ಗತಿ ಯೇನು? ನೀನು ನನ್ನನ್ನು ಗುಟ್ಟಾಗಿ ಮದುವೆಮಾಡಿಕೊಳ್ಳಲಿಲ್ಲವೇ? ಮನೆ ಮಾಡಿ ಸಂಸಾರವನ್ನು ನಡೆಯಿಸಬೇಕಾಗುವುದೆಂಬುದನ್ನು ತಿಳಿತಿಳಿದೂ ಅದನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಹೀಗೆಲ್ಲಾ ಮಾತನಾಡಿದರೆ ಒಪ್ಪುವರಾರು? ನೀನೆಲ್ಲಿ ದ್ದರೆ ನಾನೂ ಅಲ್ಲಿಯೇ ಇರುವೆನು. ಕೈಹಿಡಿದವಳನ್ನು ಧಿಕ್ಕರಿಸುವುದು ನಿನ್ನಂತಹ ವನಿಗೆ ಎಂದೆಂದಿಗೂ ತಕ್ಕುದಲ್ಲ.

ಮಧುಸೂದನ—ಚಂದ್ರ! ಗಟ್ಟಿಯಾಗಿ ಮಾತನಾಡಬೇಡ ; ನಿನ್ನ ಕಾಲಿಗೆ ಬೀಳುವೆನು. ಆರಾದರೂ ಕೇಳಿದರೆ ನನ್ನ ಪ್ರಾಣವೇ ಹಾರಿಹೊ ದಂತಾಗುವುದು.

ಚಂದ್ರ—ಹೆಂಗುಸಿಗೆ ಪತಿಯೊಡನೆ ಮಾತನಾಡುವುದಕ್ಕೆ ಭಯವೇನ ಬಂದಿದೆ? ಮದುವೆಯಾದವಳನ್ನೇ ನೀನು ಲಕ್ಷ್ಯಮಾಡದಿರುವಾಗ, ನಾನು ನಿ ನ್ನು ಮದುವೆಯಾಗದಿದ್ದರೆ, ನೀನು ನನ್ನನ್ನು ಲಕ್ಷ್ಯಮಾಡತಿದ್ದೆಯಾ? ನಾ ಮೋಸವನ್ನರಿಯದ ಹೆಂಗುಸಾದುದರಿಂದಲೇ ನಿನ್ನ ಪಾಶಕ್ಕೆ ಬಿದ್ದು ಸಾಯು ಹೊತ್ತು ಬಂದಿತು. ಗಂಡಸರನ್ನು ಎಷ್ಟೇ ನಂಬಕೂಡದೆಂದಿದ್ದರೂ ಒಂದೊಂ ವೇಳೆ ಬುದ್ಧಿಯು ಮೋಸಹೋಗುವುದು. ನಾನು ನಿನ್ನನ್ನು ನಂಬಿ ಆ ಸಮರ್ಪಣೆ ಮಾಡಿದುದಕ್ಕೆ, ನಿನ್ನಿಂದ ನನಗೆ ಸರಿಯಾದ ಫಲವೇ ಉಂಟಾ ತ್ತಿರುವುದು.

ಮಧು—ಚಂದ್ರ! ಕೂಗಬೇಡ. ನಾನು ನಿನ್ನನ್ನು ಬಿಡುವುದಾಗಿ ತಿ ದಾಗ, ನೀನು ಅದನ್ನು ಒಪ್ಪಿಕೊಳ್ಳಲಿಲ್ಲವೇ?

ಚಂದ್ರ—ಆಗ ನಾನು ಹಾಸ್ಯಕ್ಕಾಗಿ ಒಪ್ಪಿದ್ದರೂ ಒಪ್ಪಿರಬಹ ಈಗ ಅದು ಆರ ಪ್ರಯೋಜನಕ್ಕೆ ಬಂದೀತು? ಅದೆಲ್ಲಾ ಹಾಗಿರಲಿ. ಈಗ ಹೊಟ್ಟೆಗಿಲ್ಲದೆ ಸಾಯುವ ಹೊತ್ತು ಬಂದಿದೆ. ನನಗೇನ ಹೇಳುವೆ?

ಮಧು—ಚಂದ್ರವದನೆ! ನನ್ನ ಸ್ಥಿತಿಗತಿಗಳೆಲ್ಲವೂ ನಿನಗೆ ಚೆ ಯೂ ಗೊತ್ತು ; ನೀನು ತಿಳಿತಿಳಿದೂ ನನ್ನನ್ನು ಪೀಡಿಸುವುದು ತರವಲ್ಲ. ನಿನ್ನ ಮೋಹದಲ್ಲಿ ಸಿಕ್ಕಿ ನನ್ನ ಸರ್ವಸ್ವವನ್ನೂ ಸಮರ್ಪಿಸಲಿಲ್ಲವೇ! ಇಲ್ಲದುದನ್ನು ಎಲ್ಲಿಂದ ತಂದು ಕೊಡಲಿ? ಇನ್ನು ನೀನು ಸುಮ್ಮನೆ ತೆರಳು. ನಿ ನನಗೂ ಸಂಬಂಧವೆಲ್ಲವೂ ತೀರಿಹೋಗಿದೆ.

ಚಂದ್ರ—ಮಧು, ವಿವೇಕವಿಲ್ಲದೆ ಏನ ಬಗುಳುವೇ? ನೀನು ಈ ಮಾತುಗಳೆಲ್ಲವನ್ನೂ ಮದುವೆಯಾದವಳ ಮುಂದೆಯೇ ಹೇಳುವುದು? ನೋಡಿದವರೂ ಕೇಳಿದವರೂ ಏನೆಂದಾರೆಂಬುದು ಕೂಡ ನಿನ್ನ ತಲೆಗೆ ಹತ್ತಲಿಲ್ಲವಲ್ಲಾ! ನೀನು ನನ್ನನ್ನು ತ್ಯಾಗಮಾಡಿದರೂ ನಾನು ನಿನ್ನನ್ನೆಂದಿಗೂ ತ್ಯಾಗಮಾಡತಕ್ಕವಳಲ್ಲ. ಇದು ಮಟ್ಟಿಗೆ ಚೆನ್ನಾಗಿ ಜ್ಞಾಪಕದಲ್ಲಿರಲಿ. ಕಯ್ಯಲ್ಲಾಗದ ಹೆಂಗುಸನ್ನು ಈರೀತಿಯಾಗಿ ಸಂಕಟ ಪಡಿಸುವುದು ನಿನಗೆ ಮಂಗಳವಲ್ಲ. ಎಚ್ಚರಿಕೆ!

ಮಧುಸೂದನನು ಏನೋ ವಿಪರೀತಕ್ಕಿಡುವುದೆಂದು ತತ್ತರಗುಟ್ಟುತ್ತಾ ಕಂಪಿತಸ್ವರದಿಂದ, "ಚಂದ್ರ, ನಾನು ಕಾಲ ಹಿಡಿದುಕೊಂಡು ಕ್ಷಮೆಯನ್ನು ಬೇಡುವೆನು. ಸಕಲಸಂಪತ್ತನ್ನೂ ನಿನ್ನ ರೂಪಾಗ್ನಿಯಲ್ಲಿ ಹೋಮಮಾಡಿ ಬಿಕಾರಿಯಾಗಿರುವ ನನ್ನನ್ನು ಮತ್ತೆಮತ್ತೆ ಗೋಳಿಡಿಸಬೇಡ. ನೊಂದವನನ್ನು ನೋಯಿಸುವುದು ಆರಿಗೂ ತಕ್ಕುದಲ್ಲ. ಈಗಣ ಸ್ಥಿತಿಯಲ್ಲಿ ನಿನ್ನನ್ನು ಕಟ್ಟಿಕೊಂಡು ಸಂಸಾರಮಾಡುವುದು ನನಗೆ ಅಸಾಧ್ಯವಾಗಿ ಕಂಡುಬಂದಿರುವುದು. ನೀನು ನನ್ನನ್ನು ಬಿಟ್ಟು ಬಿಡು; ನಾನಾದರೋ ನಿನ್ನನ್ನು ಮೊದಲೇ ಬಿಟ್ಟಿರುವೆನು.

ಚಂದ್ರ—ನಿಮ್ಮ ಮಾತುಗಳನ್ನು ಕೇಳಿಕೇಳಿ ನನಗೆ ಸಾಕಾಗಿಹೋಗಿದೆ. ಇನ್ನೂ ನಿಮ್ಮ ಮಾತುಗಳನ್ನು ಕೇಳಿ ಮೋಸಹೋಗುವಷ್ಟು ದಡ್ಡ ಹೆಂಗುಸು ನಾನಾಗಿಲ್ಲ. ಈಗ ನಾನು ನಿಮ್ಮೊಡನೆ ಸಂಸಾರಮಾಡಿಕೊಂಡಿರುವುದಕ್ಕಾಗಿ ಬಂದವಳೇ ಹೊರತು ನಿಮ್ಮ ಮುದ್ದು ಮಾತುಗಳಿಗೆ ಬೆರಗಾಗಿ ಹೊರಟು ಹೋಗಲು ಬಂದವಳಲ್ಲ. ನೀನು ಮದುವೆ ಮಾಡಿಕೊಳ್ಳುವ ಕಾಲದಲ್ಲಿ ಕೊಟ್ಟ ಭರವಸೆಗಳೆಲ್ಲಾ ಈಗ ಎಲ್ಲಿಗೆ ಹೋದುವು? ಸ್ವಕಾರ್ಯವನ್ನು ನೆರವೇರಿಸಿಕೊಳ್ಳುವುದಕ್ಕಾಗಿ ಬಗೆಬಗೆಯ ಆಸೆಗಳನ್ನು ತೋರಿಸಿ, ಈಗ ಕಯ್ಯಲ್ಲೇನೂ ಸಾಗದೆಂದು ಕೈಗಳನ್ನು ಅಲ್ಲಾಡಿಸಿದರೆ ನಾನು ಕೇಳತಕ್ಕವಳೇ? ನಿನಗೆ ಬೇಕಾದ ಕಾಲಗಳಲ್ಲಿ ನಾನು ಬರಬೇಕು; ನಿನಗೆ ಬೇಡದ ಕಾಲಗಳಲ್ಲಿ ನಾನು ತಲೆಯ ಮೇಲೆ ಗುಡ್ಡೆ ಹಾಕಿಕೊಂಡು ಹೊರಟುಹೋಗಬೇಕು. ಇದಕ್ಕಾಗಿಯಲ್ಲವೇ ನೀನು ನನ್ನನ್ನು ಮದುವೆಯಾದುದು?

ಮಧು—ಚಂದ್ರ! ಈಗ ಆಮಾತುಗಳೆಲ್ಲವನ್ನೂ ಆಡಿಕೊಂಡುದರಿಂದ ಪ್ರಯೋಜನವೇನು? ಈಗ ನಿನಗೇನಾಗಬೇಕು? ಹೇಳು.

ಚಂದ್ರ—ನಾನು ಮೊದಲೇ ಹೇಳಲಿಲ್ಲವೇ. ನನಗೆ ಬೇಕಾಗಿರುವುದು ಹಣ, ಹಣ, ಹಣ. ನಾನು ಹೊಟ್ಟೆಗಾಗಿ ಮೈಮೇಲಿದ್ದ ಒಡವೆಗಳನ್ನೆಲ್ಲಾ ಮಾರಿಕೊಂಡು ತಿಂದುದಾಯಿತು. ಈಗ ನನ್ನ ಬಳಿ ಒಂದು ಕಾಸೂ ಇಲ್ಲ. ಇನ್ನು

ಮೇಲೆ ನನ್ನ ಯೋಗಕ್ಷೇಮವನ್ನು ನೀನೇ ವಹಿಸಿಕೊಳ್ಳಬೇಕು. ಇನ್ನು ಹುಡು ಗಾಟದಿಂದ ದಿನ ಕಳೆಯುವುದೇ ದುರ್ಘಟವಾಗಿರುವುದು.

ಮಧು—ಈಗ ನನ್ನ ಬಳಿಯಲ್ಲಿ ಹಣಕಾಸುಗಳೇನೂ ಇಲ್ಲವೆಂದು ಹೇಳಿದರೆ, ನೇನೇನ ಮಾಡುವೆ?

ಚಂದ್ರ—ನಾನು ಏನ ಬೇಕಾದರೂ ಮಾಡಬಲ್ಲೆನು. ನಾನು ಮಧುಸೂದನನ ಹೆಂಡಿತಿಯೆಂದು ಎಲ್ಲೆಲ್ಲಿಯೂ ಪ್ರಕಾಶಪಡಿಸುವೆನು; ನ್ಯಾಯಸ್ಥಾನಗಳಲ್ಲಿ ವಿವಾದಮಾಡಿ ಜೀವನಾಂಶವನ್ನು ಪಡೆದುಕೊಳ್ಳುವೆನು; ನೀನು ಹಣವನ್ನು ಸಂಪಾದಿಸಿದಾಗ ನಿನ್ನ ಬಳಿಯಲ್ಲಿ ಗೃಹಲಕ್ಷ್ಮಿಯಾಗಿರುವೆನು, ಆಗ ಬೇಕು ಬೇಕಾದ ನಗನಟ್ಟುಗಳನ್ನು ತೊಟ್ಟುಕೊಂಡು ಎಲ್ಲಾ ಹೆಂಗುಸರಂತೆಯೇ ಒಯ್ಯಾರ ಮಾಡುವೆನು. ಅಲ್ಲಿಯ ವರೆಗೂ ನಿನ್ನ ಹೆಸರು ಹೇಳಿಕೊಂಡು ಬೀದಿ ಬೀದಿಗಳಲ್ಲಿ ಭಿಕ್ಷೆಯೆತ್ತಿ ಹೊಟ್ಟೆಯನ್ನು ಹೊರೆದುಕೊಳ್ಳುವೆನು. ಇವಲ್ಲದೇ ಇನ್ನೇನ ಮಾಡುವುದಕ್ಕಾದೀತು!

ಮಧು—ಚಂದ್ರವದನೆ! ನನ್ನ ಈಗಣ ಸ್ಥಿತಿಯನ್ನು ನೀನು ಕಾಣೆಯೆಂದು ತೋರುವುದು. ಅದನ್ನು ತಿಳಿಸುವೆನು ಕೇಳು.

ಚಂದ್ರ—ತಿಳಿಸೋಣವಾಗಲಿ; ನಾನೂ ಕೇಳುವೆನು. ಹಿಂದೆ ಎಷ್ಟೋ ಕೇಳಿಯಾಯಿತು, ಈಗಳೂ ಕೇಳುವೆನು. ಒಂದು ವೇಳೆ ನನಗೆ ಸುಳ್ಳುಗಳನ್ನು ಹೇಳಿ ಮೋಸಮಾಡುವುದಾದರೆ ನಾನು ಸುಮ್ಮನೆ ಬಿಡತಕ್ಕವಳಲ್ಲ. ದೇಶದಲ್ಲಿ ಇನ್ನೂ ನ್ಯಾಯವೆಂಬುದು ಹಾಳಾಗಿ ಹೋಗಿಲ್ಲ. ನೀನು ಎಚ್ಚರಿಕೆಯಿಂದ ಮಾತನಾಡು. ಅದೇನ ಹೇಳಬೇಕೋ ಬೇಗ ಹೇಳಿಬಿಡು. ನಿನ್ನ ಕಥೆಯನ್ನೇ ಕೇಳುತ್ತ ಕುಳಿತರೆ ನನ್ನ ಹೊಟ್ಟೆ ತುಂಬುವುದು ಹೇಗೆ? ನನಗೆ ಬೇಕಾದುದು ಹಣ; ಕಥೆಯಲ್ಲ.

ಮಧು—ಚಂದ್ರ, ನಾನು ಏನ ಹೇಳಿದರೂ ನೀನು ನಂಬಲಾರೆ. ನನ್ನಲ್ಲಿ ನಿಜವಾಗಿಯೂ ಹಣ ಕಾಸುಗಳೇನೂ ಇಲ್ಲ; ಇದ್ದಿದ್ದರೆ ನಾನು ನಿನಗೆ ಕೊಡಲಾರೆನೇ! ಈಗ ನಾನೊಂದು ಬಗೆಯ ಆಸೆಯನ್ನಿಟ್ಟುಕೊಂಡು ಕೆಲಸಮಾಡುತ್ತಿರುವೆನು. ನೀನು ಗದ್ದಲಮಾಡುವುದಾದರೆ ಎಲ್ಲವೂ ಕೆಟ್ಟುಹೋಗುವುದಲ್ಲದೆ, ನಾನೂ ನೀರಿನಲ್ಲಿ ಮುಳುಗಿಕೊಂಡು ಪ್ರಾಣಬಿಡಬೇಕಾಗುವುದು.

ಚಂದ್ರ—ಮಧು, ನಿನ್ನ ಗುಡ್ಡು ಬೆದರಿಕೆಗೆ ನಾನು ಹೆದರತಕ್ಕವಳಲ್ಲ. ಈ ಪ್ರಯತ್ನದಿಂದಾದರೂ ನಿನ್ನ ಉದ್ದೇಶವು ನೆರವೇರುವುದೇನು?

ಮಧು—ನಾನು ಹಣಗಾರನ ಮಗಳೊಬ್ಬಳನ್ನು ಈಗ ಮದುವೆ ಮಾಡಿಕೊಳ್ಳುವುದಕ್ಕೆ ಯತ್ನಮಾಡಿರುವೆನು. ಅದರಿಂದ ನನಗೆ ಹಣಕಾಸು ಬರುವ ಸಂಭವವುಂಟು. ನೀನು ಗದ್ದಲಮಾಡಿದರೆ ಎಲ್ಲವೂ ಹಾಳಾಗಿ ಹೋಗುವುದು. ನೀನು ಈಗ ಸುಮ್ಮನೇ ಹೊರಟು ಹೋಗುವುದಾದರೆ, ನಾನು ಉಪಾಯದಿಂದ ಹಣವನ್ನು ಬರಮಾಡಿಕೊಳ್ಳುವೆನು. ನನ್ನಲ್ಲಿ ಹಣ ಕಾಸುಗಳಿರುವುದಾದರೆ, ನಿನಗೆ ಜೀವನಕ್ಕೆ ತೊಂದರೆಯೇ? ಈಗ ನೀನು ಹೊಟ್ಟೆಗಿಲ್ಲದೆ ಕಷ್ಟಪಡುತ್ತಿರುವುದು ನನಗೂ ಗೊತ್ತು; ಇದನ್ನು ನೋಡಿದರೆ ನನಗೆ ಸಂಕಟವಾಗುವುದು. ನಾನೇನ ಮಾಡಲಿ!

ಚಂದ್ರ—ನೀನು ಹೇಳಿದಂತೆಯೇ ನಡೆವುದಾದರೆ, ನಿನಗೂ ಅನುಕೂಲವಾಗುವುದು, ನನಗೂ ಸುಖವುಂಟು. ನಿನ್ನನ್ನು ಸಂಕಟಕ್ಕೆ ಸಿಲುಕಿ ನಾನೇನ ಮಾಡಲಿ? ವ್ಯರ್ಥವಾಗಿ ಒಬ್ಬರಿಗೆ ತೊಂದರೆ ಕೊಟ್ಟು ಅವರನ್ನೂ ಕಿಡಿಸಿ ನಾನೂ ಕೆಟ್ಟು ಹಾಳಾಗಿ ಹೋಗಬೇಕೆಂದು ನನ್ನ ಇಷ್ಟವಲ್ಲ. ನಿನ್ನ ಚರ್ಯೆಯನ್ನು ನೋಡಿದರೆ ನನ್ನ ಮೈಯ್ಯೆಲ್ಲಾ ಉರಿದು ಹೋಗುವುದು, ಇದಕ್ಕಾಗಿಯೇ ನಾನು ನಿನ್ನ ಬೆನ್ನ ಹತ್ತಿರುವುದು.

ಮಧು—ಇದೀಗ ವಿವೇಕದ ಮಾತು. ನನ್ನನ್ನು ಕಿಡಿಸಿದಲ್ಲಿ ನಿನಗೆ ಬಂದ ಭಾಗ್ಯವೇನು? ನಾನು ಬದುಕಿದರೆ ಇಬ್ಬರೂ ಸುಖಪಡಬಹುದು, ನಾನು ಕೆಟ್ಟರೆ ನಿನಗೇನಿದೆ?

ಚಂದ್ರ—ಮಧುಸೂದನ, ಹಾಗಾದರೆ ನಾನು ಇನ್ನೂ ಕೆಲವು ದಿನ ಸುಮ್ಮನಿದ್ದು ನೋಡುವೆನು. ಈಗ ನಿನ್ನಲ್ಲಿ ಏನಿದ್ದರೂ ಅದರಲ್ಲಿ ಅರ್ಧವನ್ನಾದರೂ ನನಗೆ ಕೊಟ್ಟು ಕಳುಹಿಸು. ಹೊಟ್ಟೆಗಿಲ್ಲದೇ ಬಂದವಳನ್ನು ಹಾಗೆಯೇ ಕಳುಹುವುದು ಧರ್ಮವಲ್ಲ.

ಕಿಟಕಿಯ ಮರೆಯಲ್ಲಿ ಕುಳಿತು ಆಲಿಸಿ ಕೇಳುತಿದ್ದ ವ್ರಜವಿಹಾರಿಲಾಲನು ಯುವತೀ ಯುವಕರ ಮಾತು ಮುಗಿಯುತ್ತ ಬಂದಿತೆಂದು ತಿಳಿದು ಮೊದಲಿನಂತೆಯೇ ಮುಸುಕುಹಾಕಿಕೊಂಡು ಮಲಗಿಬಿಟ್ಟನು. ಐದು ನಿಮಿಷಗಳೊಳಗಾಗಿಯೇ ಮಧುಸೂದನನು ಚಂದ್ರವದನೆಯನ್ನು ಕಳುಹಿಸಿಕೊಟ್ಟು ಮನೆಗೆ ಬಂದನು. ತಾನು ಚಂದ್ರವದನೆಯೊಡನೆ ಮಾತನಾಡುತಿದ್ದುದನ್ನು ಆರು ನೋಡಿದರೋ ಆರು ಕೇಳಿದರೋ ಎಂಬ ಭಯವು ಮಧುಸೂದನನ ಬೆನ್ನ ಹತ್ತಿತು. ಅವನು ಮನೆಗೆ ಬಂದು ಎಲ್ಲವನ್ನೂ ನೋಡಿದನು. ಎಲ್ಲವೂ ಮೊದಲಿನಂತೆಯೇ ಕಂಡು ಬಂದುವು. ಬಳಿಕ ಮಧುಸೂದನನು ಕೊಂಚ ಮಟ್ಟಿಗೆ ಧೈರ್ಯವನ್ನು ತೆಗೆದುಕೊಂಡು ಮನೆಯ ಹಜಾರದಲ್ಲಿ ಬಂದು ಕುಳಿತನು.

ಲಾಲಮಹಾಶಯನು ಕೊಂಚ ಹೊತ್ತಿನ ಮೇಲೆ ಹಾಸುಗೆಯಿಂದೆದ್ದು ಮುಖವನ್ನೂ ಕೈಕಾಲುಗಳನ್ನೂ ಚೆನ್ನಾಗಿ ತೊಳೆದುಕೊಂಡು ಹಜಾರಕ್ಕೆ ಬಂದನು. ಮಧುಸೂದನನು ವೃದ್ಧನನ್ನು ನೋಡಿ, "ಮಹಾಶಯ, ಮಧ್ಯಾಹ್ನದ ಸುಖನಿದ್ರೆಯಾಯಿತೆಂದು ತೋರುವುದು," ಎಂದು ಪ್ರಶ್ನೆ ಮಾಡಿದನು. ಲಾಲಮಹಾಶಯನು, "ಈ ದಿನ ಆನಂದವಾಗಿ ನಿದ್ರೆಮಾಡಿದೆನು," ಎಂದು ಹೇಳಿ ಮಧುಸೂದನನ ಸಮೀಪದಲ್ಲಿಯೇ ಬಂದು ಕುಳಿತನು. ಇಬ್ಬರೂ ಲೋಕಾಭಿರಾಮವಾದ ಮಾತುಗಳಲ್ಲಿ ಬಲು ಹೊತ್ತು ಮೈಮರೆತಿದ್ದರು. ವ್ರಜವಿಹಾರಿಯು ಮಾತಿನ ಸಂದರ್ಭದಲ್ಲಿ ಮಧುಸೂದನನನ್ನು ಕುರಿತು, "ಮಧು ಮಹಾಶಯ, ನೀವು ಇಷ್ಟರಲ್ಲಿಯೇ ವಿದ್ಯಾನಗರಕ್ಕೆ ಹೋಗಿಬರುವ ಸಮಾಚಾರವೇನಾದರೂ ಉಂಟೆ?" ಎಂದು ಕೇಳಿದನು.

"ಇಲ್ಲಾ, ಸದ್ಯದಲ್ಲಿ ನನಗೇನೂ ಅಲ್ಲಿ ವಿಶೇಷ ಕೆಲಸವಿಲ್ಲಾ. ಅಲ್ಲಿ ತಮಗೇನಾದರೂ ಕೆಲಸವಿದ್ದಿತೇನು?" ಎಂದು ಮಧುವು ನುಡಿದನು.

ವೃದ್ಧ—ಕೊಂಚ ಕೆಲಸವಿದ್ದಿತು. ಕೆಲವು ಕಾಗದ ಪತ್ರಗಳನ್ನು ವಿದ್ಯಾನಗರಕ್ಕೆ ಕಳುಹಬೇಕಾಗಿದ್ದಿತು. ಅವುಗಳನ್ನು ಇತರರ ಕೈಲಿ ಕೊಟ್ಟು ಕಳುಹಲು ನನಗೆ ನಂಬುಗೆ ಸಾಲದು. ಆದುದರಿಂದ ನಿಮ್ಮನ್ನು ಕೇಳಿದೆನು.

ಮಧುಸೂದನನು ವ್ರಜವಿಹಾರಿಲಾಲನನ್ನು ತನ್ನ ಕಡೆಯವನನ್ನಾಗಿ ಮಾಡಿಕೊಳ್ಳಬೇಕೆಂದು ಕೆಲವು ದಿನಗಳಿಂದಲೂ ಪ್ರಯತ್ನಪಡುತ್ತಿದ್ದನಾದುದರಿಂದ "ಈಗ ಸುಯೋಗವು ಒದಗಿಬಂದಿರುವಂತಿದೆ," ಎಂದು ಭಾವಿಸಿಕೊಂಡು "ಇದಕ್ಕಾಗಿಯೇ ತಾವು ಕೇಳಿದುದು! ತಮಗೋಸುಗ ನಾನು ವಿದ್ಯಾನಗರಕ್ಕೆ ಹೋಗಿಬರುವೆನು. ಒಬ್ಬರಿಗೊಬ್ಬರು ಸಮಯಕ್ಕೆ ಒದಗದ ಮೇಲೆ ಮನುಷ್ಯರಿಂದ ಪ್ರಯೋಜನವೇನು? ಅದರಲ್ಲಿಯೂ ಹಿರಿಯರ ಸೇವೆಯನ್ನು ಮಾಡದ ಮೇಲೆ ಮನುಷ್ಯನನ್ನು ನರಪಶುವೆಂದೇ ಕರೆಯಬೇಕು. ವಿದ್ಯಾನಗರಕ್ಕೆ ಹೋಗಿ ಬರುವ ವಿಷಯದಲ್ಲಿ ನಾನು ಸಿದ್ಧನಾಗಿರುವೆನು," ಎಂದು ನಮ್ರತೆಯಿಂದ ಉಸುರಿದನು.

ಮಧುಸೂದನನು ವೃದ್ಧನ ಮುಖೋಲ್ಲಾಸಕ್ಕಾಗಿ ಮಾತನಾಡಿದನು. ವೃದ್ಧನು ಮೇಲೆ ಹೇಳಿದ ಮಾತುಗಳನ್ನೇ ಬಲವಾಗಿ ಹಿಡಿದುಕೊಂಡು, "ಮಹಾಶಯ, ತಾವು ನನಗಾಗಿ ವಿದ್ಯಾನಗರಕ್ಕೆ ತೆರಳುವರಾಗಿದ್ದೀರಾ?" ಎಂದು ಮತ್ತೆ ಕೇಳಿದನು.

ಮಧು—ಏಕಾಗಬಾರದು?

ವೃದ್ಧ—ಹಾಗಾದರೆ ನಾನು ತಮ್ಮ ವಿಷಯದಲ್ಲಿ ಬಹು ಕೃತಜ್ಞನಾಗಿರುವೆನು. ನೀವು ನಾಳೆಯ ಸಾಯಂಕಾಲಕ್ಕೆ ತೆರಳಬೇಕಾಗುವುದು. ಅಷ್ಟರಲ್ಲಿ ನಾನು ಕಾಗದ ಪತ್ರಗಳನ್ನು ಸರಿಪಡಿಸಿಡುವೆನು. ನನ್ನ ಪ್ರಾರ್ಥನೆಯೇನೆಂದರೆ—ನೀವು ಈ ಸಂಗತಿಗಳೆಲ್ಲವನ್ನೂ ಗುಟ್ಟಾಗಿಯೇ ಇಟ್ಟಿರಬೇಕು. ಇದು ನಮ್ಮಿಬ್ಬರ ಹೊರತ್ತಾಗಿ ಮತ್ತಾರಿಗೂ ತಿಳಿಯಕೂಡದು.

ಮಧು—ಆರಾದರೂ ನನ್ನನ್ನು ಕೇಳಿದಲ್ಲಿ, ವಿದ್ಯಾನಗರದಲ್ಲಿ ನನಗೆ ಸ್ವಂತ ಕೆಲಸವಿರುವುದಾಗಿ ಹೇಳಿ ತಮ್ಮ ಕೆಲಸವನ್ನು ನೆರವೇರಿಸಿಕೊಂಡು ಬರುವೆನು. ಸುಳ್ಳು ಹೇಳುವುದು ನನ್ನ ಜನ್ಮದಲ್ಲಿಯೇ ಸರಿಬೀಳದು, ಆದರೂ ಇತರರಿಗಾಗಿ ಅಪಾಯಕರವಲ್ಲದ ಸುಳ್ಳನ್ನು ಹೇಳುವುದರಿಂದ ದೋಷವಿಲ್ಲವೆಂದು ಕೇಳಿರುವೆನು. ನನ್ನಿಂದ ಗುಟ್ಟು ರಟ್ಟಾಗುವುದೆಂದು ತಾವು ಎಂದಿಗೂ ತಿಳಿಯಲಾಗದು.

ವೃದ್ಧ—ಸರಿಸರಿ, ನನಗೆ ಮತ್ತಾವ ಆತಂಕವೂ ಇಲ್ಲ. ಮನುಷ್ಯನ ಸ್ವಭಾವವು ಚೆನ್ನಾಗಿ ತಿಳಿಯುವ ವರೆಗೂ ಆರಾದರೂ ಸಂಶಯ ಪಡಲೇ ಬೇಕಾಗುವುದು. ನಾನು ತಮ್ಮ ಸ್ವಭಾವವನ್ನರಿಯದೇ ಮಾತನಾಡಿದುದಕ್ಕಾಗಿ ತಾವು ಬೇರೆಯಾಗಿ ಭಾವಿಸಲಾಗದು. ಈಗ ನಾನು ತಮ್ಮನ್ನು ಧೈರ್ಯವಾಗಿ ನಂಬಿಕೊಂಡು ಕೆಲಸಮಾಡುವೆನು. ಈ ಜನ್ಮದಲ್ಲಿ ನನಗೆ ತಾವೊಬ್ಬರೇ ಹಿತೈಷಿಗಳು. ನನಗೆ ಆರಲ್ಲಿಯೂ ನಂಬುಗೆಯಿರಲಿಲ್ಲ. ಇಂದಿಗೆ ನನ್ನ ಕೊರತೆಯೆಲ್ಲವೂ ದೂರ ತೊಲಗಿತು.

ಮಧುಸೂದನನು ವ್ರಜವಿಹಾರಿಲಾಲನ ಮಾತಿನ ಮರ್ಮವನ್ನರಿಯದೆ, ಮುದುಕನು ತನ್ನ ಮಾಯಾಪಾಶದಲ್ಲಿ ಸಿಕ್ಕಿಬಿದ್ದನೆಂದು ತಿಳಿದು ಪರಮಾನಂದ ಭರಿತನಾದನು. ರಾತ್ರಿಯಲ್ಲಿ ಎಲ್ಲರೂ ಭೋಜನಕ್ಕೆ ಕುಳಿತಿರುವ ಸಮಯದಲ್ಲಿ ಮಧುಸೂದನನು ಚೌಧುರಿ ಮಹಾಶಯನನ್ನು ಕುರಿತು, "ನಾನು ಸ್ವಂತ ಕೆಲಸದ ನಿಮಿತ್ತವಾಗಿ ನಾಳೆಯ ರಾತ್ರಿಯೇ ವಿದ್ಯಾನಗರಕ್ಕೆ ಹೋಗಬೇಕಾಗಿರುವುದು," ಎಂದು ಮಧುಸೂದನನು ತಿಳಿಯಪಡಿಸಿದನು.

ಚೌಧುರಿ—ಹಳ್ಳಿಯ ವಾಸವು ಬೇಸರವನ್ನುಂಟುಮಾಡಿತೆಂದು ತೋರುವುದು.

ಮಧು—ತಮ್ಮೊಡನೆ ವಾಸವಾಗಿರುವ ನನಗೆ ಬೇಸರಕ್ಕೆ ಕಾರಣವೇನಿರುವುದು? ವಿದ್ಯಾನಗರದಲ್ಲಿ ನನಗೆ ಹಣಕಾಸುಗಳು ಬರಬೇಕಾಗಿದೆ. ಅದಕ್ಕಾಗಿ ನಾನು ಹೊರಡಲೇ ಬೇಕಾಗಿರುವುದು. ನಾನು ಅಲ್ಲಿ ತುಂಬಾ ದಿನಗಳು ನಿಲ್ಲುವುದಿಲ್ಲ. ಕೆಲಸವಾದ ಕೂಡಲೇ ಇಲ್ಲಿಗೆ ಹೊರಟು ಬಂದುಬಿಡುವೆನು.

ವೃದ್ಧ—ಬೆಳಗ್ಗೆ ನಿಮಗೊಂದು ಕಾಗದ ಬಂದಿದ್ದಿತು. ಅದಕ್ಕಾಗಿಯೇ ನೀವು ಹೊರಡಬಹುದು.

ಮಧು—ಆಕಾಗದದಲ್ಲಿ ಅಗತ್ಯವಾಗಿಯೂ ಬರಹೇಳಿ ಬರೆದಿರುವರು. ಜನರಿಗೆ ಸಾಲಕೊಟ್ಟು ಅವರ ಮನೆಯ ಬಾಗಿಲಿಗೆ ಎಷ್ಟು ಅಲೆದರೂ ಬರತಕ್ಕ ಹಣವು ಬರುವುದೇ ಕಷ್ಟವಾಗಿರುವಾಗ, ಸಾಲವನ್ನು ತೆಗೆದುಕೊಂಡವನು ತಾನೇ ಹಣವನ್ನು ಸಲ್ಲಿಸುವುದಾಗಿ ಕಾಗದ ಬರೆದಿರುವಲ್ಲಿ ನಾನು ಹೋಗದಿರುವುದು ಚೆನ್ನಾಗಿ ಕಾಣುವುದಿಲ್ಲ. ಆದುದರಿಂದ ನಾನು ತಡಮಾಡದೆ ನಾಳೆಯ ಸಾಯಂಕಾಲವೇ ವಿದ್ಯಾನಗರಕ್ಕೆ ತೆರಳುವುದಾಗಿ ಸಂಕಲ್ಪಿಸಿರುವೆನು.

ಚೌಧುರಿ—ಮಧು, ಹೋಗಿ ಬಾ. ಕೆಲಸವಾದ ಕೂಡಲೆ ಅಲ್ಲಿ ನಿಲ್ಲದೆ ಬೇಗ ಬಂದುಬಿಡು.

ಮಧು—ಹಾಗೆಯೇ ಮಾಡುವೆನು.

ಮರುದಿನ ವ್ರಜವಿಹಾರಿಲಾಲನು ಮಧುಸೂದನನಿಗೆ ಸ್ವರ್ಣಕುಮಾರಿಯೊಡನೆ ಒಂದು ಕ್ಷಣವಾದರೂ ಮಾತನಾಡುವುದಕ್ಕೆ ಆಸ್ಪದವಿಲ್ಲದಂತೆ ಆತನನ್ನು ತನ್ನ ಬಳಿಯಲ್ಲಿಯೇ ಇಟ್ಟುಕೊಂಡು ಇರುತಿದ್ದನು. ರಾತ್ರಿಯಾಯಿತು. ಹೊರಡುವುದಕ್ಕೆ ಹಡಗು ಗಂಗಾತೀರದಲ್ಲಿ ಸಿದ್ಧವಾಗಿ ಬಂದು ನಿಂತಿದ್ದಿತು. ಲಾಲಮಹಾಶಯನು ಕಾಗದ ಪತ್ರಗಳ ಕಟ್ಟನ್ನು ಮಧುಸೂದನನ ಕೈಗೆ ಕೊಟ್ಟನು. ಮಧುಸೂದನನು ಸ್ವರ್ಣಕುಮಾರಿಯೊಡನೆ ಒಂದೆರಡು ಮಾತುಗಳಾಡಿ ಹೊರಡಬೇಕೆಂದು ಎಷ್ಟೋ ಪ್ರಯತ್ನಮಾಡಿನೋಡಿದನು. ಲಾಲಮಹಾಶಯನ ಕೌಶಲದಿಂದ ಅದು ಸಾಗದೇಹೋಯಿತು. ಮಧುಸೂದನನು ಹತಾಶನಾಗಿ ಹೊರಡಲು ಗಂಟುಮೂಟೆಗಳನ್ನು ಕಟ್ಟಿಕೊಂಡು ಸಿದ್ಧನಾದನು. ವ್ರಜವಿಹಾರಿಲಾಲನು ಮಧುಸೂದನನನ್ನು ಕರೆದು ಏಕಾಂತವಾಗಿ, ಈ ಕಾಗದ ಪತ್ರಗಳೆಲ್ಲವನ್ನೂ ನನ್ನ ವಕೀಲನಾದ ವಿಧುಭೂಷಣರಾಯರ ಕೈಯಲ್ಲಿಯೇ ಕೊಟ್ಟು ಅವರು ಏನುತ್ತರವನ್ನು ಕೊಡುವರೋ ಅದನ್ನು ತಿಳಿದುಕೊಂಡು ಬರಬೇಕೆಂದು ಹೇಳಿದನು. ವೃದ್ಧನು ಹೀಗೆ ಹೇಳಿ ಮಧುಸೂದನನ ಕೈಗೆ ದಾರಿಯ ವೆಚ್ಚಕ್ಕೆಂದು ಹತ್ತು ರೂಪಾಯಿಗಳನ್ನು ಕೊಟ್ಟು, "ಮಹಾಶಯ, ನೀವು ಬೇರೆಯಾಗಿ ಚಿಂತಿಸಲಾಗದು. ನನ್ನ ಕೆಲಸಕ್ಕಾಗಿ ತಾವು ತೆರಳುವುದರಿಂದ ತಮ್ಮನ್ನು ಸುಮ್ಮನೆ ಕಳುಹುವುದು ಧರ್ಮವಲ್ಲವಾದಕಾರಣ ಈ ಮೊಬಲಗನ್ನು ಕೊಟ್ಟಿರುವೆನು," ಎಂದು ಹೇಳಿದನು.

ಮಧು—ಲಾಲಮಹಾಶಯ, ದಾರಿಯ ವೆಚ್ಚಕ್ಕೆ ನನ್ನಲ್ಲಿರುವುದು. ಇದಕ್ಕಾಗಿ ನಾನು ತಮ್ಮಿಂದ ಹಣವನ್ನು ತೆಗೆದುಕೊಳ್ಳಬೇಕಾದುದೇನೂ ಇಲ್ಲ. ಇದನ್ನು ಹಿಂದಿರುಗಿ ತೆಗೆದುಕೊಳ್ಳೋಣವಾಗಲಿ.

ವೃದ್ಧ—ನಾನು ಮೊದಲಿನಿಂದಲೂ ಹಣವನ್ನು ಕೊಟ್ಟು ಕೆಲಸಮಾಡಿಸುವುದೇ ನನ್ನ ಸ್ವಭಾವವಾಗಿರುವುದು. ನೀವು ಹಣವನ್ನು ತಿರಸ್ಕರಿಸಬಾರದು. ನೀವು ಹಣವನ್ನು ತೆಗೆದುಕೊಳ್ಳುವುದೇ ಇಲ್ಲವೆಂದು ಹೇಳಿಬಿಡುವುದಾದರೆ ನನಗೆ ತುಂಬಾ ವ್ಯಸನವಾಗುವುದು. ವೃದ್ಧನನ್ನು ಸಂಕಟಪಡಿಸುವುದು ಹುಡುಗರಿಗೆ ತಕ್ಕುದಲ್ಲ.

ಮಧುಸೂದನನು ಯತ್ನವಿಲ್ಲದೆ ಹಣವನ್ನು ತೆಗೆದಿಟ್ಟುಕೊಂಡು ಹೊರಟನು. ಲಾಲಮಹಾಶಯನು ಅವನನ್ನು ಹಡಗಿನಲ್ಲಿ ಕುಳ್ಳಿರಿಸಿ ಹೊರಟು ಬಂದನು. ಮನೆಯಲ್ಲಿ ಚೌಧುರಿಯು ಇರಲಿಲ್ಲ. ಸ್ವರ್ಣಕುಮಾರಿಯು ಒಂದೆಡೆಯಲ್ಲಿ ಕುಳಿತುಕೊಂಡು ಏನೇನೋ ಆಲೋಚಿಸುತ್ತಿದ್ದಳು. ಲಾಲಮಹಾಶಯನು ಅವಳ ಬಳಿಗೈತಂದು, "ಮಗು, ಇದೇನು ಹೀಗೆ ಕುಳಿತುಕೊಂಡು ಚಿಂತಿಸುತ್ತಿರುವೆ? ಈ ನಡುವೆ ಮುದುಕನ ವಿಷಯದಲ್ಲಿ ಉದಾಸೀನೆಯಾಗಿರುವಂತಿದೆ. ಹುಡುಗರು ಹಿರಿಯರಲ್ಲಿ ಉದಾಸೀನತೆಯನ್ನು ತೋರಿಸಬಾರದು. ಈಗ ನಾನು ನಿನ್ನೊಡನೆ ಮಾತನಾಡಬೇಕೆಂದಿರುವೆನು. ನನ್ನೊಡನೆ ನನ್ನ ಕೋಣೆಗೆ ಬಾ," ಎಂದು ನುಡಿದನು.

ಸ್ವರ್ಣಕುಮಾರಿಗೆ ಎಲ್ಲೂ ಇಲ್ಲದ ಚಿಂತೆ. ಅವಳಿಗೆ ಮುದುಕನೂ ಬೇಡ, ಅವನ ಮಾತೂ ಬೇಡ. ಆದರೂ ಮುದುಕನಿಗೆ ಪ್ರತಿಯಾಗಿ ಮಾತನಾಡದೆ ಅವನ ಹಿಂದೆ ಹಿಂದೆಯೇ ಹೊರಟಳು. ಮುದುಕನು ತನ್ನ ಕೋಣೆಯಲ್ಲಿ ಬಂದು ಕುಳಿತೊಡನೆಯೇ, ಕುಮಾರಿಯು, "ಅದೆಂತಹ ಮಾತು?" ಎಂದಳು.

ವ್ರಜವಿಹಾರಿಯು ಸ್ವರ್ಣಕುಮಾರಿಯನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು ಮಧುಮಧುರವಾದ ನುಡಿಯಿಂದ, "ಮಗು, ನಾನು ಹೇಳುವ ಮಾತು ಸಾಮಾನ್ಯವಾದುದಲ್ಲ, ನೀನು ಅದನ್ನು ಆಲಿಸಿ ಕೇಳಬೇಕು. ಮುದುಕನ ಮಾತೆಂದು ತಿರಸ್ಕರಿಸಬೇಡ. ಮಧುಸೂದನನು ಹೊರಟು ಹೋದನೆಂಬ ವ್ಯಸನದಿಂದ ಸೊಕ್ಕಿ ಸೊರಗಬೇಡ, ಕಂಡೆಯಾ? ನೀನು ಅಂತರ್ಯದಲ್ಲಿ ಮಧುಸೂದನನನ್ನು ಪ್ರೀತಿಸುತ್ತಿರುವುದು ನಿನ್ನ ಹಾವಭಾವಗಳಿಂದ ಗೊತ್ತಾಗುವುದು. ನೀನಿನ್ನೂ ಲೋಕವನ್ನರಿಯದ ಪಸುಳೆ. ನಿನಗೆ ಯುಕ್ತಾಯುಕ್ತ ಪರಿಜ್ಞಾನವೇ ಇಲ್ಲ. ಆದುದರಿಂದ ಹಿತೈಷಿಯಾದ ನನ್ನ ಮಾತನ್ನು ತೆಗೆದು ಹಾಕದೇ ಕೇಳು. ಇಂದಿನಿಂದ ನೀನು ಮಧುಸೂದನನನ್ನು ಪ್ರೀತಿಸಬೇಡ. ಕಾರಣವೇನೆಂದರೆ—ಅವನು ನಿನ್ನ ಪ್ರೀತಿಗೆ ತಕ್ಕ ಪಾತ್ರವಲ್ಲ; ಅವನು ಕುಲಗೇಡಿ," ಎಂದನು.

ಸ್ವರ್ಣಕುಮಾರಿಯು ಹಠಾತ್ತಾಗಿ ತನ್ನ ತಲೆಯ ಮೇಲೆ ಆಕಾಶವೇ ಕಳಚಿಬಿದ್ದಂತೆ ಭಾವಿಸಿ ಚಕಿತೆಯಾಗಿ ವ್ರಜವಿಹಾರಿಯನ್ನು ದುರದುರನೆ ನೋಡಲಾರಂಭಿಸಿದಳು. ಲಾಲಮಹಾಶಯನು ಮಾತನಾಡಿದನು:—

"ಕುಮಾರಿ ! ನನ್ನನ್ನು ದುರದುರನೆ ಏತಕ್ಕೆ ನೋಡುವೆ ? ನನಗೆ ಎಲ್ಲವೂ ಗೊತ್ತು ; ನಾನು ಎಲ್ಲದರ ಮರ್ಮವನ್ನೂ ಭೇದಿಸಿ ತಿಳಿದುಕೊಂಡಿರುವೆನು. ನೀನು ಮಧುಸೂದನನ ನಡೆನುಡಿಗಳಿಗೆ ಬೆರಗಾಗಿ ಅವನ ಮೋಹಪಾಶದಲ್ಲಿ ಸಿಕ್ಕಿ ನರಳುತ್ತಿರುವುದನ್ನು ಬಲ್ಲೆನು ; ಮಧುಸೂದನನು ಎಂತಹ ಪ್ರಾಣಿಯೆಂಬುದನ್ನೂ ಬಲ್ಲೆನು. ಮಧುಸೂದನನ ವಿಷಯದಲ್ಲಿ ನೀವುಗಳೆಲ್ಲರೂ ಎಷ್ಟರ ಮಟ್ಟಿಗೆ ತಿಳಿದುಕೊಂಡಿರುವಿರೋ, ಅದಕ್ಕೆ ನೂರುಮಡಿಯಾಗಿ ನಾನೂ ತಿಳಿದುಕೊಂಡಿರುವೆನು. ನೀವು ಮಧುಸೂದನನನ್ನು ಮಹಾತ್ಮನೆಂದು ತಿಳಿದಿರಬಹುದು ; ಆದರೆ ಅವನಂತಹ ದುರಾತ್ಮನು ಈ ಪ್ರಪಂಚದಲ್ಲಿಯೇ ಮತ್ತಾರೂ ಇಲ್ಲವೆಂದು ನಾನು ಪ್ರಮಾಣ ಮಾಡಿ ಹೇಳುವೆನು. ಆ ನೀಚನು ನಿನ್ನ ಪವಿತ್ರವಾದ ದೇಹವನ್ನು ತನ್ನ ಅಪವಿತ್ರವಾದ ಹಸ್ತಗಳಿಂದ ಮುಟ್ಟಕೂಡದೆಂದೂ, ಅವನ ನರಕಕೂಪದಂತಿರುವ ಬಾಯಿಂದ ಹೊರಡುವ ವಿನಾಶೋನ್ಮುಖವಾದ ಕೃತ್ರಿಮಪ್ರಣಯದ ಮಾತುಗಳನ್ನು ನೀನು ಸ್ವಪ್ನದಲ್ಲಿಯೂ ಕೇಳಕೂಡದೆಂದೂ ನನ್ನ ಅಭಿಪ್ರಾಯವು. ಆದುದರಿಂದಲೇ ನಿನ್ನೆಯ ದಿನದಿಂದಲೂ ನಾನು ಅವನಿಗೆ ನಿನ್ನೊಡನೆ ಮಾತನಾಡುವುದಕ್ಕೆ ಆಸ್ಪದವನ್ನು ಕೊಡದೇ ನೋಡಿಕೊಳ್ಳುತಿದ್ದೆನು. ಮೊನ್ನೆಯದಿನ ಮಧುಸೂದನನ ಬಂಡವಾಳವೆಲ್ಲವೂ ಹೊರಪಟ್ಟಿತು. ಅವನು ಗುಟ್ಟಾಗಿ ಮದುವೆ ಮಾಡಿಕೊಂಡಿರುವ ಸೂಳೆಯ ಮಗಳನ್ನು ನಾನು ಮೊನ್ನೆ ಕಣ್ಣಾರೆ ನೋಡಿದೆನು. ಕೈಹುಣ್ಣಿಗೆ ಕನ್ನಡಿಯೇಕೆ ? ಈ ವಿಷಯವನ್ನು ನಿನ್ನ ತಂದೆಗೆ ತಿಳಿಸಬೇಕೆಂದಿದ್ದೆನು. ಆತನಿಗೆ ತಿಳಿದರೆ ಪ್ರಮಾದವಾದೀತೆಂದು ತಿಳಿದು ನಾನೇ ಯುಕ್ತಿಯಿಂದ ಮಧುಸೂದನನನ್ನು ಹೊರಹೊರಡಿಸಿರುವೆನು. ಅವನು ಹಿಂದಿರುಗಿ ಬರಲಾರನು. ಅವನಿಗೆ ಇಲ್ಲಿಗೆ ಬರುವುದಕ್ಕೆ ಮುಖವೆಲ್ಲಿಯದು ? ಸ್ವರ್ಣಕುಮಾರಿ ! ನಿನಗೆ ಇದೆಲ್ಲವೂ ಹೇಗೆ ಗೊತ್ತಾದೀತು ? ಹುಡುಗರು ಮೇಲಣ ಆಡಂಬರಕ್ಕೆ ಬೆರಗಾಗಿ ಸೋತುಹೋಗುವರು. ಅದರಂತೆಯೇ ನೀನು ಮಧುಸೂದನನ ವಿಷಯದಲ್ಲಿ ಮನಸೋತಿರುವೆ. ಇದು ನಿನ್ನ ದೋಷವಲ್ಲ."

ಸ್ವರ್ಣಕುಮಾರಿಯು ಲಾಲಮಹಾಶಯನ ಮಾತುಗಳೆಲ್ಲವನ್ನೂ ಮೊದಲಿನಿಂದ ಕೊನೆಯವರೆಗೂ ಒಂದೇ ಮನಸ್ಸಿನಿಂದ ಕೇಳಿದಳು. ಅವಳಿಗೆ ಬುದ್ಧಿಯಲ್ಲಿ ವಿಕಾರವೂ, ಕಣ್ಣುಗಳಲ್ಲಿ ಕತ್ತಲೆಯೂ ಕವಿತುಕೊಂಡುಬಂದಿತು. ಅವಳ ಮೆಯ್ಯೆಲ್ಲವೂ ಗದಗದನೆ ನಡುಗಿತು ; ಬಾಯಿಂದ ಆವ ಮಾತೂ ಹೊರಡದೇ ಹೋಯಿತು.

ಲಾಲಮಹಾಶಯನು ಸ್ವರ್ಣಕುಮಾರಿಯ ದುರವಸ್ಥೆಯನ್ನು ನೋಡಿ, "ಮಗು, ಇರತಕ್ಕ ಸ್ಥಿತಿಯನ್ನು ತಿಳಿಸಿರುವೆನು. ಮುಂದೆ ಆವುದು ಸೂಕ್ತವೋ ಅದರಂತೆ ನಡೆದುಕೊಳ್ಳು." ಎಂದನು.

ಸ್ವರ್ಣಕುಮಾರಿಯು ಲಾಲಮಹಾಶಯನ ಮಾತಿಗೆ ಪ್ರತ್ಯುತ್ತರವಾಗಿ ಗದ್ಗದ ಸ್ವರದಿಂದ, "ಪೂಜ್ಯಮಹಾಶಯ, ನನ್ನ ಬುದ್ಧಿಯೆಷ್ಟರದು ? ನನಗಿರುವ ಲೋಕಾನುಭವವೂ ಅಷ್ಟರಲ್ಲಿಯೇ ಇರುವುದು. ಹಿತೈಷಿಗಳಾದ ತಮ್ಮ ಮಾತಿಗೆ ವಿರೋಧವಾಗಿ ನಡೆವುದೆಂದರೇನು ? ತಾವು ಆವ ರೀತಿಯಾಗಿ ನಡೆಯಬೇಕೆಂದು ಅಪ್ಪಣೆ ಮಾಡಿದರೂ, ನಾನು ಅದರಂತೆಯೇ ನಡೆದುಕೊಳ್ಳುವೆನು. ತಮ್ಮ ಮಾತಿಗೆ ನಾನೆಂದಿಗೂ ಪ್ರತಿಯಾಗಿ ಹೇಳತಕ್ಕವಳಲ್ಲ," ಎಂದು ತನ್ನ ಮನೋಭಿಪ್ರಾಯವನ್ನು ವಿಶದವಾಗಿ ಸೂಚಿಸಿಬಿಟ್ಟಳು.

---

## ಎಂಟನೆಯ ವಿಲಾಸ

### ದೇವೀ ಸರೋವರ

ಹಿಂದಣ ವಿಲಾಸದಲ್ಲಿ ಸೂಚಿಸಿದ ಘಟನಾವಳಿಯು ನಡೆದು ಇಂದಿಗೆ ಒಂದು ತಿಂಗಳಾಗಿಹೋಯಿತು. ಆದರೂ ಮಧುಸೂದನನು ಹಿಂದಿರುಗಿ ಬರಲೂ ಇಲ್ಲ, ಅವನು ಯೋಗಕ್ಷೇಮಕ್ಕೆ ಕಾಗದವನ್ನು ಬರೆಯಲೂ ಇಲ್ಲ. ಚೌಧುರಿಯು ಎಷ್ಟು ದಿವಸವಾದರೂ ಮಧುಸೂದನನು ಬಾರದಿರುವುದನ್ನು ನೋಡಿ ತಲ್ಲಣಿಸುತ್ತಿದ್ದನು ; ಅಲ್ಲದೆಯೂ ಆತನ ಸಹೋದರಿಯೂ ಕುಮಾರಿಯ ವಿವಾಹಮುಹೂರ್ತವನ್ನು ಸ್ಥಿರಪಡಿಸುವುದಕ್ಕಾಗಿ ಮಧುಸೂದನನಿಗೆ ಬೇಗನೆ ಕಾಗದ ಬರೆಯಬೇಕೆಂದು ಪೀಡಿಸತೊಡಗಿದಳು. ಈ ಸಂದರ್ಭದಲ್ಲಿ ಲಾಲಮಹಾಶಯನು ಮಧುಸೂದನನ ವಿಷಯದಲ್ಲಿ ತನಗೆ ಕಂಡುಬಂದುದೆಲ್ಲವನ್ನೂ ತಿಳಿಯಪಡಿಸಿದನು. ಚೌಧುರಿಯು ಮೊದಮೊದಲು ನಂಬಲಿಲ್ಲ. ಬಲುಹೊತ್ತು ಲಾಲಮಹಾಶಯನೊಡನೆ ಜಿಜ್ಞಾಸೆ ಮಾಡಿದ ಮೇಲೆ, ಚೌಧುರಿಮಹಾಶಯನ ಮನಸ್ಸಿಗೆ ಹತ್ತಿತು. ತರುವಾಯ ಆತನಿಗೆ ಮಧುಸೂದನನಲ್ಲಿ ಜಿಹಾಸೆ ಹುಟ್ಟಿ ತನ್ನ ಮಗಳನ್ನು ಆತನಿಗೆ ಕೊಟ್ಟು ವಿವಾಹಮಾಡುವ ಸುದ್ದಿಯನ್ನೇ ಮರೆತುಬಿಟ್ಟನು.

ಸ್ವರ್ಣಕುಮಾರಿಯು ಲಾಲಮಹಾಶಯನ ಅಪ್ಪಣೆಯ ಮೇರೆಗೆ ಮಧುಸೂದನನನ್ನು ಮರೆಯುವುದಕ್ಕೆ ಯತ್ನಮಾಡತೊಡಗಿದಳು. ಮಧುಸೂದನನ ಬಹಿರಂಗದ ವೇಷಭಾಷೆಗಳಿಗೆ ಬೆರಗಾಗಿದ್ದ ಆಕೆಯ ಪ್ರಣಯಸ್ಥಾನದಲ್ಲಿ, ಆತನ ಅಂತರಂಗವು ತಿಳಿದ ಬಳಿಕ ಕ್ರಮಕ್ರಮವಾಗಿ ದ್ವೇಷವು ಅಂಕುರಿಸಲಾರಂಭಿಸಿತು. ಸ್ವರ್ಣಕುಮಾರಿಯು ಬುದ್ಧಿಮತಿಯಾದುದರಿಂದ, ಮಧುಸೂದನನ ಆಕಾರಪ್ರಕಾರಗಳು ಅವಳ ಹೃದಯದಲ್ಲಿ ಬಲುಕಾಲ ನಿಲ್ಲಲಾರದೇ ಹೋದುವು. ಅವಳಿಗೆ ಮೋಹನಕುಮಾರನನ್ನು ದ್ವೇಷಿಸಿ ಮನೆಯಿಂದ ಹೊರಡಿಸಿದ ಹಿಂದಣ ಸಂಗತಿಯು

ಜ್ಞಾಪಕಕ್ಕೆ ಬರಲಾರಂಭವಾಯ್ತು. ಅದು ಮೊದಲು ಕುಮಾರಿಯು ತನ್ನ ಅತ್ಯಾಚಾರವನ್ನು ನಿಂದಿಸಿಕೊಳ್ಳುತ್ತಾ ಸಂಕಟದಿಂದ ಕೊರಗಿ ಕೊರಗಿ ಕೃಶವಾಗುತ ಬಂದಳು. ಲಾಲಮಹಾಶಯನು ಇದೆಲ್ಲವನ್ನೂ ತಿಳಿದುಕೊಂಡು ಕುಮಾರಿಗೆ ಬಗೆಬಗೆಯ ಬುದ್ಧಿವಾದಗಳನ್ನು ಹೇಳುತ್ತಾ ಬಂದನು.

ಮಧುಸೂದನನು ವಿದ್ಯಾನಗರಕ್ಕೆ ಹೊರಟುಹೋದ ಮೊದಲುಗೊಂಡು, ಲಾಲಮಹಾಶಯನಿಗೆ ವಿದ್ಯಾನಗರದಿಂದ ಕಾಗದ ಪತ್ರಗಳು ವಿಶೇಷವಾಗಿ ಬಂದು ಹೋಗುವುದಕ್ಕೆ ಪ್ರಾರಂಭವಾಯ್ತು. ಸರಕಾರವಾಡಿಯಲ್ಲಿದ್ದವರೆಲ್ಲರಿಗೂ ಈ ವ್ಯಾಪಾರವು ಆಶ್ಚರ್ಯವನ್ನುಂಟುಮಾಡಿದುದಾದರೂ, ಆರೂ ಈ ವಿಷಯವನ್ನೆತ್ತಿ ಲಾಲಮಹಾಶಯನೊಡನೆ ಮಾತನಾಡಿದವರೇ ಇಲ್ಲ. ವ್ರಜವಿಹಾರಿ ಲಾಲನು ನಾಲ್ಕು ತಿಂಗಳಿಂದಲೂ ಸರಕಾರವಾಡಿಯಲ್ಲಿಯೇ ಇದ್ದುಕೊಂಡು ಮನೆಯವರಿಗಿಂತಲೂ ಹೆಚ್ಚಾಗಿ ಎಲ್ಲರ ಪ್ರೀತಿವಿಶ್ವಾಸಗಳಿಗೂ ಪಾತ್ರವಾಗಿದ್ದುದರಿಂದ, ಆರೂ ಇವನ ವಿಷಯದಲ್ಲಿ ಭೇದ ಬುದ್ಧಿಯನ್ನು ತೋರಿಸುತ್ತಿರಲಿಲ್ಲ. ಅದು ಕಾರಣವೇ ಇವನ ನಡೆನುಡಿಗಳಲ್ಲಿ ವಿಶೇಷವಾಗಿ ಗಮನಕೊಟ್ಟು ಮಾತನಾಡುವುದು ಆರಿಗೂ ಸಮಂಜಸವಾಗಿ ಕಂಡುಬರಲಿಲ್ಲ. ಅಲ್ಲದೆಯೂ ವ್ರಜವಿಹಾರಿಯು ಸಮಯಸಂದರ್ಭಗಳಲ್ಲೆಲ್ಲಾ ಸೇವಕ ಪರಿಚಾರಕ ಮುಂತಾದವರಿಗೆ ಬಹುಮಾನವನ್ನು ಕೊಡುತಿದ್ದನು. ಇದಕ್ಕಾಗಿ ಅವರೆಲ್ಲರೂ ಲಾಲಮಹಾಶಯನ ಇಷ್ಟಕ್ಕೆ ಅನುಕೂಲರಾಗಿಯೇ ಇರುತಿದ್ದರು. ಚೌಧುರಿಯಂತೂ ವ್ರಜವಿಹಾರಿಯನ್ನು ಅಭಿಮಾನದಿಂದ ತಾತನೆಂದು ಸಂಬೋಧಿಸುತ್ತಿದ್ದನು.

ಒಂದುದಿನ ಚೌಧುರಿಯು ತನ್ನ ಕೆಲಸವನ್ನು ತೀರಿಸಿಕೊಂಡು ಮನೆಗೆ ಬಂದು ಲಾಲಮಹಾಶಯನನ್ನು ಕುರಿತು, "ತಾತ! ತಾವು ಅಂದು ನೋಡುವುದಕ್ಕೆ ಹೋಗಿದ್ದ ದೇವದುರ್ಗವು ವಿಕ್ರಯವಾಗಿ ಹೋಯಿತು," ಎಂದನು.

ವ್ರಜ—ಕೊಂಡುಕೊಂಡವರಾರು?

ಚೌಧುರಿ—ಅದು ನನಗೆ ಗೊತ್ತಿಲ್ಲ. ಆರೋ ಅದನ್ನು ಗುಟ್ಟಾಗಿ ಕೊಂಡುಕೊಂಡರೆಂದು ಕೇಳುವೆನು.

ವ್ರಜ—ವಿದ್ಯಾನಗರದಲ್ಲಿ ಆರೋ ಕೊಂಡುಕೊಂಡಿರಬೇಕು. ಇದು ಎಷ್ಟು ದಿವಸ ಗುಟ್ಟಾಗಿರಬಲ್ಲದು? ಜಹಗೀರುದಾರರು ದೇವದುರ್ಗಕ್ಕೆ ಬಂದೊಡನೆಯೇ ಎಲ್ಲವೂ ತಾನಾಗಿಯೇ ತಿಳಿಯುವುದು. ಇದಕ್ಕಾಗಿ ಚಿಂತೆಯೇಕೆ?

ಚೌಧುರಿ—ಈ ದಿನವೇ ಅವರು ಬರುವುದಾಗಿ ವರ್ತಮಾನವಿದೆ. ನಾಳೆಯೇ ದೇವೀ ಸರೋವರದಲ್ಲಿ ದೇವತಾಮಹೋತ್ಸವವು ನಡೆಯುವುದಂತೆ.

ವ್ರಜ—ದೇವೀ ಸರೋವರವೆಲ್ಲಿರುವುದು ?

ಚೌಧುರಿ—ನಮ್ಮ ಗ್ರಾಮಕ್ಕೂ ದೇವದುರ್ಗಕ್ಕೂ ನಡುವೆ ದೇವೀಸರೋವರವೆಂದು ಒಂದು ಪವಿತ್ರವಾದ ಸ್ಥಾನವಿರುವುದು. ಅಲ್ಲಿ ಮಂಗಳಗೌರಿಯ ದೊಡ್ಡ ದೇವಸ್ಥಾನವಿರುವುದು. ಅಲ್ಲಿಯೇ ಗೌರೀಮಹೋತ್ಸವವು ನಡೆಯುವುದು.

ವ್ರಜ—ಮಹಾಶಯ, ಅಲ್ಲಿ ಒಂದು ಪುರಾತನವಾದ ವಟವೃಕ್ಷವಿರುವಂತಿದೆ ಯಲ್ಲವೇ ?

ಚೌಧುರಿ—ಅದೇ ಸ್ಥಳ. ಅಲ್ಲಿಯೇ ಪೂಜೆ ನಡೆಯುವುದು.

ವ್ರಜ—ಹಾಗಾದರೆ ನಾನು ಆ ಸ್ಥಳವನ್ನೂ ನೋಡಿರುವೆನು. ಸ್ಥಳವು ಬಹುರಮ್ಯವಾಗಿರುವುದು.

ಚೌಧುರಿ—ನಾಳೆಯದಿನ ನಾವೂ ಅಲ್ಲಿಗೆ ಹೋಗೋಣ. ಅಲ್ಲಿ ಜಹಗೀರುದಾರನ ದರ್ಶನವಾದರೂ ಆಗಬಹುದು. ಆತನು ಎಂತಹ ಹಣಗಾರನಾಗಿರಬೇಕು?

ವ್ರಜ—ನಾನೂ ನಿಮ್ಮ ಜತೆಯಲ್ಲಿಯೇ ಬರುವೆನು.

ಹೀಗೆ ಮಾತನಾಡಿ ಮರುದಿನ ಇವರಿಬ್ಬರೂ ಪೂಜೆಯ ವೇಳೆಗೆ ದೇವಿಸರೋವರಕ್ಕೆ ತೆರಳಿದರು. ಅಲ್ಲಿ ನೂರಾರು—ಏಕೆ, ಸಾವಿರಾರು, ಜನರು ತುಂಬಿಹೋಗಿದ್ದರು. ಒಬ್ಬರನ್ನೊಬ್ಬರು ತಳ್ಳಿಕೊಂಡು ಹೋಗುವ ಗದ್ದಲವಂತೂ ಹೇಳಲೇ ಕೆಲಸವಿಲ್ಲ. ಮಕ್ಕಳು ಮರಿಗಳನ್ನು ಕಟ್ಟಿಕೊಂಡು ಬಂದಿದ್ದ ಹೆಂಗುಸರ ಪಾಡು ನಾಯ ಪಾಡಾಗಿದ್ದಿತು. ಆದರೂ ನೋಡಬೇಕೆಂಬ ಕುತೂಹಲದಿಂದ ಅವರು ಆವ ಕಷ್ಟವನ್ನೂ ಲೆಕ್ಕಿಸತಕ್ಕವರಾಗಿರಲಿಲ್ಲ. ಗಂಡಸರು, ಹೆಂಗುಸರು, ಎಲ್ಲರಿಗೂ, ದೇವರನ್ನು ನೋಡುವಮಾತು ಹಾಗಿರಲಿ, ಜಹಗೀರುದಾರರನ್ನು ನೋಡಬೇಕೆಂಬ ಕುತೂಹಲವು ಅಧಿಕವಾಗಿದ್ದುದರಿಂದ ನಾನು ಮುಂದು ತಾನು ಮುಂದು ಎಂದು ಒಬ್ಬರ ಮೇಲೊಬ್ಬರು ಬಿದ್ದು ಎದ್ದು ನುಗ್ಗಿ ಬರುತಿದ್ದರು. ಜಹಗೀರುದಾರನು ಅಲ್ಲಿರಲಿಲ್ಲ. ಆತನ ನೌಕರನೊಬ್ಬನು ಅಲ್ಲಲ್ಲಿ ತಿರುಗಾಡುತ್ತಾ ಸುತ್ತಲೂ ನೋಡುತಿದ್ದನು. ಆಗ ಲಾಲಮಹಾಶಯನು ಚೌಧುರಿಯನ್ನು ನೋಡಿ, "ಮಹಾಶಯ ! ಜನರ ಸಂದಣಿಯಿಂದ ದೇವತೆಯ ದರ್ಶನವೇ ಆಗಲಿಲ್ಲ. ಇಷ್ಟು ದೂರ ಬಂದು ಮಂಗಳ ಗೌರಿಯ ದರ್ಶನ ಪ್ರಸಾದಗಳನ್ನು ತೆಗೆದುಕೊಳ್ಳದೇ ಹೋಗುವುದು ಸರಿಯಲ್ಲ. ಕೊಂಚಹೊತ್ತು ಕಷ್ಟವಾದರೂ ಯತ್ನವಿಲ್ಲದೆ ಸಹಿಸಬೇಕಾಗುವುದು," ಎಂದು ಹೇಳಿದೊಡನೆಯೇ ಇಬ್ಬರೂ ಗುಂಪಿನಲ್ಲಿ ನುಗ್ಗಿಕೊಂಡು ದೇವರ ಬಳಿಗೈತಂದು ನಮಸ್ಕಾರಮಾಡಿ ಕುಳಿತರು. ಪೂಜೆಗೆ ಪ್ರಾರಂಭವಾಯ್ತು.

ಪುರೋಹಿತನು, “ ಶ್ರೀಮಂತ ಜಹಗೀರುದಾರರ ಹೆಸರೇನು ? ” ಎಂದು ಅಲ್ಲಿದ್ದವರನ್ನು ಕೇಳಿದನು. ಒಬ್ಬ ಪರಿಚಾರಕನು,-ಅವರ ಹೆಸರು ಗೊತ್ತಿಲ್ಲವೆಂದು ಹೇಳಿದನು.

“ ನಾನು ಆರ ಹೆಸರಿನಲ್ಲಿ ಸಂಕಲ್ಪಮಾಡಲಿ ? ಯಜಮಾನರ ನೌಕರರನ್ನಾದರೂ ಕೇಳಿದರೆ ಗೊತ್ತಾದೀತು,” ಎಂದು ಪುರೋಹಿತನು ಮತ್ತೆ ಹೇಳಿದನು.

ಜಹಗೀರುದಾರನ ನೌಕರನು ಬಂದು, “ಏನು ಪುರೋಹಿತರೇ ! ಇಲ್ಲಿ ಗದ್ದಲಕ್ಕೆ ಕಾರಣವೇನು ? ” ಎಂದು ಕೇಳಿದನು.

ಪುರೋಹಿತ—ಯಜಮಾನರ ಹೆಸರೇನು ? ಆರ ಹೆಸರಿನಲ್ಲಿ ನಾನು ಸಂಕಲ್ಪಮಾಡಲಿ ?

ನೌಕರ—ನಾನು ಅವರನ್ನು ನೋಡದಿರುವ ಮಾತು ಹಾಗಿರಲಿ, ಮೊದಲಲ್ಲಿ ಅವರ ಹೆಸರೇ ನನಗೆ ಗೊತ್ತಿಲ್ಲ. ಜಹಗೀರುದಾರರು ನಿಷ್ಕಾಮವ್ರತವನ್ನು ಅವಲಂಬಿಸಿರುವುದರಿಂದ, ಪುರೋಹಿತ ಮಹಾಶಯರೇ ಸಂಕಲ್ಪವನ್ನು ತಮ್ಮ ಹೆಸರಿನಲ್ಲಿಯೇ ಮಾಡಬಹುದಾಗಿ ವಿದ್ಯಾನಗರದಿಂದ ಪತ್ರ ಬಂದಿರುವುದು.

ಬಳಿಯಲ್ಲಿಯೇ ಕುಳಿತಿದ್ದ ಭಟ್ಟಾಚಾರ್ಯನೊಬ್ಬನು ಈ ಮಾತನ್ನು ಕೇಳಿದ ಕೂಡಲೆ ಪರಮಾನಂದ ಭರಿತನಾಗಿ “ ಸಾಧು! ಸಾಧು! ” ಎಂದು ಗಟ್ಟಿಯಾಗಿ ಕೂಗಿದನು.

ಪುರೋಹಿತನು ಈ ಮಾತಿಗೆ ತೃಪ್ತನಾಗದೆ, “ ಇದು ನಾನೆಂದೂ ನೋಡದ ಸಂಪ್ರದಾಯವಾಗಿದೆ. ಯಜಮಾನರ ಹೆಸರು ಗೊತ್ತಾದಲ್ಲದೆ ಪೂಜೆಗೆ ಪ್ರಾರಂಭಿಸುವುದಕ್ಕಾಗಲಾರದು,” ಎಂದು ಹಠ ಹಿಡಿದನು.

ಭಟ್ಟಾಚಾರ್ಯ—ಪುರೋಹಿತ ಮಹಾಶಯ, ವ್ಯರ್ಥವಾದ ಹಠದಿಂದ ಪ್ರಯೋಜನವೇನು ? ನಿಮ್ಮ ಹೆಸರಿನಲ್ಲಿಯೇ ಸಂಕಲ್ಪಮಾಡಿ ಕೆಲಸವನ್ನು ಆಯಿತೆನ್ನಿಸಬಾರದೆ ? ನೀವು ಇದಕ್ಕೆ ಸಮ್ಮತಿಸದಿದ್ದಲ್ಲಿ ಪೂಜಾ ಫಲವನ್ನು ಶ್ರೀಮನ್ನಾರಾಯಣನಿಗೇ ಅರ್ಪಣೆಮಾಡಿಬಿಡಿ. ಇದಕ್ಕೆ ತೊಂದರೆ ಯೇನು ? ನಿಷ್ಕಾಮ ಪೂಜಾವಿಧಿಯು ನಿಮಗೆ ತಿಳಿದಿದ್ದಲ್ಲಿ, ನೀವು ಗದ್ದಲವಿಲ್ಲದೆಯೇ ಕೆಲಸ ಮಾಡೋಣವಾಗಲಿ. ನಮ್ಮ ಜಹಗೀರುದಾರರು ಕೇವಲವಾಗಿ ಜ್ಞಾನಿಗಳಾದುದರಿಂದಲೇ ನಿಷ್ಕಾಮ ಕರ್ಮದಲ್ಲಿ ಆಸಕ್ತರಾಗಿರುವರೆಂದು ತೋರುವುದು. ಇದನ್ನು

ನೋಡಿದರೆ ಅವರು ಮಹಾತ್ಮರಾಗಿಯೇ ಇರಬೇಕು. ಪುರೋಹಿತರೆ! ಯಜಮಾನರು ಹೇಳಿದಂತೆ ನಡೆಯಿಸುವುದಕ್ಕೆ ನಿಮಗೆ ತೊಂದರೆ ಯೇನಿರುವುದು ?

ಪುರೋಹಿತ—ಭಟ್ಟಾಚಾರ್ಯರೆ! ನೀವು ತಿಳಿಯದೇ ಮಾತನಾಡಬೇಡಿರಿ, ಕಂಡಿರಾ ? ನಮ್ಮಪ್ಪನ ಕಾಲದಿಂದಲೂ ನೋಡದ ಪದ್ಧತಿಯನ್ನು ಇಂದು ನಾನು ಮಾಡಬೇಕಾಗಿದೆ. ಇಂತಹ ಕೆಲಸವನ್ನು ನಾನೆಂದಿಗೂ ಮಾಡಲಾರೆನು.

ಪುರೋಹಿತನು ಹೀಗೆ ಹೇಳಿ ಕೈಕಟ್ಟಿಕೊಂಡು ಕುಳಿತುಬಿಟ್ಟನು. ಅಲ್ಲಿದ್ದವರಿಗೆಲ್ಲರಿಗೂ ಮಿತಿಮೀರಿದ ಕೋಪಬಂದಿತು. ಕೆಲವರು ಪುರೋಹಿತನನ್ನು ಹೊಡದಟ್ಟಬೇಕೆಂದು ಎದ್ದು ನಿಂತರು. ಈ ಸಮಯದಲ್ಲಿ ಬಡ ಪುರೋಹಿತನ ಬಾಯಿಗೆ ಮಣ್ಣು ಬೀಳುವುದೆಂದು ತಿಳಿದು, ವ್ರಜವಿಹಾರಿಲಾಲನು ಪುರೋಹಿತನ ಹತ್ತಿರಕ್ಕೆ ಬಂದು, "ಸ್ವಾಮಿ, ಪುರೋಹಿತರೆ! ನಿಷ್ಕಾಮಪೂಜೆಯನ್ನು ಮಾಡುವುದು ನಿಮಗೆ ರೂಢಿಯಲ್ಲಿಲ್ಲದಿದ್ದರೆ, ಅದನ್ನರಿತವರಾರಾದರೂ ಮಾಡುವರು, ಇದಕ್ಕಾಗಿ ನೀವು ಆಗ್ರಹ ಮಾಡಬೇಕಾದುದಿಲ್ಲ. ಮತ್ತೊಬ್ಬರು ಪೂಜೆಮಾಡಿದರೂ, ನಿಮಗೆ ಬರಬೇಕಾದುದು ಬಂದೇ ಬರುವುದು. ಅದಕ್ಕಾಗಿ ನೀವು ಚಿಂತಿಸಬೇಕಾದುದಿಲ್ಲ. ಭಟ್ಟಾಚಾರ್ಯ ಮಹಾಶಯ! ನೀವಾದರೂ ದಯೆಯಿಟ್ಟು ಪೂಜೆಯನ್ನು ನೆರವೇರಿಸೋಣವಾಗಲಿ. ಬಂದ ಜನರೆಲ್ಲರೂ ಬಲು ಹೊತ್ತಿನಿಂದಲೂ ಕಾದು ಕಾದು ಸಾಕಾಗಿ ಹೋಗಿರುವರು," ಎಂದು ಬೆಸಗೊಂಡನು. ಭಟ್ಟಾಚಾರ್ಯನು ಇದಕ್ಕೆ ಸಮ್ಮತಿಸಲಿಲ್ಲ. ಎಷ್ಟು ಹೊತ್ತಾದರೂ ಆರೂ ಮುಂದುವರಿಯದಿರಲು ಭಟ್ಟಾಚಾರ್ಯನು ತಾನೇ ಪೂಜೆಮಾಡುವುದಾಗಿ ಒಪ್ಪಿಕೊಂಡು ಎದ್ದು ಬಂದನು. ಪುರೋಹಿತನು ಆತನನ್ನು ನೋಡಿ, "ನೀವಾರು ? ನಿಷ್ಕಾಮ ಪೂಜೆಯನ್ನು ಮಾಡುವುದಕ್ಕೆ ನಿಮಗೇನು ಬರುವುದು ? ಯೋಗ್ಯತೆಯಿಲ್ಲದಿದ್ದರೂ ನಿಮಗೆ ಹಣದ ಆಸೆಯೆಂದು ತೋರುವುದು,' ಎಂದು ಹೇಳಿದುದನ್ನು ಕೇಳಿ ಭಟ್ಟಾಚಾರ್ಯನು ತನ್ನ ಕಂಠವನ್ನು ಸರಿಮಾಡಿಕೊಂಡು "ಪುರೋಹಿತರೆ! ನಿಷ್ಕಾಮ ಪೂಜಾವಿಧಿಯನ್ನರಿಯದ ನಿಮಗೆ ಎಷ್ಟು ಮಾತು ? ನನ್ನ ವಿಷಯವನ್ನು ಕೇಳುವಿರಾ! ನಾನು ನವದ್ವೀಪದ ಪಂಡಿತ ಪ್ರಕಾಂಡನು. ನನಗೆ ಸಾಹಿತ್ಯ ವಿದ್ಯಾನಿಧಿಯೆಂದೂ, ವ್ಯಾಕರಣ ರಣಕೇಸರಿಯೆಂದೂ, ಪ್ರಾಚೀನ ನವೀನ ತರ್ಕಾಲಂಕಾರ ಶೇಖರನೆಂದೂ, ಧರ್ಮಶಾಸ್ತ್ರ ಪಾರಾವಾರ ಪಾರೀಣನೆಂದೂ, ಸರ್ವ ಮಂತ್ರ ತಂತ್ರ ಸ್ವತಂತ್ರನೆಂದೂ, ಚತುರ್ವೇದಾಧ್ಯಯನಾಧ್ಯಾಪನ ಚತುರ್ಮುಖನೆಂದೂ, ಉಪನಿಷದುದ್ಯಾನ ಕೇಳಿ ಸಾರಂಗನೆಂದೂ ಇನ್ನೂ ಏನೇನೋ ಬಿರುದಗಳುಂಟು. ಇವೆಲ್ಲವನ್ನೂ ಕಟ್ಟಿಕೊಂಡು ನಿಮಗಾಗುವುದೇನು ?" ಎಂದು

ಹೇಳಿ ಪೂಜೆಯನ್ನು ಸಾಂಗವಾಗಿ ನೆರವೇರಿಸಿದನು. ಪುರೋಹಿತನು ಹೊರತಾಗಿ ಮಿಕ್ಕವರೆಲ್ಲರೂ ಸಂತೋಷಪಟ್ಟರು. ಎಲ್ಲರಿಗೂ ತೀರ್ಥಪ್ರಸಾದವಾದ ಬಳಿಕ ಒಬ್ಬೊಬ್ಬರಾಗಿ ಹೊರಡಲಾರಂಭಿಸಿದರು. ಚೌಧುರಿಮಹಾಶಯನೂ ವ್ರಜ ವಿಹಾರಿಯನ್ನು ಕರೆದುಕೊಂಡು ಮನೆಗೆ ಬಂದುಬಿಟ್ಟನು.

ದೇವೀ ಸರೋವರದ ದೇವತಾರಾಧನೆಯಾದ ಕೆಲವು ದಿನಗಳ ವರೆಗೂ ಹೆಚ್ಚಿನ ವಿಷಯಗಳಾವುವೂ ನಡೆಯಲಿಲ್ಲ. ಹೀಗಿರಲೊಂದು ದಿನ ಲಾಲಮಹಾ ಶಯನು ಸಂಧ್ಯಾಕಾಲದಲ್ಲಿ ಸ್ವರ್ಣಕುಮಾರಿಯನ್ನು ಕರೆದುಕೊಂಡು ವಾಯು ಸೇವನೆಗಾಗಿ ಗಂಗಾತೀರದ ಕಡೆಗೆ ಬರುತ್ತಿದ್ದನು. ದಾರಿಯಲ್ಲಿ ವಿಶಾಲವಾಗಿ ಬೆಳೆದಿದ್ದ ಒಂದು ಗಿಡದ ಬುಡದಲ್ಲಿ ಒಬ್ಬ ಮನುಷ್ಯನು ಕುಳಿತಿದ್ದನು. ಅವನ ಸುತ್ತಲೂ ಜನರು ಗುಂಪುಕಟ್ಟಿಕೊಂಡು ನಿಶ್ಶಬ್ದವಾಗಿ ಕುಳಿತಿದ್ದರು. ಸ್ವರ್ಣ ಕುಮಾರಿಯು ಇದೇನು ಗದ್ದಲವೆಂದು ಕೇಳಿದಳು. ಲಾಲಮಹಾಶಯನು ಆಕೆಯನ್ನು ಕರೆದುಕೊಂಡು ಆ ಗಿಡದ ಬಳಿಗೆ ಬಂದು ಸೇರಿದನು. ಅಲ್ಲಿ ಜೋಯಿಸನೊಬ್ಬನು ಕುಳಿತುಕೊಂಡು ಬಂದವರಿಗೆ ಭೂತಭವಿಷ್ಯದ್ವರ್ತಮಾನಗಳನ್ನು ತಿಳಿಸಿ ಅದಕ್ಕೆ ತಕ್ಕಹಾಗೆ ಮರ್ಯಾದೆಯನ್ನು ಹೊದ್ದು ತಿದ್ದನು. ಸ್ವರ್ಣ ಕುಮಾರಿಯು ಇದನ್ನು ನೋಡಿ ಲಾಲಮಹಾಶಯನನ್ನು ಕುರಿತು, "ಪೂಜ್ಯ ಮಹಾಶಯ, ಈ ಬಗೆಯ ಭಾಗ್ಯ ಪರೀಕ್ಷೆಯನ್ನು ನೀವು ನಂಬುವಿರಾ?" ಎಂದು ಕೇಳಿದಳು.

ವ್ರಜ—ಸರಿಯಾದ ಫಲಗಳು ಕಂಡುಬರುವುದಾದರೆ ನಂಬಬಾರದೇತಕೆ? ನನಗೇನೋ ಸರಿಯಾಗಿ ಗುಣಿಸಿ ಫಲಾಫಲಗಳನ್ನೂ ಹೇಳುವ ಜೋಯಿಸರಲ್ಲಿ ನಂಬುಗೆಯುಂಟು. ಶಾಸ್ತ್ರವು ಸುಳ್ಳೆನ್ನುವುದಕ್ಕಾಗುವುದಿಲ್ಲ.

ಸ್ವರ್ಣ—ಚೆನ್ನಾಗಿ ಪರಿಶೋಧಿಸಿ ಹೇಳತಕ್ಕ ಜೋಯಿಸರು ಈ ಪ್ರಪಂಚದಲ್ಲಿ ಅತಿವಿರಳರು. ಹೀಗಿರುವಲ್ಲಿ ಹೊಟ್ಟೆಯನ್ನು ಹೊರೆದುಕೊಳ್ಳುವುದಕ್ಕೆ ಬಂದಿರುವ ಈ ಬಡಹಾರುವನು ಜನರ ಅದೃಷ್ಟವನ್ನು ಕುರಿತು ಏನ ಹೇಳ ಬಲ್ಲನು? ನನಗಾದರೋ ನಂಬುಗೆಯೇ ಸಾಲದು.

ವ್ರಜ—ನಾವು ಅವಾಗಲೂ ದುಡುಕಿ ಮಾತನಾಡಬಾರದು. ಆರಲ್ಲಿ ಆವ ಶಕ್ತಿಯಿರುವುದೋ ಆರುಬಲ್ಲರು? ಈ ಜೋಯಿಸನು ಹೇಳುವುದೆಲ್ಲವೂ ಸುಳ್ಳಾಗಿದ್ದರೆ, ಇಷ್ಟು ಜನರು ಆತನನ್ನು ಮುತ್ತಿಕೊಂಡಿರುವುದಕ್ಕೆ ಕಾರಣವೇನು? ಅವನಲ್ಲಿ ಏನೋ ಸಿದ್ಧಿಯಿರಬೇಕು?

ಸ್ವರ್ಣ—ತಾತ! ಹಾಗಾದರೆ ನಿಮ್ಮ ಆಯುಶ್ಶೇಷವೆಷ್ಟೆಂಬುದನ್ನು ತಿಳಿಯಬೇಕೆಂದಿರುವೆನು.

ವ್ರಜ—ಕುಮಾರಿ! ನಾನೂ ನಿನ್ನ ಭವಿಷ್ಯದ್ಯೋಗವನ್ನು ತಿಳಿಯಬೇಕೆಂದಿರುವೆನು.

ಸ್ವರ್ಣ—ಮಹಾಶಯ, ಕೆಲವು ವರ್ಷಗಳ ಕೆಳಗೆ ಒಬ್ಬ ಸಾಮುದ್ರಿಕ ಶಾಸ್ತ್ರಜ್ಞನು ಮನೆಗೆ ಬಂದು ನನ್ನ ಕೈ ನೋಡಿ ನಾನು ಅತುಲಸಂಪತ್ತಿಗೆ ಅಧಿಕಾರಿಣಿಯಾದ ಜಹಗೀರುದಾರಳಾಗುವೆನೆಂದೂ, ಅನೇಕ ದಾಸದಾಸಿಯರು ನನ್ನ ಸೇವೆಯನ್ನು ಮಾಡಿಕೊಂಡಿರುವರೆಂದೂ, ನನಗೆ ಸರ್ವಲಕ್ಷಣ ಸಂಪನ್ನನಾದ ಪತಿಯಿಂದ ಸ್ವರ್ಗಸುಖವೇ ಉಂಟಾಗುವುದೆಂದೂ, ಇನ್ನೂ ಏನೇನೋ ಸುಳ್ಳನ್ನು ಬಗುಳಿ ನನ್ನ ತಂದೆಯಿಂದ ಹಣಕಾಸುಗಳನ್ನು ಕಿತ್ತುಕೊಂಡು ಹೋದನು. ಅದು ಮೊದಲು ನಾನು ಆರಿಗೂ ಕೈ ತೋರಿಸುವುದನ್ನೇ ಬಿಟ್ಟುಬಿಟ್ಟೆನು.

ವ್ರಜ—ಅಂದಿಗೆ ಆ ಮಾತು; ಇಂದಿನ ವಿಷಯವನ್ನು ಪರೀಕ್ಷಿಸುವ. ಅದರಿಂದ ನಮಗೇನೂ ನಷ್ಟವಿಲ್ಲವಷ್ಟೇ?

ಸ್ವರ್ಣ—ನನಗೆ ಕೈ ತೋರುವುದಕ್ಕೆ ಇಷ್ಟವಿಲ್ಲ.

ವ್ರಜ—ನಿನ್ನ ಕೈ ತೋರಿಸಿ ಫಲಾಫಲಗಳನ್ನು ತಿಳಿಯಬೇಕೆಂದು ನನಗೆ ಇಷ್ಟ. ನಾನು ಇಷ್ಟರಲ್ಲಿಯೇ ನಿಮ್ಮ ಮನೆಯನ್ನು ಬಿಡುವವನಾಗಿರುವೆನು. ಬಳಿಕ ನಿನ್ನನ್ನು ಬಲಾತ್ಕಾರಪಡಿಸುವರಾರು? ಮುದುಕನ ಅಲ್ಪವಾದ ಈ ಇಷ್ಟವನ್ನು ನೆರವೇರಿಸುವುದಕ್ಕೆ ನಿನಗೆ ಮನಬಾರದೇ ಹೋಯಿತೇ! ಇದರ ಮೇಲೆ ನಿನ್ನ ಇಷ್ಟವಿದ್ದಂತೆ ಮಾಡಬಹುದು.

ಸ್ವರ್ಣ—(ಕಣ್ಣಿನಲ್ಲಿ ನೀರ ತಂದುಕೊಂಡು) ತಾತ! ನಮ್ಮ ಮನೆಯನ್ನು ಬಿಟ್ಟು ಹೋಗುವಿರಾ? ನಾವು ನಿಮಗೆ ಮಾಡಿದ ಅಪರಾಧವೇನು?

ವ್ರಜ—ಅಪರಾಧದ ಮಾತಲ್ಲ. ಹೋದಷ್ಟು ದಿನಗಳೂ ನಿಮ್ಮ ಮನೆಯಲ್ಲಿದ್ದರೆ ಚೆನ್ನಾಗಿರುವುದೇ?

ಸ್ವರ್ಣ—ನಾವಾರೂ ನಿಮ್ಮನ್ನು ಪರಸ್ಥಳದವರೆಂದು ಭಾವಿಸಿಯೇ ಇಲ್ಲವಲ್ಲಾ! ನಿಮ್ಮನ್ನು ನಾನು ತಾತನೆಂದೇ ತಿಳಿದಿರುವೆನು.

ವ್ರಜ—ಇದೆಲ್ಲವೂ ನಿಜವೇ ಅಹುದು. ನಿಮ್ಮ ಸಂಸಾರದಲ್ಲಿ ನನ್ನನ್ನು ಒಬ್ಬನನ್ನಾಗಿ ನೀವೆಲ್ಲರೂ ತಿಳಿದಿರುವಿರಿ. ನಾನೂ ನಿಮ್ಮನ್ನು ಆತ್ಮೀಯರೆಂದೇ ತಿಳಿದಿರುವೆನು.

ಸ್ವರ್ಣ—ಹಾಗಾದರೆ ಹೊರಡುವ ಮಾತೇಕೆ?

ವ್ರಜ—ನಾನು ಹೊರಡದೆ ಆವಾಗಲೂ ನಿಮ್ಮ ಮನೆಯಲ್ಲಿಯೇ ಇರಬೇಕೆಂದು ನಿಮ್ಮ ಇಷ್ಟವೇ?

ಸ್ವರ್ಣ—ನೀವು ಇರಬೇಕೆಂದೇ ನಮ್ಮೆಲ್ಲರ ಇಷ್ಟವು.

ವ್ರಜ—ನಾನು ಮುದುಕ, ಅದರಲ್ಲಿಯೂ ಅನಾಥನಾದ ದರಿದ್ರ ಮುದಿಗೊಡ್ಡು. ನನ್ನಿಂದ ನಿಮಗೆ ತೊಂದರೆಯೇ ಹೊರತು, ಪ್ರಯೋಜನವೇನೂ ಇಲ್ಲ.

ಸ್ವರ್ಣ—ನೀವು ಹಾಗೆ ತಿಳಿದಿರುವುದಾದರೂ, ನೀವು ನಮ್ಮ ಮನೆಯಲ್ಲಿಯೇ ಇರಬೇಕು. ನೀವು ನನ್ನ ತಂದೆಗೆ ಅಣ್ಣಂದಿರು. ನಿಮ್ಮನ್ನು ಬಿಟ್ಟಿರಲು ನನಗೆ ಸಾಧ್ಯವಿಲ್ಲ. ನೀವು ಹೊರಡುವುದಾದರೆ ನಾನೂ ನಿಮ್ಮ ಜತೆಯಲ್ಲಿಯೇ ಬಂದುಬಿಡುವೆನು. ನೀವು ಅಡ್ಡಿಮಾಡುವುದಾದರೆ ನಾನು ಗಂಗಾಮಾತೆಯ ವಕ್ಷದಲ್ಲಿಯಾದರೂ ಆಶ್ರಯವನ್ನು ಪಡೆದುಕೊಳ್ಳುವೆನು.

ವ್ರಜ—ಸ್ವರ್ಣ ಕುಮಾರಿ! ನಿನ್ನ ಪವಿತ್ರ ಹೃದಯವನ್ನೂ ಕೋಮಲ ಸ್ವಭಾವವನ್ನೂ ನಾನು ಚೆನ್ನಾಗಿಯೂ ಬಲ್ಲೆನು. ನಾನು ಇದೆಲ್ಲವನ್ನು ತಿಳಿತಿಳಿದೂ ಸರಕಾರವಾಡಿಯನ್ನು ಬಿಟ್ಟುಹೋಗಬೇಕಾಗಿರುವುದು. ಈಗ ನನ್ನ ಇಷ್ಟವನ್ನು ನೀನು ನೆರವೇರಿಸಿ ಕೊಡಬೇಕು. ನೀನು ತಿರಸ್ಕರಿಸುವುದಾದರೆ ನಾನು ಬದುಕಿದ್ದರೂ ಸತ್ತಂತೆಯೇ ಆಗುವುದು.

ಸ್ವರ್ಣ—ನಾನು ಕೈ ತೋರುವುದರಿಂದ ನಿಮಗೆ ಸಂತೋಷವುಂಟಾಗುವುದಾದರೆ, ಕೈ ತೋರುವೆನು. ತಮ್ಮ ಮಾತಿಗೆ ವಿರೋಧವಾಗಿ ನಡೆಯಲು ನನಗೆ ಇಷ್ಟವಿಲ್ಲ.

ಲಾಲಮಹಾಶಯನು ಸ್ವರ್ಣಕುಮಾರಿಯನ್ನು ಜೋಯಿಸನ ಬಳಿಗೆ ಕರೆದುಕೊಂಡು ಹೋಗಿ, "ಸ್ವಾಮಿ, ನೀವಾರು?" ಎಂದು ಕೇಳಿದನು.

ಜೋಯಿಸ—ನಾನು ನವಗ್ರಹೋಪಾಸಕನಾದ ಸಿದ್ಧ ಜೋಯಿಸನು. ನಾನು ಕೈ ನೋಡಿ ಮುಖ ನೋಡಿ ಸಮಯ ನೋಡಿ ಗುಣಿಸಿ ಜನರ ಭೂತ ಭವಿಷ್ಯದ್ವರ್ತಮಾನಗಳನ್ನು ಕಂಡುದು ಕಂಡಹಾಗೆಯೇ ತಿಳಿಸುವೆನು. ನೀವು ಕೇಳುವುದಾದರೆ ಕೇಳಬಹುದು. ಅನೇಕ ಜೋಯಿಸರು ಶಾಸ್ತ್ರದ ಮಾರ್ಗವನ್ನು ತಿಳಿಯದೆ ಸುಳ್ಳುಸುಳ್ಳಾಗಿ ಗುಣಿಸಿ ಬಾಯಿಗೆ ಬಂದ ಫಲವನ್ನು ಹೇಳಿ ಹಣವನ್ನು

ಕಿತ್ತುಕೊಂಡು ಹೋಗುವರು. ನಾನು ಹಣಕ್ಕಾಗಿ ಬಂದವನಲ್ಲ; ಶಾಸ್ತ್ರದ ಸತ್ಯ ಸ್ವರೂಪವನ್ನು ಜನರಿಗೆ ತಿಳಿಸಿ, ಎಲ್ಲರಿಗೂ ಜ್ಯೋತಿಶ್ಶಾಸ್ತ್ರದಲ್ಲಿ ನಂಬುಗೆಯನ್ನು ಹುಟ್ಟಿಸುವುದಕ್ಕಾಗಿ ಬಂದಿರುವೆನು. ನನ್ನಲ್ಲಿ ಆವ ಆಡಂಬರವೂ ಇಲ್ಲದಿರುವುದರಿಂದ, ಜನರು ನನ್ನನ್ನು ಸಾಮಾನ್ಯವಾಗಿ ನಂಬರು. ಇದು ಆಡಂಬರಕ್ಕೆ ಕಾಲವೇ ಹೊರತು ವಿದ್ಯಾವಂತರಿಗೆ ಕಾಲವಲ್ಲ. ಇದರಿಂದಲೇ ಲೋಕದಲ್ಲಿ ವಿದ್ಯೆಯು ಹಾಳಾಗಿ ಅವಿದ್ಯೆಯು ಪ್ರಕಾಶಕ್ಕೆ ಬರುತ್ತಿರುವುದು. ಮಹಾಶಯ! ನನ್ನ ಯೋಗ್ಯತೆಯನ್ನು ಪರೀಕ್ಷಿಸಿಯಾದರೂ ನೋಡೋಣವಾಗಲಿ. ನಿಮಗೆ ನನ್ನ ಮಾತಿನಲ್ಲಿ ನಂಬುಗೆಯು ಕಂಡುಬಂದ ಮೇಲೆ ನನಗೆ ಉಚಿತವಾಗಿ ಉಪಕರಿಸಬಹುದು.

ಲಾಲಮಹಾಶಯನು ಜೋಯಿಸನ ವಾಗ್ವಿಲಾಸವು ಮುಗಿದ ಮೇಲೆ, "ಸ್ವಾಮಿ, ಈ ಹುಡುಗಿಯ ಕೈ ನೋಡಿ ಫಲಾಫಲಗಳನ್ನು ತಿಳಿಸೋಣವಾಗಲಿ," ಎಂದು ಹೇಳಿದನು.

ಜೋಯಿಸನು ಹುಡುಗಿಯನ್ನು ನೋಡಿ, "ಅತಿ ಸುಲಕ್ಷಣೆಯಾದ ಕನ್ನೆ; ಈಕೆಯ ಮುಖದಲ್ಲಿ ಸರಸ್ವತಿಯು ನಲಿದಾಡುವಳು; ಕೈಗಳಲ್ಲಿ ಲಕ್ಷ್ಮಿಯು ತಾಂಡವವಾಡುವಳು. ಈಕೆಯು ಸಾಕ್ಷಾತ್ತಾಗಿ ವಿಶ್ವೇಶ್ವರಿಯಾದ ಅನ್ನಪೂರ್ಣಾದೇವಿ," ಎಂದು ಹೇಳಿದನು. ಸ್ವರ್ಣಕುಮಾರಿಯು ನಾಚುಗೆಯಿಂದ ತಲೆವಾಗಿದವಳಾಗಿ ತನ್ನ ಕೈಯನ್ನು ತೋರಿದಳು. ಜೋಯಿಸನು ಕೈಗಳ ರೇಖೆಗಳನ್ನು ಬಗೆಬಗೆಯ ರೀತಿಯಿಂದ ಪರೀಕ್ಷಿಸಿ ಇಂತೆಂದನು:—"ಈಕೆಯು ಕೊಂಚಕಾಲವೆನ್ನುವುದರೊಳಗಾಗಿಯೇ ಅತುಳೈಶ್ವರ್ಯಸಂಪನ್ನವಾದ ಜಹಗೀರಿಗೆ ಸರ್ವಾಧಿಕಾರಿಣಿಯಾಗುವಳು. ಅನ್ನಪೂರ್ಣಾ ಸ್ವರೂಪಿಣಿಯಾದ ಈಕೆಯನ್ನು ಬಲುಮಂದಿ ದಾಸದಾಸಿಯರು ಆವಾಗಲೂ ಸೇವಿಸಿಕೊಂಡಿರುವರು."

ಸ್ವರ್ಣಕುಮಾರಿಯು ಈ ಮಾತುಗಳನ್ನು ಕೇಳಿದೊಡನೆಯೇ ತನ್ನ ಕೈಯನ್ನು ಹಿಂದಕ್ಕೆ ತೆಗೆದುಕೊಂಡುಬಿಟ್ಟಳು. ಆ ಕೂಡಲೆ ಜೋಯಿಸನು ಹುಡುಗಿಯ ಮುಖವನ್ನು ದೃಷ್ಟಿಸಿ ನೋಡಿ, ಮತ್ತೊಂದು ವಿಷಯ ತಿಳಿಸಬೇಕಾಗಿದೆಯೆಂದು ಸ್ವರ್ಣಕುಮಾರಿಯ ಕೈಯನ್ನು ಹಿಡಿದು ನೋಡಿದನು. ಬಲುಹೊತ್ತಿನ ಮೇಲೆ ವೃದ್ಧನನ್ನು ಕುರಿತು, "ಪೂಜ್ಯ ಮಹಾಶಯ, ಮುಖ್ಯವಾದ ಸಂಗತಿಯನ್ನು ಮರೆತಿದ್ದೆನು. ಅದನ್ನು ಈಗ ತಿಳಿಸುವೆನು. ಈಕೆಗೆ ಇನ್ನೂ ವಿವಾಹವಾಗಿಲ್ಲ. ವರನು ದೂರದಲ್ಲಿರುವುದರಿಂದ, ಮದುವೆಯು ಕೊಂಚ ಸಾವಕಾಶವಾಗಿಯೇ ಆಗುವುದು. ಈ ವಿಷಯದಲ್ಲಿ ಶಾಸ್ತ್ರಪ್ರಮಾಣವನ್ನು ಇಲ್ಲ ತಿಳಿಸುವೆನು.

ಯುಕ್ತಾಯುಕ್ತ ವಿವೇಕೋಸ್ಯಾ ಯದಾ ಸ್ಫುರತಿ ಮಾನಸೇ ||
ಆಯಾಸ್ಯತಿ ವರೋದೂರಾ ತ್ತದಾ ಹೃದಯ ಮೋಹನಃ ||

ಅರ್ಥ—ಈಕೆಯ ಮನದಲ್ಲಿ ಯುಕ್ತಾಯುಕ್ತ ವಿವೇಕ ಪರಿಜ್ಞಾನವು ಆವಾಗ ಉಂಟಾಗುವುದೋ, ಆಗ ಪ್ರಾಣಪ್ರಿಯನಾದ ಗಂಡನು ದೂರದೇಶದಿಂದ ಬಂದು ಸೇರುವನು.

ಈಕೆಗೆ ಒಳ್ಳೆಯ ವರನೇ ದೊರೆಯುವನು, ಆದರೆ ಇಷ್ಟನಾದ ವರನೊಡನೆ ವಿವಾಹವು ಕೊಂಚ ಸಾವಕಾಶವಾಗಿಯೇ ನಡೆಯಬೇಕಾಗಿರುವುದು. ವಿವಾಹವಾದಮೇಲೆ ಈಕೆಯು ಗಂಡನೊಡನೆ ನಾನಾ ಭೋಗಗಳನ್ನನುಭವಿಸುವಳು. ಇದರಲ್ಲಿ ಕೊಂಚವಾದರೂ ಸುಳ್ಳಿಲ್ಲ.'' ಎಂದು ನುಡಿದನು.

ಲಾಲಮಹಾಶಯನು ಇದನ್ನು ಕೇಳಿ ತಿಳಿದುಕೊಂಡ ಬಳಿಕ ಸ್ವರ್ಣಕುಮಾರಿಯನ್ನು ಕರೆದುಕೊಂಡು ಮನೆಗೆ ಬಂದು ಸೇರಿದನು. ಸ್ವರ್ಣಕುಮಾರಿಯು ಏಕಾಂತವಾಗಿ ತನ್ನ ತಂದೆಯನ್ನು ನೋಡಿ, ''ಅಪ್ಪಯ್ಯ! ತಾತನು ನಮ್ಮ ಮನೆಯನ್ನು ಬಿಟ್ಟು ಹೊರಟು ಹೋಗುವುದರಲ್ಲಿರುವರು,'' ಎಂದಳು.

ಚೌಧುರಿಯು ಈ ಮಾತನ್ನು ಕೇಳಿ ಹೆದರಿದವನಾಗಿ ವ್ರಜವಿಹಾರಿಯನ್ನು ಕುರಿತು, ''ಮಹಾಶಯ, ತಾವು ಹೊರಟು ಹೋಗುವುದಾಗಿ ಕೇಳಿದೆನು, ಇದು ನಿಜವೇ?'' ಎಂದನು.

ವ್ರಜ—ಮಹಾಶಯ, ಅಹುದು, ನಿಜ. ಒಂದೆರಡು ದಿನಗಳಲ್ಲಿಯೇ ಹೊರಟುಹೋಗಬೇಕೆಂದು ಸಂಕಲ್ಪಮಾಡಿರುವೆನು.

ಚೌಧುರಿ—(ಖಿನ್ನನಾಗಿ) ಮೋಹನನೂ ಹೊರಟು ಹೋದನು; ತಾವೂ ಹೊರಟು ಹೋಗೋಣವಾಗುವುದು. ನಾನು ತಾನೇ ಇಲ್ಲಿದ್ದು ಮಾಡುವುದೇನಿದೆ? ನಾನೂ ಎಲ್ಲಿಗಾದರೂ ಹೊರಟುಹೋಗಿಬಿಡುವೆನು. ಮಹಾಶಯ, ತಾವು ಹೊರಡುವುದಕ್ಕೆ ನಮ್ಮ ಅಪರಾಧವೇನು? ತಿಳಿಸಬೇಕು.

ವ್ರಜ—ಅಪರಾಧವೆಂದವರಾರು? ನಿಮ್ಮ ಉಪಕಾರವನ್ನು ನಾನೆಂದಿಗೂ ಮರೆಯಲಾರೆನು. ನಿಮ್ಮ ಉಪಕಾರಕ್ಕೆ ಪ್ರತ್ಯುಪಕಾರಮಾಡುವುದು ನನ್ನ ಹಣೆಯಲ್ಲಿಯೇ ಬರೆದಿಲ್ಲ. ನಿಮ್ಮನ್ನು ಬಿಟ್ಟು ಹೋಗಲು ನನಗೆ ಮನಸ್ಸೇ ಇಲ್ಲ; ನನಗೆ ಬೇರೆಯ ಕೆಲಸಗಳಿರುವುದರಿಂದ, ನಾನು ಹೋಗಲೇ ಬೇಕಾಗಿರುವುದು.

ಚೌಧುರಿ—ಹಾಗಾದರೆ ತಾವು ಕೆಲಸವನ್ನು ತೀರಿಸಿಕೊಂಡು ಇಲ್ಲಿಗೆ ಬರುವುದಾವಾಗ? ಮೂರು ನಾಲ್ಕು ದಿನಗಳಾದರೂ ಆಗಬಹುದಷ್ಟೇ?

ಚೌಧುರಿ ಮಹಾಶಯನು ಈ ರೀತಿಯಾಗಿ ಮಾತನಾಡುತ್ತಿರುವಷ್ಟರಲ್ಲಿಯೇ ಸೇವಕನೊಬ್ಬನು ಬಂದು ಚೌಧುರಿಯ ಕೈಗೆ ಒಂದು ಕಾಗದವನ್ನು ಕೊಟ್ಟು ಹೊರಟುಹೋದನು. ಚೌಧುರಿಯು ಕಾಗದವನ್ನು ಬಿಚ್ಚಿ ಓದಿದನು :—

ಕಾಗದದ ಒಕ್ಕಣೆ

ದೇವದುರ್ಗ

ಆನಂದ ಸಂ|| ಆಶ್ವಯುಜ ಶುದ್ಧ ಪ್ರಥಮಾ

ಶ್ರೀಮಂತರಾದ ಗೋವಿಂದಚಂದ್ರ ಚೌಧುರಿ ಮಹಾಶಯರಲ್ಲಿ, ದೇವದುರ್ಗದ ಜಹಗೀರುದಾರರ ಕಾರ್ಯ ಪ್ರತಿನಿಧಿಯಾದ ನಾಗೇಂದ್ರಭೂಷಣನು ಮಾಡುವ ಅನೇಕಾನೇಕ ವಿಜ್ಞಾಪನೆಗಳು. ಸಮಸ್ತ ಕುಶಲೋಪರಿ.

ನಾಳೆಯ ದಿನ ಗೋಧೂಳಿ ಲಗ್ನದಲ್ಲಿ ಶ್ರೀಮಂತರಾದ ಜಹಗೀರುದಾರರು ದೇವದುರ್ಗದಲ್ಲಿ ನೂತನ ಗೃಹಪ್ರವೇಶ ಮಹೋತ್ಸವವನ್ನು ನೆರವೇರಿಸ ಬೇಕೆಂಬುದಾಗಿ ಸಂಕಲ್ಪಮಾಡಿರುವರು. ಈ ಮಂಗಳ ಮುಹೂರ್ತಕ್ಕೆ ಸರಿಯಾಗಿ ತಾವು ಸಪುತ್ರ ಸಮಿತ್ರ ಸಕಲತ್ರರಾಗಿ ಬಿಜಯಂಗೆಯ್ದು ತಮ್ಮ ಪರಮಪಾವನವಾದ ಪಾದಧೂಳಿಯಿಂದ ದೇವದುರ್ಗದ ಭೂಪ್ರದೇಶವನ್ನು ಪವಿತ್ರವನ್ನಾಗಿ ಮಾಡಬೇಕೆಂದು ಇದರಿಂದ ತಲೆವಾಗಿ ಪ್ರಾರ್ಥಿಸಿಕೊಂಡಿದೆ. ಸಾಕ್ಷಾತ್ತಾಗಿ ಬಂದು ನಿವೇದನಮಾಡಿಕೊಳ್ಳುವುದಕ್ಕೆ ಅವಕಾಶವಿಲ್ಲದುದರಿಂದ, ಈ ಪತ್ರಮುಖದಿಂದ ಪ್ರಾರ್ಥಿಸಿಕೊಳ್ಳಬೇಕಾಯಿತು. ಈ ಮಹಾಪರಾಧವನ್ನು ಕ್ಷಮಿಸಿ ಕಾಲಕ್ಕೆ ಸರಿಯಾಗಿ ಶ್ರೀಪಾದವನ್ನು ಬಳೆಯಿಸುವುದಾದರೆ ಗೃಹಪತಿಯು ಕೃತಾರ್ಥರಾಗುವರು.

ಇತಿ ನಿಮ್ಮ ಪಾದಸೇವಕ,

ನಾಗೇಂದ್ರಭೂಷಣ.

ಚೌಧುರಿ ಮಹಾಶಯನು ಆಹ್ವಾನ ಪತ್ರಿಕೆಯನ್ನು ಓದಿದ ಬಳಿಕ ಲಾಲ ಮಹಾಶಯನನ್ನು ನೋಡಿ, "ಇದೇನು ಆಶ್ಚರ್ಯವಾಗಿದೆ! ಇದರಲ್ಲಿಯೂ ಯಜಮಾನರ ಹೆಸರೇ ಕಂಡುಬರುವುದಿಲ್ಲ," ಎಂದು ಪ್ರಶ್ನೆಮಾಡಿದನು.

ವ್ರಜ—ನಾಳೆ ಗೃಹಪ್ರವೇಶವಾದುದರಿಂದ, ಜಹಗೀರುದಾರನಾರೆಂಬುದು ಆಗಲಾದರೂ ಗೊತ್ತಿಗೆ ಬರದೇ ಹೋದೀತೇ?

ಚೌಧುರಿ—ಮಹಾಶಯ, ತಾವು ಕೆಲಸದ ಮೇಲೆ ಎಲ್ಲಿಗೋ ಹೊರಡ ಬೇಕೆಂದು ಸಂಕಲ್ಪಮಾಡಿದ್ದಿರಿ. ಒಂದೆರಡು ದಿನಗಳ ಮಟ್ಟಿಗೆ ತಾವು ಇಲ್ಲಿಯೇ ನಿಲ್ಲುವುದಾದರೆ, ನಾಳೆಯ ಸಾಯಂಕಾಲ ನಾವೆಲ್ಲರೂ ದೇವದುರ್ಗಕ್ಕೆ ಹೋಗಿ ನೋಡಿಕೊಂಡು ಬರಬಹುದು. ಅಲ್ಲಿಗೆ ಹೋಗಲು ತಮಗೆ ಆಕ್ಷೇಪಣೆಯೇನೂ ಇಲ್ಲವಷ್ಟೇ?

ವ್ರಜ—ಆಕ್ಷೇಪವೇನು?

ಚೌಧುರಿ—ಪೂಜ್ಯ ಮಹಾಶಯ, ತಾವು ನಮ್ಮನ್ನು ಬಿಟ್ಟು ಹೊರಟು ಹೋಗುವುದನ್ನು ಸ್ಮರಿಸಿಕೊಂಡರೆ ನನ್ನ ಎದೆಯು ಪುಡಿಪುಡಿಯಾಗಿ ಹೋಗುವುದು. ನಿಮ್ಮನ್ನು ಬಿಟ್ಟು ನಾನು ಅರೆಗಳಿಗೆಯಾದರೂ ಸುಖಿಯಾಗಿರಲಾರೆನು. ನೀವು ಕೆಲಸದ ಮೇಲೆ ಹೊರಟುಹೋದರೆ, ಮತ್ತಾವಾಗ ಹಿಂದಿರುಗಿಬರುವುದು?

ವ್ರಜ—ನಿಮ್ಮ ಮನೆಯಲ್ಲಿ ವಾಸವಾಗಿರುವುದು ನನಗೆ ಒಗ್ಗಿ ಹೋಗಿರುವುದು. ನಿಮ್ಮೆಲ್ಲರನ್ನೂ ಬಿಟ್ಟು ಹೋಗಬೇಕೆಂದರೆ ನನಗೆ ಕಾಲೇ ಬರದು. ಆದರೂ ಯತ್ನವಿಲ್ಲದೆ ಹೋಗಬೇಕಾಗಿದೆ. ಆಗಿಂದಾಗ ನಿಮ್ಮಲ್ಲಿಗೆ ಬಂದು ಹೋಗುತ್ತಿರುವೆನು. ಇದಕ್ಕಾಗಿ ನೀವು ಚಿಂತಿಸಬೇಕಾಗಿಲ್ಲ.

---

## ಒಂಬತ್ತನೆಯ ವಿಲಾಸ

### ಜಹಗೀರುದಾರನಾರು?

ಈಗಣಕಾಲದಲ್ಲಿ ಜನರು ಸ್ಥಳಪ್ರದೇಶಗಳಲ್ಲಿ ಕುದುರೆಯ ಬಂಡಿಗಳನ್ನೇರಿ ಹೇಗೆ ಸಂಚರಿಸುತ್ತಿರುವರೋ, ಹಾಗೆಯೇ ಪೂರ್ವಕಾಲದಲ್ಲಿ ಗಂಗಾತೀರದ ಗ್ರಾಮಗಳಲ್ಲಿ ವಾಸವಾಗಿದ್ದವರು ಜಲಪ್ರದೇಶದಲ್ಲಿ ತೆಪ್ಪ ದೋಣಿ ಹಡಗು ಮುಂತಾದುವುಗಳ ಮೂಲಕವಾಗಿ ಸ್ಥಲದಿಂದ ಸ್ಥಲಕ್ಕೆ ಸಂಚರಿಸುವವರಾಗಿದ್ದರು. ಆಗ ದೋಣಿಗಳನ್ನೇರಿ ಪಯಣಮಾಡುವುದು ದೊಡ್ಡತನದ ಅದೊಂದು ಸೂಚನೆಯಾಗಿದ್ದಿತು. ಈಗ ಸ್ವಂತಕ್ಕೆ ಕುದುರೆಯ ಬಂಡಿಗಳನ್ನು ಇಟ್ಟುಕೊಳ್ಳುವುದೆಂದರೆ ಸಾಮಾನ್ಯವಲ್ಲ, ಅದರಿಂದ ಯಜಮಾನನಿಗೆ ಹೆಚ್ಚಿನ ವೆಚ್ಚವೇ ಆಗುವುದು, ಆದರೆ ದೋಣಿಯಿಂದ ಅಷ್ಟಾಗಿ ವೆಚ್ಚವೇನೂ ಆಗುವಂತಿಲ್ಲ. ಒಬ್ಬ ದೊಡ್ಡ ಮನುಷ್ಯನು ಒಂದು ದೋಣಿಯನ್ನು ಸ್ವಂತಕ್ಕೆ ಕೊಂಡಿಟ್ಟುಕೊಂಡರೆ ಯಥೇಷ್ಟವಾಗಿ ಹೋಯಿತು. ಅವನು ಅದನ್ನು ಬೇಕಾದಾಗ ಉಪಯೋಗಿಸಬಹುದು, ಬೇಡದಾಗ ನದೀತೀರದ ಒಂದೆಡೆಯಲ್ಲಿ ಕಟ್ಟಿಹಾಕಿರಬಹುದು. ಇದು ಕುದುರೆಯಂತೆ ಹುಲ್ಲ ಕೇಳುವುದಿಲ್ಲ, ಹುರಳಿ ಕೇಳುವುದಿಲ್ಲ. ಈ ಸೌಲಭ್ಯದಿಂದಲೇ ಹಣಗಾರರಾದ

ಅನೇಕ ಗೃಹಸ್ಥರು ಕಡೆಯ ಪಕ್ಷಕ್ಕೆ ಒಂದು ದೋಣಿಯನ್ನಾದರೂ ಸ್ವಂತಕ್ಕೆ ಕೊಂಡಿಟ್ಟಿರುವರು. ಇದರಂತೆಯೇ ಗೋವಿಂದ ಚಂದ್ರ ಚೌಧುರಿಯ ಬಳಿಯಲ್ಲಿಯೂ ಒಂದೆರಡು ದೋಣಿಗಳು ರಾಯಘಟ್ಟದ ಒಂದೆಡೆಯಲ್ಲಿ ಸಿದ್ಧವಾಗಿರುತಿದ್ದುವು.

ಮರುದಿನ ಚೌಧುರಿ ಮಹಾಶಯನು ಕಾಲದೇಶಾನುಗುಣವಾದ ಉಡುಗೆ ತೊಡುಗೆಗಳನ್ನು ಧಾರಣಮಾಡಿ ಸಮಯಕ್ಕೆ ಸರಿಯಾಗಿ ದೇವದುರ್ಗಕ್ಕೆ ಹೊರಡಲು ಸಿದ್ಧನಾದನು. ಸ್ವರ್ಣಕುಮಾರಿಯು ಅಹಂಕಾರಸೂಚಕವಲ್ಲದ ಸಾಮಾನ್ಯವಾದ ಸೀರೆಯನ್ನುಟ್ಟಳು. ಧರಿಸುವುದಕ್ಕೆ ಬೇಕಾದ ಹಾಗೆ ಒಡವೆಗಳಿದ್ದರೂ, ಆಕೆಯು ಹೆಚ್ಚಿನ ಒಡವೆಗಳನ್ನು ತೊಟ್ಟುಕೊಳ್ಳಲು ಇಷ್ಟಪಡಲಿಲ್ಲ. ರೂಪವಂತರಿಗೆ ರೂಪವೇ ಉತ್ಕೃಷ್ಟವಾದ ಆಭರಣವಾಗಿರುವುದು. ನಿರ್ಜೀವವಾದ ಇತರಾಭರಣಗಳು ಇರತಕ್ಕ ರೂಪವನ್ನು ಹೆಚ್ಚಿಸುವುದೋ ಕಡಮೆ ಮಾಡುವುದೋ ಬಲ್ಲವರಾರು? ಕೆಲವರು ಆಭರಣಗಳಿಂದ ಸೌಂದರ್ಯವು ತಿರೋಹಿತವಾಗುವುದೆಂದು ತಿಳಿದಿರುವರು, ಮತ್ತೆ ಕೆಲವರು ರತ್ನಾಭರಣ ಧಾರಣದಿಂದ ಕುರೂಪಿಗಳು ಸುರೂಪಿಗಳಾಗುವರೆಂದು ಭಾವಿಸಿರುವರು. ಇನ್ನೂ ಕೆಲವರು ಆಭರಣಗಳನ್ನು ಸುರೂಪಿಗಳು ಧರಿಸಿದರೆ, ಅವರ ಸುರೂಪವು ಹೆಚ್ಚುವುದೆಂದೂ, ಕುರೂಪಿಗಳು ಧರಿಸಿದರೆ, ಅವರ ಕುರೂಪವು ಹೆಚ್ಚುವುದೆಂದೂ ವಾದ ವಿವಾದಗಳನ್ನು ಮಾಡುವರು. ಆಭರಣ ಧಾರಣ ವಿಷಯದಲ್ಲಿ ಇನ್ನೂ ಆವ ಬಗೆಯ ಸಿದ್ಧಾಂತವೂ ಆಗಿಲ್ಲವಾದುದರಿಂದ, ನಮ್ಮ ಸ್ವರ್ಣಕುಮಾರೀ ದೇವಿಯು ಆವ ಬಗೆಯ ನೂತನಾಭರಣಗಳನ್ನೂ ತೊಡುವುದಕ್ಕೆ ಇಷ್ಟವುಳ್ಳವಳಾಗಲಿಲ್ಲ. ಸರ್ವಾಂಗಸುಂದರಿಯಲ್ಲಿ ಸಹಜವಾದ ರೂಪವಿರುವುದಾದರೆ, ಆ ರೂಪವೇ ಆಭರಣಗಳಿಗೆ ಆಭರಣಪ್ರಾಯವಾಗಿರುವುದು. ನಿರ್ಜೀವವಾದ ಅಲ್ಪಮೂಲ್ಯವುಳ್ಳ ಕನಕರತ್ನಾಭರಣಗಳೆಲ್ಲಿ? ಬೆಲೆಯೇ ಇಲ್ಲದ ಸಜೀವವಾದ ರೂಪವೆಂಬುದೆಲ್ಲಿ? ವಿವೇಕವಿಲ್ಲದ ಸ್ತ್ರೀಯರು ದೇವರು ಕೊಟ್ಟಿರುವ ರೂಪವನ್ನು ಸರಿಯಾಗಿ ರಕ್ಷಿಸಿಕೊಳ್ಳಲಾರದೆ ಆಭರಣಗಳನ್ನು ಬಯಸುವರು. ರೂಪವಿದ್ದ ಮೇಲೆ ಆಭರಣವೇತಕ್ಕೆ, ರೂಪವಿಲ್ಲದ ಮೇಲೆ ಆಭರಣವೇತಕ್ಕೆ, ಎಂಬುದನ್ನು ನಮ್ಮ ಆರ್ಯಮಹಿಳೆಯರು ಅರಿವುದಾದರೆ ಅವರ ಸಂಸಾರದಲ್ಲಿ ಸುಖಶಾಂತಿಗಳು ನಿರ್ಬಾಧವಾಗಿ ಏಕಾಧಿಪತ್ಯ ಮಾಡುವುವು.

ವ್ರಜವಿಹಾರಿಲಾಲನು ಹೊರಡುವುದಕ್ಕೆ ಸಿದ್ಧನಾದರೂ, ತನ್ನ ವೇಷಭಾಷೆಗಳನ್ನು ಕೊಂಚವಾದರೂ ಮಾರ್ಪಡಿಸದೇ ಹೋದನು. ಆದರೆ ಈತನು ನಿತ್ಯವೂ ಧರಿಸಿಕೊಂಡಿದ್ದಂತೆ ಜಪಮಾಲೆಯನ್ನು ಇಂದು ಮಟ್ಟಿಗೆ ಧರಿಸಿಕೊಳ್ಳಲಿಲ್ಲ. ವ್ರಜವಿಹಾರಿಲಾಲನೂ ಒಳ್ಳೆಯ ಬಟ್ಟೆಬರೆಗಳನ್ನು ಧರಿಸಿಕೊಂಡು ಬರಬೇಕೆಂದು ಚೌಧುರಿಗೆ ಇಷ್ಟವಿದ್ದಿತು. ಆದರೆ ಮುದುಕನಿಗೆ ತಿಳಿಸುವುದಕ್ಕೆ ಅವನು ಸಾಹಸವುಳ್ಳವ

ಸಾಗಲಿಲ್ಲ. ವೃದ್ಧನು ಹೇಗಿದ್ದರೂ ಇರಬಹುದೆಂದೆಂದುಕೊಂಡು ಚೌಧುರಿಯು ಸ್ವರ್ಣಕುಮಾರಿಯನ್ನೂ ಲಾಲಮಹಾಶಯನನ್ನೂ ಜತೆಯಲ್ಲಿ ಕರೆದುಕೊಂಡು ದೋಣಿಯನ್ನೇರಿದನು. ಕಾಲುಗಂಟೆಯೊಳಗಾಗಿ ದೋಣಿಯು ದೇವದುರ್ಗದ ಘಟ್ಟವನ್ನು ಸೇರಿತು. ದೇವದುರ್ಗದ ಬ್ರಾಹ್ಮಣನೊಬ್ಬನು ಇಬ್ಬರು ಪರಿಚಾರಕ ರೊಡನೆ ಬಂದು ಚೌಧುರಿಯನ್ನು ಇದಿರುಗೊಂಡು ಚೌಧುರಿಗೂ ಸ್ವರ್ಣಕುಮಾ ರಿಗೂ ನಮಸ್ಕರಿಸಿದನು. ನಮ್ಮ ವೃದ್ಧಮಹಾಶಯನನ್ನು ಆರೂ ಗಮನಿಸಲೂ ಇಲ್ಲ, ಉಪಚಾರೋಕ್ತಿಗಳನ್ನಾಡಲೂ ಇಲ್ಲ. ಚೌಧುರಿಯು ವೃದ್ಧನ ವಿಷಯದಲ್ಲಿ ತೋರಿಸಿದ ಉಪೇಕ್ಷೆಯನ್ನು ನೋಡಿ ವ್ಯಸನಪಟ್ಟವನಾಗಿ ಬ್ರಾಹ್ಮಣನನ್ನು ಕುರಿತು, "ಮಹಾಶಯ, ನಾಗೇಂದ್ರಭೂಷಣರೆಂಬುವರು ನೀವೆಯೇ?" ಎಂದನು.

ಬ್ರಾಹ್ಮಣನು ನಮ್ರಭಾವವನ್ನು ತಾಳಿದವನಾಗಿ, "ಮಹಾಶಯ, ನನ್ನನ್ನೇ ನಾಗೇಂದ್ರಭೂಷಣನೆಂದು ಕರೆವರು," ಎಂದನು.

ಚೌಧುರಿ—ಆಹ್ವಾನ ಪತ್ರದಲ್ಲಿ ಮಿತ್ರರೊಡನೆ ಬರಬೇಕೆಂದು ಬರೆ ದಿದ್ದುದರಿಂದ, ನಾನು ನನ್ನ ಪರಮ ಬಂಧುವಾದ ವ್ರಜವಿಹಾರಿ ಲಾಲಮಹಾಶಯ ರನ್ನು ಜತೆಯಲ್ಲಿ ಕರೆದುಕೊಂಡು ಬಂದಿರುವೆನು. ಇವರು ಬಹಳ ದೊಡ್ಡ ಮನುಷ್ಯರು.

ನಾಗೇಂದ್ರ—ಬಹಳ ಸಂತೋಷ.

ಚೌಧುರಿ—ಜಹಗೀರುದಾರರು ಬಂದಿರುವರೇನು?

ನಾಗೇಂದ್ರ—ಇಲ್ಲ, ಅವರಿನ್ನೂ ಬಂದಿಲ್ಲ.

ಚೌಧುರಿ—ಕರೆದವರಾರಾದರೂ ಬಂದಿರುವರೇನು?

ನಾಗೇಂದ್ರ—ಇಲ್ಲ, ನೀವೇ ಎಲ್ಲರಿಗಿಂತಲೂ ಮೊದಲು ಬಂದವರು. ಅನೇಕರು ಬಹುದೂರದಿಂದ ಬರಬೇಕಾದುದರಿಂದ, ಕೊಂಚ ಸಾವಕಾಶವಾಗ ಬಹುದು. ಕೆಲವರು ಕಾರ್ಯಾಂತರದಲ್ಲಿ ವ್ಯಗ್ರರಾಗಿ ಈ ಸಮಾರಂಭಕ್ಕೆ ಬಾರ ದಿರುವುದೂ ಉಂಟು. ತಾವು ಮನೆಯೊಳಗೆ ಬಿಜಯಮಾಡಿಸಬೇಕು.

ಚೌಧುರಿ—ನಾಗೇಂದ್ರ ಮಹಾಶಯ, ಈ ದಿನ ಇಲ್ಲಿಗೆ ಎಷ್ಟು ಜನರು ಬರಬಹುದು?

ನಾಗೇಂದ್ರ—ಈ ಸಮಾರಂಭಕ್ಕೆ ನಾವು ವಿಶೇಷಜನರನ್ನು ಕರೆಯಲಿಲ್ಲ. ಆದುದರಿಂದ ಬಹು ಜನರು ಬರುವ ಸಂಭವವಿಲ್ಲ.

ಚೌಧುರಿ—ನೀವು ಹೀಗೆ ಮಾಡಲು ಕಾರಣವೇನು ?

ನಾಗೇಂದ್ರ—ಜಹಗೀರುದಾರರ ವಕೀಲರು ಇಲ್ಲಿಗೆ ಬಂದಿರುವರು. ಅವರು ಆವ ರೀತಿಯಾಗಿ ಅಪ್ಪಣೆಮಾಡುವರೋ ನಾನು ಅದರಂತೆಯೇ ನಡೆದು ಕೊಳ್ಳುವೆನು.

ಚೌಧುರಿ—ಜಹಗೀರುದಾರರಾರು ?

ನಾಗೇಂದ್ರ—ನನಗೆ ಅವರ ಜಾತಿ ಕುಲಗೋತ್ರ ಸೂತ್ರ ಗಳೊಂದೂ ಗೊತ್ತಿಲ್ಲ. ನಾನು ಆವರ ಹೆಸರನ್ನೂ ಕೇಳಿಲ್ಲ.

ಚೌಧುರಿ—ನಾವು ಆವ ಜಹಗೀರುದಾರರ ನೂತನ ಗೃಹಪ್ರವೇಶ ಮಹೋತ್ಸವಕ್ಕೆ ಕರೆಯಲ್ಪಟ್ಟಿರುವೆವೋ, ಆ ಜಹಗೀರು ದಾರರಾರೆಂಬುದನ್ನೇ ಅರಿಯದಿರುವುದು ಆಶ್ಚರ್ಯಕರವಾಗಿರುವುದು.

ನಾಗೇಂದ್ರ—ತಮಗೆ ತಿಳಿಯದಿರುವುದು ಅದೊಂದು ಆಶ್ಚರ್ಯವಲ್ಲ. ಅವರ ಕಾರ್ಯ ಪ್ರತಿನಿಧಿಗಳಾದ ನಮಗೇ ಅವರಾರೆಂಬುದು ಗೊತ್ತಾಗದಿರುವುದು ಪರಮಾಶ್ಚರ್ಯವೇ ಸರಿ. ನಾವು ಏನೇನೋ ಪ್ರಯತ್ನಮಾಡಿದರೂ ಗೊತ್ತಾಗಲಿಲ್ಲ.

ಚೌಧುರಿ—ಈ ರೀತಿಯಾಗಿರುವುದು ನೋಡಿದರೆ ನಮಗೆ ಸಂದೇಹವೂ ಭಯವೂ ಉಂಟಾಗುತ್ತಿರುವುವು. ಅವರ ವಕೀಲರು ಬಂದಿರುವುದಾಗಿ ತಿಳಿಸೋಣ ವಾಯಿತಷ್ಟೇ ? ಈಗ ಅವರೆಲ್ಲಿರುವರು ?

ನಾಗೇಂದ್ರ—ಆವರು ಒಂದು ಗೋಪ್ಯವಾದ ಕೋಣೆಯಲ್ಲಿ ಕುಳಿತು ಕೊಂಡು ಏನೇನೋ ಕಾಗದ ಪತ್ರಗಳನ್ನು ಹರಡಿಕೊಂಡಿರುವರು. ಈಗ ಆರೂ ಅವರನ್ನು ನೋಡಕೂಡದೆಂದು ಅಪ್ಪಣೆಯಾಗಿರುವುದು.

ಚೌಧುರಿ—(ಅಪ್ರತಿಭನಾಗಿ) ಇದೇನು ಮಹಾಶಯ ? ಎಲ್ಲವೂ ಪರಿ ಹಾಸರೂಪವಾಗಿಯೇ ತೋರುವುದು. ವಕೀಲರು ಬಂದವರಿಗೆ ಯೋಗ್ಯತಾನು ಗುಣವಾದ ಉಪಚಾರಮಾಡಬೇಕಾದುದು ಯುಕ್ತವಾಗಿರುವುದು ; ಹೀಗಿರುವಲ್ಲಿ ಅವರೂ ತಲೆಯನ್ನು ತಪ್ಪಿಸಿಕೊಂಡು ತಮ್ಮ ಕೆಲಸದಲ್ಲಿರುವುದಾದರೆ, ನಾವುಗಳು ಇಲ್ಲಿಗೆ ಬಂದೇನ ಮಾಡಬೇಕೋ ತಿಳಿಯದು.

ನಾಗೇಂದ್ರ—(ವಿನಯದಿಂದ) ಚೌಧುರಿ ಮಹಾಶಯ, ತಮ್ಮಂತಹ ವರನ್ನು ಬರಮಾಡಿಕೊಂಡು ಅವಮಾನಪಡಿಸಬೇಕೆಂದು ಅವರು ಎಂದೆಂದಿಗೂ ಭಾವಿಸಿಲ್ಲ. ಯಜಮಾನರು ಬರುವುದರೊಳಗಾಗಿ ಅನೇಕ ಕಾರ್ಯಕಲಾಪಗಳು

ಸಾಂಗವಾಗಿ ನೆರವೇರಬೇಕಾಗಿರುವುದರಿಂದ, ಅವರು ಆ ಕೆಲಸದಲ್ಲಿ ವ್ಯೈಮರೆತಿರುವರು. ಯಜಮಾನರು ಇಷ್ಟು ಹೊತ್ತಿಗೆ ಬಂದಿರಬೇಕಾಗಿದ್ದಿತು. ಆವ ಕಾರಣದಿಂದಲೋ ಸಾವಕಾಶವಾಗಿರುವುದು. ಇದಕ್ಕಾಗಿ ತಾವು ಬೇರೆಯ ವಿಧವಾಗಿ ಚಿಂತಿಸಕೆಲಸವಿಲ್ಲ.

ಸರಳಸ್ವಭಾವವುಳ್ಳ ಚೌಧುರಿ ಮಹಾಶಯನು ನಾಗೇಂದ್ರನು ಹೇಳಿದುದೆಲ್ಲವನ್ನೂ ನಿಜವೆಂದು ತಿಳಿದವನಾಗಿ ಮುಂದೆ ಆವ ಮಾತನ್ನೂ ಆಡದೆ ನಾಗೇಂದ್ರನ ಹಿಂದೆ ಹಿಂದೆಯೇ ಹೊರಟನು ; ಅವನ ಹಿಂದೆ ಸ್ವರ್ಣಕುಮಾರಿಯೂ, ಆಕೆಯ ಹಿಂದೆ ವ್ರಜವಿಹಾರಿಲಾಲನೂ ಹೊರಟರು.

ಪರಿಚಾರಕರಿಬ್ಬರಲ್ಲಿ ಒಬ್ಬನು ಮತ್ತೊಬ್ಬನನ್ನು ಕುರಿತು, "ಅಯ್ಯ! ಈತನು ಗೋವಿಂದ ಚ್ರಂದ ಚೌಧುರಿಯಲ್ಲವೇ ? ಈತನನ್ನು ನೋಡಿದರೆ ಹುಚ್ಚನಾಗಿ ಕಾಣುವನು. ಈತನು ತನ್ನ ಜತೆಯಲ್ಲಿ ಅಸಭ್ಯನಾದ ಕೊಳಕು ಮಾರವಾಡಿಯೊಬ್ಬನನ್ನು ಕರೆದುಕೊಂಡು ಬರಬಹುದೇ ?" ಎಂದು ಮೆಲ್ಲ ಮೆಲ್ಲಗೆ ಹೇಳಿದುದನ್ನು ಲಾಲಮಹಾಶಯನು ಕೇಳಿ ಒಂದು ತಡವೆ ಪರಿಚಾರಕರಿಬ್ಬರನ್ನೂ ದೃಷ್ಟಿಸಿ ನೋಡಿ ಸುಮ್ಮನಾಗಿ ಬಿಟ್ಟನು.

ಪಾಠಕ ಮಹಾಶಯ ! ನೀವು ಕೆಲವು ದಿನಗಳ ಹಿಂದೆ ದೇವ ದುರ್ಗವನ್ನು ನೋಡುವುದಕ್ಕೆ ಹೋಗಿದ್ದಿರಿ. ಈಗಳೂ ಅದನ್ನು ನೋಡುವುದಕ್ಕೆ ಬಂದಿರುವಿರಿ. ಆಗಣ ಸ್ಥಿತಿಗೂ ಈಗಣ ಸ್ಥಿತಿಗೂ ವ್ಯತ್ಯಾಸವನ್ನಾದರೂ ನೋಡಿದಿರಾ ? ಈಗ ಎಲ್ಲೆಲ್ಲಿ ನೋಡಿದರೂ ಸೊಪ್ಪಿನ ತೋರಣಗಳೂ ಅಲ್ಲಲ್ಲಿ ಹೂ ಗೊಂಚಲಗಳೂ ನೋಟಕರಿಗೆ ಬ್ರಹ್ಮಾನಂದವನ್ನುಂಟುಮಾಡುತ್ತಿರುವುವು. ಮನೆಯ ವಿಶಾಲವಾದ ಹಜಾರದಲ್ಲಿ ಬಲು ಬೆಲೆ ಬಾಳುವ ರತ್ನಗಂಬಳಿಗಳು ಹಾಸಲ್ಪಟ್ಟಿರುವುವು. ಅದರ ಮೇಲೆ ಕಾಲಿಟ್ಟು ನಡೆವುದಕ್ಕೆ ಆರಿಗೂ ಮನವೊಡಂಬಡುತ್ತಿರಲಿಲ್ಲ. ಗೋಡೆಗಳಲ್ಲೆಲ್ಲಾ ಚಿತ್ರಪಟಗಳು ಕಿಕ್ಕಿರಿದು ಹೋಗಿದ್ದುವು. ಮನೆಯ ಶೋಭಾರಾಶಿಯನ್ನು ನೋಡಿ ಆನಂದಿಸಬೇಕೆಂಬ ಆಸೆಯಿಂದ ನಕ್ಷತ್ರ ವಿಶೇಷಗಳು ಭೂಲೋಕಕ್ಕೆ ಇಳಿದು ಬಂದಿರುವುವೋ ಎಂಬಂತೆ ದೀಪಗಳು ಎಲ್ಲೆಲ್ಲಿಯೂ ಕಂಗೊಳಿಸುತಿದ್ದುವು. ವಾದ್ಯ ವಿಶೇಷಗಳ ಮಧುರವಾದ ನಾದಗಳು ನಭೋಮಂಡಲವನ್ನಡರುತಿದ್ದುವು. ಮಂದಮಾರುತನು ಪುಷ್ಪಸೌರಭವನ್ನು ಬೀರುತ್ತ, ಗೃಹದಾಸನಂತೆ ಆಯಾಸಪಟ್ಟು ಬಂದವರನ್ನು ಬಗೆ ಬಗೆಯಾಗಿ ಸೇವಿಸಲಾರಂಭಿಸಿದನು. ಹೇಳುವುದಕ್ಕೆ ಬಂದುದೇನೆಂದರೆ—ಆ ಮನೆಯಲ್ಲಿ ಎಲ್ಲಿ ನೋಡಿದರೂ ಆವ ಪದಾರ್ಥಕ್ಕೂ ಅಭಾವವೆಂಬುದೇ ಇರಲಿಲ್ಲ. ಆರು ಆವ ಪದಾರ್ಥವನ್ನು ಕೇಳಿದರೂ ಅದು ಆಗಳೇ ಸಿದ್ಧವಾಗಿರುತಿದ್ದಿತು. ಸ್ವರ್ಗ

ದಲ್ಲಿಯೂ ಆನಂದ ಪಡುವುದಕ್ಕೆ ಸಾವಕಾಶವಾಗಬಹುದು ; ದೇವ ದುರ್ಗದಲ್ಲಿ ಮಟ್ಟಿಗೆ ಸಾವಕಾಶದ ಹೆಸರೇ ಇರಲಿಲ್ಲ.

ಇಂತಹ ರಮಣೀಯವಾದ ಮನೆಯನ್ನು ಚೌಧುರಿಯು ಪ್ರವೇಶಮಾಡಿದ ಕೂಡಲೆ ಸುತ್ತಲೂ ನೋಡಿ ಬೆರಗಾಗಿ ನಿಂತನು. ಸ್ವರ್ಣಕುಮಾರಿಯು ಲಾಲ ಮಹಾಶಯನನ್ನು ಕುರಿತು, "ತಾತ! ಈ ಮನೆಯು ಎಷ್ಟು ಸುಂದರವಾಗಿರುವುದು?" ಎಂದು ಹೇಳಿದಳು. ಲಾಲ ಮಹಾಶಯನು ಮುಗುಳು ನಗೆಯನ್ನು ನಕ್ಕು "ಮಗು! ಮನೆಯು ನಿನಗೆ ಒಪ್ಪಿತಲ್ಲವೇ?" ಎಂದನು. ಈ ಮಾತು ಮುಗಿದ ಕೂಡಲೆ ನಾಗೇಂದ್ರನು ಈ ಮೂವರನ್ನೂ ಒಳಗೆ ಕರೆದುಕೊಂಡು ಹೋಗಿ ಹಜಾರದ ಮೇಲುಗಡೆಯಲ್ಲಿ ಕುಳ್ಳಿರಿಸಿ ತನ್ನ ಕೆಲಸದ ಮೇಲೆ ಹೊರಟು ಹೋದನು.

ಚೌಧುರಿಮಹಾಶಯನು ಬಲುಹೊತ್ತು ಸುಮ್ಮನೇ ಕುಳಿತಿದ್ದು ಜಹಗೀರುದಾರರು ಇನ್ನೂ ಬರಲಿಲ್ಲವಲ್ಲಾ ಎಂದುಕೊಂಡು ಕಿಟಕಿಯಿಂದ ಗಂಗಾನದಿಯ ಕಡೆ ನೋಡತೊಡಗಿದನು. ಕೊಂಚಹೊತ್ತಿನ ಮೇಲೆ ಒಂದು ದೋಣಿಯು ಬರುತ್ತಿರುವಂತೆ ಕಾಣಿಸಿತು. ಚೌಧುರಿಯು ರಪ್ಪೆಹಾಕದೇ ನೋಡುತ್ತಾ ಇದರಲ್ಲಿ ಜಹಗೀರುದಾರರು ಕುಳಿತುಕೊಂಡು ಬರುತ್ತಿರಬಹುದು ಎಂದು ಹೇಳಿಕೊಂಡನು.

ಸ್ವರ್ಣಕುಮಾರಿಯೂ ಕಿಟಕಿಯ ಬಳಿ ನಿಂತುಕೊಂಡು ದೋಣಿಯನ್ನು ನೋಡುತ್ತಿದ್ದವಳು, "ನಮ್ಮಂತೆಯೇ ಆಹೂತರಾದವರಾರೋ ಬರುತ್ತಿರಬೇಕು," ಎಂದು ಹೇಳಿದಳು.

ಚೌಧುರಿಯು ದೃಷ್ಟಿಸಿ ನೋಡಿ, "ಇದು ಸಾಮಾನ್ಯವಾದ ದೋಣಿಯಾಗಿರುವುದು. ಜಹಗೀರುದಾರರು ಇಂತಹ ದೋಣಿಯಲ್ಲಿ ಎಂದಿಗೂ ಕುಳಿತುಕೊಂಡು ಬರಲಾರರು," ಎಂದು ಹೇಳುತ್ತಿರುವಲ್ಲಿ ದೋಣಿಯು ಘಟ್ಟದಲ್ಲಿ ಬಂದು ನಿಂತಿತು. ಒಬ್ಬ ವೃದ್ಧನೂ ಇಬ್ಬರು ಅಲ್ಪವಯಸ್ಕರಾದ ಯುವತಿಯರೂ ದೋಣಿಯಿಂದಿಳಿದುಬಂದರು. ಈ ಸಮಯದಲ್ಲಿ ಸ್ವರ್ಣಕುಮಾರಿಯು ತನ್ನ ಸ್ಥಳಕ್ಕೆ ಬಂದು ನೋಡುವಲ್ಲಿ ಅಲ್ಲಿ ಲಾಲ ಮಹಾಶಯನು ಇರಲಿಲ್ಲ. "ಆತನು ಎಲ್ಲಿಗೆ ಹೋಗಿರಬಹುದು?" ಎಂದು ಆಕೆಯು ಚಿಂತಿಸುತ್ತಿರುವಲ್ಲಿ ಒಬ್ಬ ಸೇವಕನು ಬಂದು "ವೀರಚಂದ್ರ ಘೋಷ ಮಹಾಶಯರು ಬಂದರು," ಎಂದು ಹೇಳಿ ಹೊರಟು ಹೋದನು.

"ಮಧುಸೂದನನ ಸೋದರತ್ತೆಯ ಗಂಡ," ಎಂದು ಚೌಧುರಿಯು ಸ್ವರ್ಣಕುಮಾರಿಗೆ ತಿಳಿಯ ಹೇಳಿದನು.

ವೀರಚಂದ್ರಘೋಷನು ಮನೆಯೊಳಗೆ ಪ್ರವೇಶಮಾಡಿದನು. ಆತನೊಡನೆ ಇಬ್ಬರು ಹುಡುಗಿಯರೂ ಬಂದಿದ್ದರು. ಅವರು ಸ್ವರ್ಣಕುಮಾರಿಯಂತೆ ಅವಿವಾಹಿತರಾಗಿರಲಿಲ್ಲ. ಅವರಿಬ್ಬರೂ ಪೂರ್ಣ ಯೌವನವತಿಯರಾಗಿದ್ದುದರಿಂದ ವೀರಚಂದ್ರನು ಅವರಿಬ್ಬರನ್ನೂ ಅಂತಃಪುರಕ್ಕೆ ಕಳುಹಿಸಿ ತಾನೊಬ್ಬನೇ ಗಂಡಸರಿದ್ದ ಹಜಾರಕ್ಕೆ ಬಂದನು.

ಚೌಧುರಿ ಮಹಾಶಯನು ಮೊದಲು ವೀರಚಂದ್ರನನ್ನು ಆವಾಗಲೂ ನೋಡಿರಲಿಲ್ಲ. ಆತನು ನೋಡಿದುದು ಇದೇ ಮೊದಲು. ವೀರಚಂದ್ರನು ಅರವತ್ತು ವರ್ಷದ ಮುದುಕನಾಗಿದ್ದರೂ, ದೀರ್ಘಾಕಾರನಾದ ಸುಂದರಪುರುಷನಾಗಿದ್ದನು. ಆತನು ಅಮೂಲ್ಯವಾದ ವಸ್ತ್ರಾಭರಣಗಳನ್ನು ಧರಿಸಿ ನೋಟಕರಿಗೆ ಐಶ್ವರ್ಯವಂತನೆಂಬ ಭಾವನೆಯನ್ನುಂಟುಮಾಡಿಕೊಡುತ್ತಿದ್ದನು.

ಅಷ್ಟು ಹೊತ್ತಿಗೆ ಸೇವಕನು ಬಂದು, "ಜಯಚಂದ್ರವಸು ಮಹಾತಯರು ಬಂದರು," ಎಂದು ಹೇಳಿ ಹೊರಟುಹೋದನು.

ಜಯಚಂದ್ರನೂ ವೀರಚಂದ್ರನಂತೆಯೇ ತನ್ನ ಇಬ್ಬರು ಹೆಣ್ಣು ಮಕ್ಕಳನ್ನೂ ಅಂತಃಪುರಕ್ಕೆ ಕಳುಹಿಸಿ ಕೊಟ್ಟು ತಾನೊಬ್ಬನೇ ವೀರಚಂದ್ರನಿದ್ದಲ್ಲಿಗೆ ಬಂದು ಸೇರಿದನು.

"ಈತನು ಮಧುಸೂದನನ ಮತ್ತೊಬ್ಬ ಸೋದರತ್ತೆಯ ಗಂಡ," ಎಂದು ಚೌಧುರಿಯು ಸ್ವರ್ಣಕುಮಾರಿಗೆ ಪಿಸುಮಾತಿನಲ್ಲಿ ತಿಳಿಸಿದನು.

ಚೌಧುರಿ ಮಹಾಶಯನು ಜಯಚಂದ್ರನನ್ನೂ ಕಂಡರಿಯನು. ಜಯಚಂದ್ರನು ವೀರಚಂದ್ರನಿಗಿಂತಲೂ ವಯಸ್ಸಿನಲ್ಲಿ ಚಿಕ್ಕವನು. ಆತನ ದೇಹವೂ ಕೃಶವಾದುದು ; ರೂಪವೂ ಸಾಮಾನ್ಯವಾದುದು. ಆತನು ವೀರಚಂದ್ರನಂತೆಯೇ ಸಿಂಗರಿಸಿಕೊಂಡುಬಂದಿದ್ದನು. ಅವನ ಹತ್ತು ಬೆರಳುಗಳಲ್ಲಿಯೂ ಹತ್ತು ಬಗೆಯ ರತ್ನಖಚಿತವಾದ ಉಂಗುರಗಳಿದ್ದುವು.

ಚೌಧುರಿ ಮಹಾಶಯನು ಇವರಿಬ್ಬರೊಡನೆಯೂ ಮಾತನಾಡಬೇಕೆಂದು ಬಯಸಿದವನಾಗಿ, ಅವರಿಬ್ಬರನ್ನೂ ಕುರಿತು, "ವಸುಘೋಷ ಮಹಾಶಯರೆ! ನೀವುಗಳೂ ನಿಮ್ಮ ಮಕ್ಕಳೂ ಎಲ್ಲರೂ ಕ್ಷೇಮವಷ್ಟೆ ?" ಎಂದು ಕುಶಲಪ್ರಶ್ನೆ ಮಾಡಿದನು.

ಅವರಿಬ್ಬರೂ ಈ ಪ್ರಶ್ನೆಗೆ ಉತ್ತರ ಕೊಡಲಿಲ್ಲ. ಬಳಿಕ ವೀರಚಂದ್ರನು, "ನೀವಾರು ? ನಿಮ್ಮ ಹೆಸರೇನು ?" ಎಂದು ಕೇಳಿದನು.

ಚೌಧುರಿ—ಗೋವಿಂದ ಚಂದ್ರ ಚೌಧುರಿ ಎಂದು ನನ್ನ ಹೆಸರು.

ವೀರ—ವಾಸ ?

ಚೌಧುರಿ—ರಾಯಪೇಟೆ.

ಈ ಮಾತನ್ನು ಕೇಳಿದ ಕೂಡಲೆ ಜಯಚಂದ್ರ ವೀರಚಂದ್ರರಿಬ್ಬರೂ ಒಬ್ಬರನ್ನೊಬ್ಬರು ನೋಡಿಕೊಂಡರು. ಬಳಿಕ ಜಯಚಂದ್ರನು, "ನೀವು ಚೌಧುರಿ ಮಹಾಶಯರಲ್ಲವೇ ?" ಎಂದನು.

ಚೌಧುರಿ—ಅಹುದು, ಎಲ್ಲರೂ ನನ್ನನ್ನು ಹಾಗೆಯೇ ಕರೆವರು.

ವೀರಚಂದ್ರ—ಓಹೋ, ಗೊತ್ತಾಯಿತು. ನೀವೇ !

ಹೀಗೆಂದ ಬಳಿಕ ಚೌಧುರಿಯು ತನ್ನ ಮಗಳನ್ನು ತೋರಿಸಿ "ಭಗವಂತನ ಕೃಪೆಯಿಂದ ನನಗೆ ಈಕೆಯೊಬ್ಬಳೇ ಮಗಳು," ಎಂದನು.

ವೀರಚಂದ್ರನು ದೊಡ್ಡ ಮನುಷ್ಯನ ಹಾಗೆ ಸ್ವಾಭಿಮಾನ ಸೂಚಕವಾದ ಭಾವವನ್ನು ತೋರ್ಪಡಿಸುತ್ತಾ, "ಬಹು ಸಂತೋಷವಾಯ್ತು. ನಿಮ್ಮ ಹುಡುಗಿಗೆ ಎಲ್ಲಿಗೆ ಕೊಟ್ಟು ವಿವಾಹವಾಗಿರುವುದು ? ಎಂದು ಕೇಳಿದನು.

ಚೌಧುರಿಯು "ನಮ್ಮ ಮಗುವಿಗೆ ಇನ್ನೂ ವಿವಾಹವಾಗಿಲ್ಲ, ಎಂದು ಹೇಳಿ ಮಗಳನ್ನು ಕರೆದು, "ಮಗು, ಈ ಮಹಾಶಯರಿಬ್ಬರಿಗೂ ನಮಸ್ಕಾರ ಮಾಡು," ಎಂದನು.

ಸ್ವರ್ಣಕುಮಾರಿಯು ಇಬ್ಬರಿಗೂ ಪ್ರಣಾಮವಂ ಗೆಯ್ದಳು. ವೀರಚಂದ್ರನು ಹುಡುಗಿಯ ಬೆನ್ನ ಸವರಿದನು. ಜಯಚಂದ್ರನು ಅನುರೂಪನಾದ ಗಂಡನನ್ನು ಪಡೆಯೆಂದು ಆಶೀರ್ವಾದ ಮಾಡಿದನು.

ಅಷ್ಟು ಹೊತ್ತಿಗೆ ಲಾಲಮಹಾಶಯನು ಹೊರಗೆ ಎಲ್ಲಿಗೋ ಹೋಗಿದ್ದವನು ಬಂದು ದೂರದಲ್ಲಿ ನಿಂತಿದ್ದನು. ಈತನನ್ನು ಆರೂ ನೋಡಲಿಲ್ಲ. ಕೊಂಚ ಹೊತ್ತಿನ ಮೇಲೆ ಚೌಧುರಿಯು ನೋಡಿ ವ್ರಜವಿಹಾರಿ ಲಾಲನನ್ನು ಕರೆದುಕೊಂಡು ಬಂದು ವೀರಚಂದ್ರ ಜಯಚಂದ್ರರಿಬ್ಬರಿಗೂ ಆತನ ಪರಿಚಯವನ್ನುಂಟು ಮಾಡಿದ ಬಳಿಕ ತನ್ನ ನಿರ್ದಿಷ್ಟವಾದ ಸ್ಥಲದಲ್ಲಿ ಕುಳಿತುಕೊಂಡನು. ಜಯಚಂದ್ರನು ಆತನನ್ನು ನೋಡಿ ಮುಖವನ್ನು ಸೊಟ್ಟುಮಾಡಿಕೊಂಡು ದೂರ ಸರಿದು ಕುಳಿತನು; ವೀರಚಂದ್ರನಾದರೋ ಏನೋ ನೆಪಮಾಡಿಕೊಂಡು ಕಿಟಕಿಯ ಬಳಿ ಹೋಗಿ ನಿಂತನು.

ಲಾಲಮಹಾಶಯನು ಅವರವರ ಮನೋಭಾವವನ್ನರಿತವನಾಗಿ ಎಲ್ಲರನ್ನೂ ಕುರಿತು ಇಂತೆಂದನು :—

"ಚೌಧುರಿ ಮಹಾಶಯರು ತಮಗೆ ವ್ರಜವಿಹಾರಿ ಲಾಲನೆಂಬ ಹೆಸರಿನಿಂದ ನನ್ನ ಪರಿಚಯವನ್ನುಂಟುಮಾಡಿ ಕೊಟ್ಟರು. ನಾನು ಕಾರಣಾಂತರದಿಂದ ಅವರ ಮನೆಯಲ್ಲಿ ವ್ರಜವಿಹಾರಿಲಾಲನೆಂಬ ಹೆಸರಿನ ವಿದೇಶಿಯಾಗಿದ್ದೆನು. ಅದು ನನ್ನ ನೈಜವಾದ ಹೆಸರಲ್ಲ. ನಾನು ಕಮಲಾಕಾಂತರಾಯನು. ತಾವೆಲ್ಲರೂ ನನ್ನನ್ನು ನೋಡುವುದಕ್ಕಾಗಿಯೇ ಇಲ್ಲಿಗೆ ಬಂದಿರುವಿರಿ. ನಾನೇ ನಿಮ್ಮೆಲ್ಲರಿಗೂ ಆಹ್ವಾನ ಪತ್ರಿಕೆಯನ್ನು ಕಳುಸಿ ನಿಮ್ಮನ್ನು ಇಲ್ಲಿಗೆ ಬರಮಾಡಿಕೊಂಡಿರುವೆನು. ನೀವುಗಳು ನನಗೆ ಅತಿಥಿಗಳಾಗಿ ಬಂದಿದ್ದರೂ, ಕೇವಲವಾಗಿ ಆತ್ಮೀಯರಾಗಿಯೇ ಇರುವಿರಿ."

ಕ್ಷಣಮಾತ್ರದಲ್ಲಿಯೇ ಕಮಲಾಕಾಂತರಾಯನಾಗಿ ವಿಪರಿಣಮಿಸಿದ ವ್ರಜ ವಿಹಾರಿಲಾಲನು ಈ ರೀತಿಯಾಗಿ ನುಡಿದ ಮಾತುಗಳನ್ನು ಎಲ್ಲರೂ ಕೇಳಿ ಮೂಗಿನ ಮೇಲೆ ಬೆರಳನ್ನಿಟ್ಟುಕೊಂಡು ಬೆರಗಾಗಿ ಕುಳಿತರು.

---

## ಹತ್ತನೆಯ ವಿಲಾಸ

### ಕಿಂಚಿತ್ಪೂರ್ವ ಕಥಾನುವಾದ

ಕಮಲಾಕಾಂತನು ಇಂದಿರಾಕಾಂತನ ದೊಡ್ಡ ಮಗನು. ಈತನು ಕುಲೀನ ಕಾಯಸ್ಥವಂಶದ ಮಿತ್ರಮನೆತನದವನಾಗಿದ್ದನು. ಈತನಿಗೆ ಸರಕಾರ ಮನೆತನದ ಮಾಧವಚಂದ್ರನೆಂಬುವನ ಹಿರಿಯ ಮಗಳನ್ನು ಕೊಟ್ಟು ಮದುವೆಯಾಗಿದ್ದಿತು. ಆ ಹುಡುಗಿಯು ಬಾಲ್ಯದಲ್ಲಿಯೇ ಮರಣವನ್ನಯ್ದುದೂ, ಕಮಲಾಕಾಂತನು ಹೆಂಡಿತಿಯನ್ನು ಕಳೆದುಕೊಂಡು ವ್ಯಸನದಿಂದ ಕಣ್ಮರೆಯಾದುದೂ ಈ ಗ್ರಂಥದ ಎರಡನೆಯ ವಿಲಾಸದಲ್ಲಿ ಸೂಚಿಸಲ್ಪಟ್ಟಿರುವುದು ನಮ್ಮ ಪ್ರಿಯಪಾಠಕ ಮಹಾಶಯರಿಗೆ ಇನ್ನೂ ಜ್ಞಾಪಕದಲ್ಲಿರಬಹುದು. ಇದನ್ನು ಮತ್ತೆಮತ್ತೆ ತಿಳಿಸಬೇಕಾದ ಆವಶ್ಯಕತೆಯೇನೂ ಇರಲಾರದು.

ಕಮಲಾಕಾಂತರಾಯನಿಗೆ ಹೆಂಡಿತಿಯು ಸತ್ತಾಗ ಇಪ್ಪತ್ತುನಾಲ್ಕು ವರ್ಷ ವಯಸ್ಸಿಗಿಂತಲೂ ಹೆಚ್ಚಾಗಿರಲಿಲ್ಲ. ಆತನಿಗೆ ಹೆಂಡಿತಿಯಲ್ಲಿ ಬಹಳ ಪ್ರೇಮವಿದ್ದಿತು. ಆಕೆಯು ಸತ್ತ ಸುದ್ದಿಯನ್ನು ಕೇಳಿ ಎದೆಯೊಡೆದವನಾಗಿ ದೂರದೇಶಕ್ಕೆ ಹೊರಟುಹೋದನು. ಆಗಣ ಕಾಲದಲ್ಲಿ ದೇಶದಿಂದ ದೇಶಕ್ಕೆ ಪಯಣಮಾಡುವುದೆಂದರೆ, ಈಗಣ ಕಾಲದಷ್ಟು ಸುಲಭಸಾಧ್ಯವಾದುದಲ್ಲ. ಆದುದರಿಂದ ಕಮಲಾಕಾಂತನು ಪಾದಚಾರಿಯಾಗಿ ಕಾಶೀಧಾಮದ ವರೆಗೂ ಹೋದನು. ಅಲ್ಲಿಗೆ

ಹೋದರೂ ಅವನ ಮನಸ್ಸಿಗೆ ಶಾಂತಿಯೆಂಬುದೇ ಉಂಟಾಗಲಿಲ್ಲ. ತರುವಾಯ ನಾನಾ ದೇಶಗಳನ್ನೂ ನಾನಾ ತೀರ್ಥಗಳನ್ನೂ ನೋಡಿಕೊಂಡು ಬರುವುದಕ್ಕಾಗಿ ಸಂಚಾರಮಾಡತೊಡಗಿದನು. ಆಗ ಕಮಲಾಕಾಂತನಿಗೆ ಸಂಸಾರದಲ್ಲಿ ಕೇವಲವಾದ ಜಿಹಾಸೆ; ಜನ್ಮಭೂಮಿಯ ವಿಷಯದಲ್ಲಿ ವಿಶೇಷವಾದ ನಿರಭಿಮಾನ; ಸ್ವಬಂಧುಬಾಂಧವರಲ್ಲಂತೂ ಹೇಳಲಸದಳವಾದ ಅನುರಾಗರಾಹಿತ್ಯ. ಆದುದರಿಂದಲೇ ಸ್ವಜನರ ಯೋಗಕ್ಷೇಮವನ್ನು ತಿಳಿಯುವುದಕ್ಕೂ ತನ್ನ ಯೋಗಕ್ಷೇಮವನ್ನು ಅವರಿಗೆ ತಿಳಿಸುವುದಕ್ಕೂ ಕಮಲಾಕಾಂತನಿಗೆ ಮನಸ್ಸೇ ಬರಲಿಲ್ಲ. ಅವನಿಗೆ ಆಗಣ ಕಾಲದಲ್ಲಿ ಬೇಕಾಗಿದ್ದುದು ಕೇವಲವಾದ ಧರ್ಮಾರ್ಜನೆ. ಅದುಕಾರಣ ಅವನು ತೀರ್ಥಯಾತ್ರೆಮಾಡುವುದಾಗಿ ಸಂಕಲ್ಪಿಸಿ ಹೊರಟನು. ಈ ರೀತಿಯಲ್ಲಿ ಹನ್ನೆರಡು ವರ್ಷಗಳು ಕಳೆದುಹೋದುವು; ಆದರೂ ಇಷ್ಟಸಾಧನವಾಗಲಿಲ್ಲ. ಹೇಗಾದರೂ ಆಗಲಿ, ಅವನ ಹೃದಯದಲ್ಲಿ ಶೋಕವು ದೂರ ತೊಲಗಿ ಅದರ ಸ್ಥಾನದಲ್ಲಿ ಶಾಂತಿಯೆಂಬುದು ಕ್ರಮಕ್ರಮವಾಗಿ ಬೇರೂರುತ ಬಂದಿತು. ಮನಸ್ಸಿಗೆ ಶಾಂತಿಯುಂಟಾದ ಮೇಲೆ ಸಂಸಾರದ ಮಾಯಾಮೋಹಗಳು ಮನುಷ್ಯನ ಗೋಜಿಗೇ ಬರುವುದಿಲ್ಲವೆಂಬುದು ಅನುಭವ ಸಿದ್ಧವಾದ ವಿಷಯವಾಗಿದೆ. ಶಾಂತಿಯ ಬಲದಿಂದ ಮಧ್ಯವಯಸ್ಕನಾದ ಕಮಲಾಕಾಂತನು ಸಂಸಾರಸಮುದ್ರದ ಸುಖದುಃಖಮಯವಾದ ಉತ್ತುಂಗ ತರಂಗಗಳಲ್ಲಿ ಸಿಕ್ಕಿಬಿದ್ದು ತೇಲಿಮುಳುಗುವುದಕ್ಕೆ ಸಮ್ಮತಿಸದವನಾಗಿ ಬಲು ಜಾಗರೂಕತೆಯಿಂದಿರುತಿದ್ದನು.

ಇಂತಹ ಸಮಯದಲ್ಲಿ ಒಂದಾನೊಂದು ದಿನ ಒಬ್ಬ ಮಹಾತ್ಮನು ಹೇಳಿದುದನ್ನು ಕೇಳಿದನು:—"ಆಶ್ರಮ ಚತುಷ್ಟಯದಲ್ಲಿ ಗೃಹಸ್ಥಾಶ್ರಮವೇ ದೊಡ್ಡದು. ಗೃಹಸ್ಥಾಶ್ರಮದಲ್ಲಿ ಧರ್ಮವನ್ನು ಗಳಿಸಿಟ್ಟುಕೊಳ್ಳುವುದಕ್ಕೆ ಅನುಕೂಲತೆಯಿರುವಷ್ಟು ಮತ್ತಾವ ಆಶ್ರಮದಲ್ಲಿಯೂ ಇರಲಾರದು. ಹಿಂದಣ ಕಾಲದಲ್ಲಿ ಧರ್ಮವೀರರೆಂದು ಹೊಗಳಿಸಿಕೊಂಡಿರುವವರೆಲ್ಲರೂ, ಸಂಸಾರದ ಮಾಯಾಪಾಶಕ್ಕೆ ಸಿಕ್ಕಿ ಪರಿವರ್ತನಶೀಲವಾದ ಸುಖದುಃಖಾನುಭವವೆಂಬ ಒರೆಗಲ್ಲಿನ ಪ್ರಭಾವದಿಂದ ತಮ್ಮ ತಮ್ಮ ಧರ್ಮರತ್ನಗಳನ್ನು ಉತ್ತೇಜನ ಗೊಳಿಸಿದ್ದಾರೆ. ಭಗವಂತನ ಕೃಪೆಯು ಸಂಸಾರಿಯ ಮೇಲೆ ವಿಶೇಷವಾಗಿರುವುದೆಂದು ಶಾಸ್ತ್ರಗಳಿಂದ ತಿಳಿದುಬಂದಿರುವುದು. ನಿಷ್ಕಾಮವ್ರತನಿಷ್ಠನಾದ ಸಂಸಾರಿಯು ವಾನಪ್ರಸ್ಥಯೋಗಿಗಿಂತಲೂ ಶೀಘ್ರವಾಗಿಯೇ ಭಗವಂತನ ಅವ್ಯಾಜಕರುಣಾ ಪೂರ್ಣವಾದ ದೃಷ್ಟಿಗೆ ಪಾತ್ರವಾಗುವನು. ಗೃಹಸ್ಥನು ಸಂಸಾರದಲ್ಲಿದ್ದುಕೊಂಡು ಸುಲಭವಾಗಿ ಸಂಪಾದಿಸಬಹುದಾದ ಧರ್ಮವನ್ನು ಸಂಗಪರಿತ್ಯಾಗಿಯಾದ ಯೋಗಿಯು ಅತಿಪ್ರಯಾಸದಿಂದ ಸಂಪಾದಿಸಬೇಕಾಗುವುದು. ಒಂದೊಂದು ವೇಳೆ ಅನುಷ್ಠಾನಲೋಪದಿಂದ ಯೋಗವು ಭ್ರಷ್ಟವಾಗಿ ಅನಿಷ್ಟಫಲವು ಸಂಭವಿಸುವುದೂ ಉಂಟು. ಇದು

ದೈವೇಚ್ಛೆ. ಎಲ್ಲರೂ ಸಂಸಾರವನ್ನು ತ್ಯಾಗಮಾಡಿ ಯೋಗಿಗಳಾಗಿ ಮುಕ್ತಿಯನ್ನು ಪಡೆವುದು ಭಗವಂತನಿಗೆ ಅಭಿಪ್ರೇತವಲ್ಲ. ಎಲ್ಲರೂ ಗೃಹವನ್ನು ತ್ಯಾಗಮಾಡುವುದಾದರೆ ಲೋಕದ ಸೃಷ್ಟಿವ್ಯಾಪಾರವು ನಡೆಯುವ ಬಗೆ ಹೇಗೆ? ಲೋಕವು ದಿನ ದಿನಕ್ಕೆ ಅಭಿವೃದ್ಧಿಯನ್ನೈಯ್ದುತ್ತಿರಬೇಕೆಂಬುದೇ ವಿಧಿನಿಯಮವು. ಬುದ್ಧಿ ಮಂತನು ಸಂಸಾರದಲ್ಲಿದ್ದುಕೊಂಡು ಕಮಲದ ಎಲೆಯ ಮೇಲಿನ ನೀರಿನ ಬಿಂದವಿನಂತೆ ಸುಖದುಃಖಗಳಿಗೆ ಒಳಪಡದೆ ಯೋಗಿಯಾಗಿರುವುದಾದರೆ ಭಗವಂತನ ಉದ್ದೇಶವೂ ನೆರವೇರುವುದಲ್ಲದೆ, ಮೋಕ್ಷವೂ ಸುಲಭವಾಗಿ ಕೈಸೇರುವುದು. ಈ ಮಾರ್ಗವನ್ನು ಬಿಟ್ಟರೆ ಉತ್ತಾರಣೆಗೆ ಬೇರೊಂದು ಮಾರ್ಗವಿಲ್ಲ.''

ಮಹಾತ್ಮನು ಗೃಹಸ್ಥಾಶ್ರಮದ ಪ್ರಯೋಜನವನ್ನು ಕುರಿತು ಇನ್ನೂ ಬಗೆ ಬಗೆಯ ರೀತಿಯಿಂದ ಸದುಪದೇಶಮಾಡಿದನು. ಅದುಮೊದಲು ಕಮಲಾಕಾಂತನಿಗೆ ಸಂಸಾರಿಯಾಗಬೇಕೆಂಬುದಾಗಿ ಚಾಪಲ್ಯವುಂಟಾಯಿತು. ಅದಕ್ಕಾಗಿ ತನ್ನ ದೇಶಕ್ಕೆ ಹಿಂತಿರುಗಿ ಬರಬೇಕೆಂದೂ, ಸ್ವಜನರಲ್ಲಿ ಹೆಣ್ಣು ತಂದುಕೊಂಡು ಸಂಸಾರಿಯಾಗಬೇಕೆಂದೂ ತೋರಿತು. ಅಲ್ಲದೆಯೂ ಹನ್ನೆರಡು ವರ್ಷಗಳಾಗಿ ಹೋಗಿರುವುದರಿಂದ ಆರು ಬದುಕಿರುವರೋ ಆರು ಸತ್ತಿರುವರೋ; ಆರು ಗುರುತಿಸುವರೋ ಆರು ಗುರುತಿಸುವುದಿಲ್ಲವೋ; ಆರು ನಂಬುವರೋ ಆರು ನಂಬುವುದಿಲ್ಲವೋ ಎಂದೂ, ಮತ್ತೇನೇನು ನೋಡಬೇಕಾಗುವುದೋ, ಇನ್ನೇನೇನು ಹೊಸ ಹೊಸ ವ್ಯಸನಗಳು ಬಂದು ಅಂಟಿಕೊಳ್ಳುವುವೋ ಎಂದೂ ಚಿಂತಿಸಿ ಚಿಂತಿಸಿ ತನ್ನ ಜನ್ಮಭೂಮಿಯ ಕಡೆಗೆ ತಿರುಗಿನೋಡುವುದನ್ನೇ ಮರೆತು ಬಿಟ್ಟು ಇನ್ನೂ ಪಶ್ಚಿಮದ ಕಡೆಗೆ ಹೊರಟುಹೋದನು. ಅಲ್ಲಿ ತನ್ನ ಬೈರಾಗಿಯ ವೇಷವನ್ನು ತೆಗೆದು ಹಾಕಿ ಜೀವನೋಪಾಯವನ್ನು ಹುಡುಕುವುದಕ್ಕಾಗಿ ಯೋಧಪುರಕ್ಕೆ ಬಂದು ಅಲ್ಲಿ ಒಂದು ಸಾಮಾನ್ಯವಾದ ಕೆಲಸಕ್ಕೆ ಸೇರಿಕೊಂಡನು. ಕಮಲಾಕಾಂತನು ಆಕಾಲಕ್ಕೆ ತಕ್ಕ ಹಾಗೆ ವಿದ್ಯಾಬುದ್ಧಿಗಳನ್ನು ಕಲಿತು ಲೋಕವ್ಯಾಪಾರದಲ್ಲಿ ಅತಿಚತುರನಾಗಿದ್ದನು. ಆದುದರಿಂದ ಕೆಲಗಾಲವೆನ್ನುವುದರೊಳಗಾಗಿಯೇ ಆತನಿಗೆ ಒಂದು ಗಣ್ಯವಾದ ಕೆಲಸವು ದೊರೆಯಿತು. ಅದು ವಿಶೇಷವಾಗಿ ಲಾಭಕರವಾಗಿದ್ದಿತೆಂದು ಹೇಳಬೇಕಾದುದೇನೂ ಇರುವುದಿಲ್ಲ. ಕಮಲಾಕಾಂತನು ಈ ಕೆಲಸದಲ್ಲಿ ತನ್ನ ಬುದ್ಧಿಯೆಲ್ಲವನ್ನೂ ವೆಚ್ಚಮಾಡಿ ಅಪರಿಮಿತವಾಗಿ ಹಣವನ್ನು ಸಂಪಾದಿಸಿದನು. ಈ ರೀತಿಯಲ್ಲಿ ಮೂವತ್ತು ವರ್ಷಗಳ ಕಾಲ ಅತಿಪ್ರಯಾಸದಿಂದ ರಾಜಸೇವೆಯನ್ನು ಮಾಡಿದುದರಲ್ಲಿ, ಅವನಿಗೆ ಬಲವತ್ತರವಾದ ವ್ಯಾಧಿಯೊಂದು ವ್ಯಾಪಿಸಿತು. ಎಷ್ಟೋ ಮಂದಿ ವೈದ್ಯರು ಚಿಕಿತ್ಸೆಮಾಡಿನೋಡಿದರು. ಆವುದರಿಂದಲೂ ಪಾರಾಗುವ ಸಂಭವವೇ ಕಂಡುಬರಲಿಲ್ಲ. ಕೊನೆಗೆ ವೈದ್ಯರ ಹೇಳಿಕೆಯ ಪ್ರಕಾರವಾಗಿ ಕಮಲಾಕಾಂತನು ತನ್ನ ಜನ್ಮಭೂಮಿಯನ್ನು ಕುರಿತು

ತೆರಳಬೇಕಾಯಿತು. ಒಬ್ಬಂಟಿಗನಾಗಿದ್ದುಕೊಂಡು ಸಾಯುವ ವರೆಗೂ ಹೊಟ್ಟೆ ಕಟ್ಟಿ ಬಟ್ಟೆಕಟ್ಟಿ ಸಂಪಾದನೆಮಾಡಿ ಆರಿಗೆ ಬಿಟ್ಟುಹೋಗಬೇಕೋ ತಿಳಿಯದು. ಕಮಲಾಕಾಂತನು ಮೂವತ್ತು ವರ್ಷದ ಕಾಲದಲ್ಲಿ ಸಂಪಾದಿಸಿರುವ ಹಣವನ್ನು ಹತ್ತು ತಲೆಯ ವರೆಗೆ ತಿಂದು ತೇಗಿದರೂ, ಅದು ಕಡಿಮೆಯಾಗುವ ಹಾಗಿಲ್ಲ. ಹೀಗಿದ್ದರೂ ಕೆಲವು ದುರಾಶಾ ಗ್ರಹ ಪೀಡಿತರಾದ ಜನರು ಮರಣಾವಧಿ ಪರಸೇವೆ ಯನ್ನು ಮಾಡಿ ಮಾಡಿ ಹಣವನ್ನು ಕೂಡಿಡುವರು. ಈ ಸ್ವಭಾವದವರನ್ನು ಅನೇಕರು ನಿಂದಿಸಬಹುದು. ಹುಟ್ಟಿದ ಮೊದಲು ಸಾಯುವ ವರೆಗೂ ಇತರರಿಗಾ ಗಿಯೇ ಹಣವನ್ನು ಕೂಡಿಸುವ ಉದಾರಿಗಳಾದ ಇಂತಹವರನ್ನು ನಾವು ಜನೋ ಪಕಾರಿಗಳೆಂದೂ ಪರಾರ್ಥಘಟಕರೆಂದೂ ಶ್ಲಾಘಿಸುವೆವು. ಇಂತಹ ಮಹನೀ ಯರು ಲೋಕದಲ್ಲಿ ಜನಿಸದಿದ್ದರೆ, ಹಣವು ಒಟ್ಟಾಗಿ ಸೇರಿ ಇತರರು ಹಣಗಾರ ರೆಂದು ಹೇಗೆ ಹೊಗಳಿಸಿಕೊಳ್ಳುವುದಕ್ಕಾಗುತಿದ್ದಿತು. ಒಬ್ಬನು ಸಂಪಾದಿಸುವು ದಕ್ಕಾಗಿಯೇ ಹುಟ್ಟಿರುವನು ; ಮತ್ತೊಬ್ಬನು ಅದರ ಫಲವನ್ನು ಅನುಭವಿಸುವ ಯೋಗವನ್ನು ಪಡೆದುಕೊಂಡಿರುವನು. ಕಮಲಾಕಾಂತನು ಶ್ರಮಪಟ್ಟು ಗಳಿಸಿದ ಅಪರಿಮಿತವಾದ ಆಸ್ತಿಯನ್ನು ಸ್ವಜನರಾದ ಆರ ಬಾಯಲ್ಲೋ ಇಟ್ಟು ಸಾಯು ವುದಕ್ಕಾಗಿ ಆತ್ಮೀಯರ ಬಳಿಗೆ ಬರಲು ಪ್ರಯತ್ನಪರನಾದನು. ಒಂದು ದಿನ ತನ್ನ ಸಂಪತ್ತೆಲ್ಲವನ್ನೂ ಒಟ್ಟು ಗೂಡಿಸಿಟ್ಟುಕೊಂಡು ವಿದ್ಯಾನಗರಕ್ಕೆ ಬಂದೇ ಬಿಟ್ಟನು. ಬಹುಕಾಲದಿಂದಲೂ ಪಶ್ಚಿಮದೇಶದಲ್ಲಿಯೇ ವಾಸವಾಗಿದ್ದುದರಿಂದ, ಕಮಲಾಕಾಂತನ ನಡೆನುಡಿಗಳೂ ವೇಷಭೂಷಣಗಳೂ ಪಶ್ಚಿಮ ದೇಶೀಯನಂತೆ ಮಾರ್ಪಟ್ಟು ಹೋಗಿದ್ದುವು. ಪೂರ್ವ ದೇಶೀಯರು ಆರು ನೋಡಿದರೂ ಈತ ನನ್ನು ಆತ್ಮೀಯನೆಂದು ತಿಳಿದುಕೊಳ್ಳುವುದೇ ಅಸಾಧ್ಯವಾಗಿ ಕಂಡುಬರುತಿದ್ದಿತು. ಇದು ಇವನಿಗೆ ಪ್ರಾರಂಭದಲ್ಲಿ ಮಹೋಪಕಾರಕವಾಗಿಯೇ ಪರಿಣಮಿಸಿತು. ಕಮಲಾಕಾಂತನು ಈ ವೇಷಾಂತರದ ವ್ಯಾಜದಿಂದ ತನ್ನವರ ಶೀಲಸ್ವಭಾವ ಗಳನ್ನರಿವುದಕ್ಕೂ, ತನ್ನ ಸಂಪತ್ತಿಗೆ ಆರು ಯೋಗ್ಯವಾದ ಪಾತ್ರವೆಂಬುದನ್ನು ನಿರ್ಧರಿಸುವುದಕ್ಕೂ ಅವಕಾಶವೇರ್ಪಡಿಸಿಕೊಟ್ಟಂತಾಯಿತು. ಕಮಲಾಕಾಂತನು ವಿದ್ಯಾನಗರಕ್ಕೆ ಬಂದ ಕೂಡಲೆ ಕೆಲಗಾಲ ಈ ಪ್ರಯತ್ನದಲ್ಲಿಯೇ ನಿರತನಾಗಿದ್ದು ಬಿಟ್ಟನು.

ಹಣಗಾರನಿಗೆ ಇತರರ ಒತ್ತಾಸೆ ಇರಲಿ ಇಲ್ಲದಿರಲಿ, ಒಬ್ಬ ಸಮರ್ಥನಾದ ವಕೀಲನ ಒತ್ತಾಸೆಯಂತೂ ಇದ್ದೇ ಇರಬೇಕಾಗುವುದು. ಕಾರಣವೇನೆಂದರೆ— ಹಣಗಾರನಿಗೆ ಹಣವನ್ನು ಸಂಪಾದಿಸುವುದು ಮಟ್ಟಿಗೆ ಗೊತ್ತಿರುವುದೇ ಹೊರತು ಅದರ ವಿನಿಯೋಗದ ಲವಲೇಶವೂ ಗೊತ್ತಾಗಿರುವುದಿಲ್ಲ. ಇದಕ್ಕಾಗಿಯೂ ಇತರ ಕೆಲಸಗಳಿಗಾಗಿಯೂ ಒಬ್ಬ ವಕೀಲನು ಆವಾಗಲೂ ಹಣಗಾರನಿಗೆ ಗಂಟು

ಬಿದ್ದಿರುವನು. ಕಮಲಾಕಾಂತನು ಇತರ ಹಣಗಾರರಂತೆ ಮದಾಂಧತೆಯಿಂದ ಯುಕ್ತಾಯುಕ್ತ ಪರಿಜ್ಞಾನ ಶೂನ್ಯನಾಗಿರಲಿಲ್ಲ. ಈತನು ಮಾಡುವ ಕೆಲಸಗಳು ಗೋಪ್ಯವಾಗಿಡಲ್ಪಟ್ಟಿರಬೇಕಾಗಿದ್ದಿತಾದುದರಿಂದ, ಈತನಿಗೆ ಒಬ್ಬ ಸಮರ್ಥನಾದ ವಕೀಲನ ಸಾಹಾಯ್ಯವು ಅವಶ್ಯವಾಗಿ ಬೇಕಾಗಿದ್ದಿತು. ಆದುದರಿಂದ ಈತನು ಚೆನ್ನಾಗಿ ಗುಣದೋಷಗಳನ್ನು ಪರೀಕ್ಷಿಸಿ ವಿಧುಭೂಷಣನೆಂಬ ಗುಣವುಳ್ಳ ಸಮರ್ಥನಾದ ವಕೀಲನನ್ನು ತನ್ನ ಕೆಲಸಕ್ಕಾಗಿ ನಿಯಮಿಸಿಕೊಂಡೆನು. ಬಳಿಕ ವಕೀಲನ ಪ್ರಯತ್ನ ಬಲದಿಂದ ಈತನಿಗಿದ್ದ ವಿಮಲಾಕಾಂತನೆಂಬ ತಮ್ಮನೊಬ್ಬನು ಸತ್ತುಹೋದನೆಂದೂ, ಅವನಿಗೆ ಮಧುಸೂದನನೆಂಬ ಮಗನೊಬ್ಬನಿರುವನೆಂದೂ, ಅವನು ಅಸಚ್ಚರಿತ್ರನೆಂದೂ ತಿಳಿದುಬಂದಿತು. ತರುವಾಯ ಕಮಲಾಕಾಂತನು ತನ್ನ ಸಂಪತ್ತಿಗೆ ಮಧುಸೂದನನು ಉತ್ತರಾಧಿಕಾರಿಯಾಗಿರಲು ಅಯೋಗ್ಯನೆಂದು ನಿಶ್ಚಯ ಮಾಡಿಕೊಂಡು ತನ್ನ ಜನ್ಮಭೂಮಿಯಾದ ರಾಯಪೇಟೆಯಲ್ಲಿ ವಾಸವಾಗಿರುವ ತನ್ನ ಬಂಧುಬಾಂಧವರಲ್ಲಿ ಆರಾದರೂ ಯೋಗ್ಯರಾಗಿರುವಲ್ಲಿ ಅವರನ್ನಾದರೂ ತನಗೆ ಉತ್ತರಾಧಿಕಾರಿಯನ್ನಾಗಿ ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಅಲ್ಲಿಗೆ ತೆರಳಿದನು. ಕಮಲಾಕಾಂತನು ದೋಣಿಯಿಂದ ರಾಯಘಟ್ಟದಲ್ಲಿಳಿದು ಸೋಪಾನಾವಳಿಯನ್ನೇರಿ ಬರುತ್ತಿರುವಾಗ ಜನ್ಮಕ್ಕೆ ಅಂಟಿಕೊಂಡು ಬಂದಿದ್ದ ರೋಗವು ತಲೆದೋರಲು, ಆತನು ವಿಶ್ರಮಿಸಿಕೊಳ್ಳುವುದಕ್ಕಾಗಿ ಘಟ್ಟದ ಮೇಲಿದ್ದ ದೇವಸ್ಥಾನದ ಬಳಿಯಲ್ಲಿ ಮಲಗಿದನು. ರೋಗವು ಬಲವತ್ತರವಾಗಿದ್ದುದರಿಂದ ಅಲ್ಲಿಯೇ ನೆಲದ ಮೇಲೆ ಮೂರ್ಛೆಗೊಂಡು ಬಿದ್ದು ಹೊರಳಾಡಲಾರಂಭಿಸಿದನು. ಆ ಕಾಲಕ್ಕೆ ಸರಿಯಾಗಿ ಸ್ವರ್ಣಕುಮಾರಿಯೂ ಮೋಹನ ಕುಮಾರನೂ ಬಂದು ಉಪಚರಿಸಲಾರಂಭಿಸಿದರು. ಅದರ ಮುಂದೆ ನಡೆದ ವಿಚಾರವೆಲ್ಲವೂ ನಮ್ಮ ಪಾಠಕ ಮಹಾಶಯರಿಗೆ ತಿಳಿದೇ ಇರುವುದು.

ಕಮಲಾಕಾಂತರಾಯನ ಪೂರ್ವ ವೃತ್ತಾಂತವನ್ನು ಇಷ್ಟರಮಟ್ಟಿಗೆ ತಿಳಿದುಕೊಂಡ ಬಳಿಕ ನಾವೆಲ್ಲರೂ ದೇವ ದುರ್ಗದಲ್ಲಿ ನಡೆಯುತ್ತಿರುವ ವಿಷಯವನ್ನು ತಿಳಿದುಕೊಳ್ಳಲು ಅಲ್ಲಿಗೆ ತೆರಳುವ. ಕಮಲಾಕಾಂತನು ತನ್ನ ಪರಿಚಯವನ್ನುಂಟುಮಾಡಿದ ಕೂಡಲೆ ಚೌಧುರಿ ಮಹಾಶಯನು ಭ್ರಾಂತನಾಗಿ ಅವಾಕ್ಕಾಗಿ ಕುಳಿತುಬಿಟ್ಟನು. ಸ್ವರ್ಣಕುಮಾರಿಯು ತನ್ನ ತಂದೆಯ ಅಪೂರ್ವವಾದ ಮನೋವಿಕಾರವನ್ನು ನೋಡಿ ಏನೂ ಅರಿಯಲಾರದೇ ಹೋದಳು. ವೀರಚಂದ್ರ ಜಯಚಂದ್ರರಿಬ್ಬರೂ ದಡಬಡನೆ ಎದ್ದುಬಂದು ಚೌಧುರಿಯ ಸೇವೆಯಲ್ಲಿ ನಿರತರಾದರು. ಅವರ ಆದರವು ವರ್ಣಿಸಿ ತೀರದು. ಚೌಧುರಿಯನ್ನು ಉಪಚರಿಸುವುದಕ್ಕೆ ಅವರಿಬ್ಬರೂ ಇಷ್ಟು ಮುಂದಾಳಾಗಿ ಬಂದುದಕ್ಕೆ ಅವರಿಗೆ ಬೇರೆಯ ಉದ್ದೇಶವಿದ್ದಿತು. ಅದನ್ನು ಅವರು ಸಾಧ್ಯವಾದಷ್ಟು ಮಟ್ಟಿಗೆ ಮರೆಮಾಡಿಕೊಂಡು ಸ್ವಪ್ರಯೋಜನ

ತೆರಳಬೇಕಾಯಿತು. ಒಬ್ಬಂಟಿಗನಾಗಿದ್ದುಕೊಂಡು ಸಾಯುವ ವರೆಗೂ ಹೊಟ್ಟೆ ಕಟ್ಟಿ ಬಟ್ಟೆಕಟ್ಟಿ ಸಂಪಾದನೆಮಾಡಿ ಆರಿಗೆ ಬಿಟ್ಟುಹೋಗಬೇಕೋ ತಿಳಿಯದು. ಕಮಲಾಕಾಂತನು ಮೂವತ್ತು ವರ್ಷದ ಕಾಲದಲ್ಲಿ ಸಂಪಾದಿಸಿರುವ ಹಣವನ್ನು ಹತ್ತು ತಲೆಯ ವರೆಗೆ ತಿಂದು ತೇಗಿದರೂ, ಅದು ಕಡಿಮೆಯಾಗುವ ಹಾಗಿಲ್ಲ. ಹೀಗಿದ್ದರೂ ಕೆಲವು ದುರಾಶಾ ಗ್ರಹ ಪೀಡಿತರಾದ ಜನರು ಮರಣಾವಧಿ ಪರಸೇವೆಯನ್ನು ಮಾಡಿ ಮಾಡಿ ಹಣವನ್ನು ಕೂಡಿಡುವರು. ಈ ಸ್ವಭಾವದವರನ್ನು ಅನೇಕರು ನಿಂದಿಸಬಹುದು. ಹುಟ್ಟಿದ ಮೊದಲು ಸಾಯುವ ವರೆಗೂ ಇತರರಿಗಾಗಿಯೇ ಹಣವನ್ನು ಕೂಡಿಸುವ ಉದಾರಿಗಳಾದ ಇಂತಹವರನ್ನು ನಾವು ಜನೋಪಕಾರಿಗಳೆಂದೂ ಪರಾರ್ಥಘಟಕರೆಂದೂ ಶ್ಲಾಘಿಸುವೆವು. ಇಂತಹ ಮಹನೀಯರು ಲೋಕದಲ್ಲಿ ಜನಿಸದಿದ್ದರೆ, ಹಣವು ಒಟ್ಟಾಗಿ ಸೇರಿ ಇತರರು ಹಣಗಾರರೆಂದು ಹೇಗೆ ಹೊಗಳಿಸಿಕೊಳ್ಳುವುದಕ್ಕಾಗುತಿದ್ದಿತು. ಒಬ್ಬನು ಸಂಪಾದಿಸುವುದಕ್ಕಾಗಿಯೇ ಹುಟ್ಟಿರುವನು ; ಮತ್ತೊಬ್ಬನು ಅದರ ಫಲವನ್ನು ಅನುಭವಿಸುವ ಯೋಗವನ್ನು ಪಡೆದುಕೊಂಡಿರುವನು. ಕಮಲಾಕಾಂತನು ಶ್ರಮಪಟ್ಟು ಗಳಿಸಿದ ಅಪರಿಮಿತವಾದ ಆಸ್ತಿಯನ್ನು ಸ್ವಜನರಾದ ಆರ ಬಾಯಲ್ಲೋ ಇಟ್ಟು ಸಾಯುವುದಕ್ಕಾಗಿ ಆತ್ಮೀಯರ ಬಳಿಗೆ ಬರಲು ಪ್ರಯತ್ನಪರನಾದನು. ಒಂದು ದಿನ ತನ್ನ ಸಂಪತ್ತೆಲ್ಲವನ್ನೂ ಒಟ್ಟು ಗೂಡಿಸಿಟ್ಟುಕೊಂಡು ವಿದ್ಯಾನಗರಕ್ಕೆ ಬಂದೇ ಬಿಟ್ಟನು. ಬಹುಕಾಲದಿಂದಲೂ ಪಶ್ಚಿಮದೇಶದಲ್ಲಿಯೇ ವಾಸವಾಗಿದ್ದುದರಿಂದ, ಕಮಲಾಕಾಂತನ ನಡೆನುಡಿಗಳೂ ವೇಷಭೂಷಣಗಳೂ ಪಶ್ಚಿಮ ದೇಶೀಯನಂತೆ ಮಾರ್ಪಟ್ಟು ಹೋಗಿದ್ದುವು. ಪೂರ್ವ ದೇಶೀಯರು ಆರು ನೋಡಿದರೂ ಈತನನ್ನು ಆತ್ಮೀಯನೆಂದು ತಿಳಿದುಕೊಳ್ಳುವುದೇ ಅಸಾಧ್ಯವಾಗಿ ಕಂಡುಬರುತಿದ್ದಿತು. ಇದು ಇವನಿಗೆ ಪ್ರಾರಂಭದಲ್ಲಿ ಮಹೋಪಕಾರಕವಾಗಿಯೇ ಪರಿಣಮಿಸಿತು. ಕಮಲಾಕಾಂತನು ಈ ವೇಷಾಂತರದ ವ್ಯಾಜದಿಂದ ತನ್ನವರ ಶೀಲಸ್ವಭಾವಗಳನ್ನರಿವುದಕ್ಕೂ, ತನ್ನ ಸಂಪತ್ತಿಗೆ ಆರು ಯೋಗ್ಯವಾದ ಪಾತ್ರವೆಂಬುದನ್ನು ನಿರ್ಧರಿಸುವುದಕ್ಕೂ ಅವಕಾಶವೇರ್ಪಡಿಸಿಕೊಟ್ಟಂತಾಯಿತು. ಕಮಲಾಕಾಂತನು ವಿದ್ಯಾನಗರಕ್ಕೆ ಬಂದ ಕೂಡಲೆ ಕೆಲಗಾಲ ಈ ಪ್ರಯತ್ನದಲ್ಲಿಯೇ ನಿರತನಾಗಿದ್ದು ಬಿಟ್ಟನು.

ಹಣಗಾರನಿಗೆ ಇತರರ ಒತ್ತಾಸೆ ಇರಲಿ ಇಲ್ಲದಿರಲಿ, ಒಬ್ಬ ಸಮರ್ಥನಾದ ವಕೀಲನ ಒತ್ತಾಸೆಯಂತೂ ಇದ್ದೇ ಇರಬೇಕಾಗುವುದು. ಕಾರಣವೇನೆಂದರೆ— ಹಣಗಾರನಿಗೆ ಹಣವನ್ನು ಸಂಪಾದಿಸುವುದು ಮಟ್ಟಿಗೆ ಗೊತ್ತಿರುವುದೇ ಹೊರತು ಅದರ ವಿನಿಯೋಗದ ಲವಲೇಶವೂ ಗೊತ್ತಾಗಿರುವುದಿಲ್ಲ. ಇದಕ್ಕಾಗಿಯೂ ಇತರ ಕೆಲಸಗಳಿಗಾಗಿಯೂ ಒಬ್ಬ ವಕೀಲನು ಆವಾಗಲೂ ಹಣಗಾರನಿಗೆ ಗಂಟು

ಬಿದ್ದಿರುವನು. ಕಮಲಾಕಾಂತನು ಇತರ ಹಣಗಾರರಂತೆ ಮದಾಂಧತೆಯಿಂದ ಯುಕ್ತಾಯುಕ್ತ ಪರಿಜ್ಞಾನ ಶೂನ್ಯನಾಗಿರಲಿಲ್ಲ. ಈತನು ಮಾಡುವ ಕೆಲಸಗಳು ಗೋಪ್ಯವಾಗಿಡಲ್ಪಟ್ಟರ ಬೇಕಾಗಿದ್ದಿತಾದುದರಿಂದ, ಈತನಿಗೆ ಒಬ್ಬ ಸಮರ್ಥನಾದ ವಕೀಲನ ಸಾಹಾಯ್ಯವು ಅವಶ್ಯವಾಗಿ ಬೇಕಾಗಿದ್ದಿತು. ಆದುದರಿಂದ ಈತನು ಚೆನ್ನಾಗಿ ಗುಣದೋಷಗಳನ್ನು ಪರೀಕ್ಷಿಸಿ ವಿಧುಭೂಷಣನೆಂಬ ಗುಣವುಳ್ಳ ಸಮರ್ಥನಾದ ವಕೀಲನನ್ನು ತನ್ನ ಕೆಲಸಕ್ಕಾಗಿ ನಿಯಮಿಸಿಕೊಂಡನು. ಬಳಿಕ ವಕೀಲನ ಪ್ರಯತ್ನ ಬಲದಿಂದ ಈತನಿಗಿದ್ದ ವಿಮಲಾಕಾಂತನೆಂಬ ತಮ್ಮನೊಬ್ಬನು ಸತ್ತುಹೋದನೆಂದೂ, ಅವನಿಗೆ ಮಧುಸೂದನನೆಂಬ ಮಗನೊಬ್ಬನಿರುವನೆಂದೂ, ಅವನು ಅಸಚ್ಚರಿತ್ರನೆಂದೂ ತಿಳಿದುಬಂದಿತು. ತರುವಾಯ ಕಮಲಾಕಾಂತನು ತನ್ನ ಸಂಪತ್ತಿಗೆ ಮಧುಸೂದನನು ಉತ್ತರಾಧಿಕಾರಿಯಾಗಿರಲು ಅಯೋಗ್ಯನೆಂದು ನಿಶ್ಚಯ ಮಾಡಿಕೊಂಡು ತನ್ನ ಜನ್ಮಭೂಮಿಯಾದ ರಾಯಪೇಟೆಯಲ್ಲಿ ವಾಸವಾಗಿರುವ ತನ್ನ ಬಂಧುಬಾಂಧವರಲ್ಲಿ ಆರಾದರೂ ಯೋಗ್ಯರಾಗಿರುವಲ್ಲಿ ಅವರನ್ನಾದರೂ ತನಗೆ ಉತ್ತರಾಧಿಕಾರಿಯನ್ನಾಗಿ ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಅಲ್ಲಿಗೆ ತೆರಳಿದನು. ಕಮಲಾಕಾಂತನು ದೋಣಿಯಿಂದ ರಾಯಘಟ್ಟದಲ್ಲಿಳಿದು ಸೋಪಾನಾವಳಿಯನ್ನೇರಿ ಬರುತ್ತಿರುವಾಗ ಜನ್ಮಕ್ಕೆ ಅಂಟಿಕೊಂಡು ಬಂದಿದ್ದ ರೋಗವು ತಲೆದೋರಲು, ಆತನು ವಿಶ್ರಮಿಸಿಕೊಳ್ಳುವುದಕ್ಕಾಗಿ ಘಟ್ಟದ ಮೇಲಿದ್ದ ದೇವಸ್ಥಾನದ ಬಳಿಯಲ್ಲಿ ಮಲಗಿದನು. ರೋಗವು ಬಲವತ್ತರವಾಗಿದ್ದುದರಿಂದ ಅಲ್ಲಿಯೇ ನೆಲದ ಮೇಲೆ ಮೂರ್ಛೆಗೊಂಡು ಬಿದ್ದು ಹೊರಳಾಡಲಾರಂಭಿಸಿದನು. ಆ ಕಾಲಕ್ಕೆ ಸರಿಯಾಗಿ ಸ್ವರ್ಣಕುಮಾರಿಯೂ ಮೋಹನ ಕುಮಾರನೂ ಬಂದು ಉಪಚರಿಸಲಾರಂಭಿಸಿದರು. ಅದರ ಮುಂದೆ ನಡೆದ ವಿಚಾರವೆಲ್ಲವೂ ನಮ್ಮ ಪಾಠಕ ಮಹಾಶಯರಿಗೆ ತಿಳಿದೇ ಇರುವುದು.

ಕಮಲಾಕಾಂತರಾಯನ ಪೂರ್ವ ವೃತ್ತಾಂತವನ್ನು ಇಷ್ಟರಮಟ್ಟಿಗೆ ತಿಳಿದುಕೊಂಡ ಬಳಿಕ ನಾವೆಲ್ಲರೂ ದೇವ ದುರ್ಗದಲ್ಲಿ ನಡೆಯುತ್ತಿರುವ ವಿಷಯವನ್ನು ತಿಳಿದುಕೊಳ್ಳಲು ಅಲ್ಲಿಗೆ ತೆರಳುವ. ಕಮಲಾಕಾಂತನು ತನ್ನ ಪರಿಚಯವನ್ನುಂಟುಮಾಡಿದ ಕೂಡಲೆ ಚೌಧುರಿ ಮಹಾಶಯನು ಭ್ರಾಂತನಾಗಿ ಅವಾಕ್ಕಾಗಿ ಕುಳಿತುಬಿಟ್ಟನು. ಸ್ವರ್ಣಕುಮಾರಿಯು ತನ್ನ ತಂದೆಯ ಅಪೂರ್ವವಾದ ಮನೋವಿಕಾರವನ್ನು ನೋಡಿ ಏನೂ ಅರಿಯಲಾರದೇ ಹೋದಳು. ವೀರಚಂದ್ರ ಜಯಚಂದ್ರರಿಬ್ಬರೂ ದಡಬಡನೆ ಎದ್ದುಬಂದು ಚೌಧುರಿಯ ಸೇವೆಯಲ್ಲಿ ನಿರತರಾದರು. ಅವರ ಆದರವು ವರ್ಣಿಸಿ ತೀರದು. ಚೌಧುರಿಯನ್ನು ಉಪಚರಿಸುವುದಕ್ಕೆ ಅವರಿಬ್ಬರೂ ಇಷ್ಟು ಮುಂದಾಳಾಗಿ ಬಂದುದಕ್ಕೆ ಅವರಿಗೆ ಬೇರೆಯ ಉದ್ದೇಶವಿದ್ದಿತು. ಅದನ್ನು ಅವರು ಸಾಧ್ಯವಾದಷ್ಟು ಮಟ್ಟಿಗೆ ಮರೆಮಾಡಿಕೊಂಡು ಸ್ವಪ್ರಯೋಜನ

ಕ್ಕಾಗಿಯೇ ಚೌಧುರಿಯನ್ನುಪಚರಿಸಲು ಅತಿವಿನಯದಿಂದ ಆದರವನ್ನು ತೋರಿಸತೊಡಗಿದರು. ಚೌಧುರಿಯ ಉದ್ದೇಶವಾದರೋ ಬೇರೆಯ ವಿಧವಾಗಿದ್ದಿತು. ಬಹು ದಿನವಾದರೂ ಬಾರದಿದ್ದುದರಿಂದ ಸತ್ತು ಹೋದನೆಂದು ಎಲ್ಲರೂ ತಿಳಿದುಕೊಂಡಿದ್ದ ಕಮಲಾಕಾಂತನು ಜೀವವಂತನಾಗಿ ಬಂದಿರುವುದನ್ನು ನೋಡಿ ಚೌಧುರಿ ಮಹಾಶಯನು ಪರಮಾನಂದಭರಿತನಾಗಿ ಕಣ್ಣುಗಳಿಂದ ಧಾರಾಕಾರವಾಗಿ ಆನಂದಾಶ್ರುವನ್ನು ಸುರಿಸುತ್ತಿದ್ದನು. ಆತನು ಸಂತೋಷಾಧಿಕ್ಯದಿಂದ ಬುದ್ಧಿಯಲ್ಲಿ ಭ್ರಾಂತನಾಗಿ ಆವ ಮಾತನ್ನೂ ಆಡದೆ ಕಮಲಾಕಾಂತರಾಯನನ್ನು ರಪ್ಪೆಹಾಕದ ದೃಷ್ಟಿಯಿಂದ ದುರ ದುರನೆ ನೋಡುತಿದ್ದನು. ಕಮಲಾಕಾಂತನು ಈ ಭಾವವನ್ನರಿತವನಾಗಿ ಚೌಧುರಿಯ ಕೈಗಳನ್ನು ಹಿಡಿದುಕೊಂಡನು. ಆಗ ಉಂಟಾದ ಇವರಿಬ್ಬರ ಆನಂದವು ದೇವತಾಯೋಗ್ಯವಾದುದು. ಇದನ್ನು ವರ್ಣನೆ ಮಾಡುವುದು ನಮ್ಮಂತಹ ಪಾಮರರಿಗೆ ಎಂದಿಗೂ ಸಾಧ್ಯವಲ್ಲ. ಇವರಿಬ್ಬರೂ ಆನಂದಮಯ ಪ್ರಪಂಚದಲ್ಲಿ ಬಲುಹೊತ್ತು ಸ್ತಬ್ಧರಾಗಿ ಕುಳಿತಿದ್ದರು. ಅವರಿಬ್ಬರ ಆನಂದವು ಅವರಿಬ್ಬರಿಗಲ್ಲದೆ ಇತರರಾರಿಗೂ ಗೋಚರವಾಗಲಿಲ್ಲವೆಂಬುದು ಅನನ್ವಯವಾಗಲಾರದು.

ಜಯಚಂದ್ರ ವೀರಚಂದ್ರರು ತಮ್ಮ ತಮ್ಮ ಹೆಣ್ಣು ಮಕ್ಕಳನ್ನು ಕರೆದುಕೊಂಡು ದೇವದುರ್ಗಕ್ಕೆ ಬಂದುದು ಎಲ್ಲರಿಗೂ ತಿಳಿದ ವಿಷಯವೇ ಆಗಿರುವುದು. ಅಹಂಕಾರಿಗಳಾದ ಇವರಿಬ್ಬರೂ ಬಹುದೂರದಲ್ಲಿದ್ದ ವಿದ್ಯಾನಗರದಿಂದ ದೇವದುರ್ಗಕ್ಕೆ ಬರಲು ಕಾರಣವೇನೆಂಬುದನ್ನು ಇಲ್ಲಿ ಕೊಂಚಮಟ್ಟಿಗೆ ತಿಳಿಸುವೆವು. ಇದು ಕಥಾಸಂದರ್ಭಕ್ಕೆ ಪ್ರಕೃತವೋ ಅಪ್ರಕೃತವೋ ನಮಗೆ ಗೊತ್ತಿಲ್ಲ. ಕೆಲಕೆಲವು ಸಂದರ್ಭಗಳಲ್ಲಿ ಪ್ರಕೃತವನ್ನೂ, ಕೆಲಕೆಲವು ಸಂದರ್ಭಗಳಲ್ಲಿ ಅಪ್ರಕೃತವನ್ನೂ ಕುರಿತು ಮಾತನಾಡಬೇಕಾಗುವುದು. ಕಾಲಭೇದದಿಂದಲೂ ಅವಸ್ಥಾಭೇದದಿಂದಲೂ ವಿಷಯಭೇದದಿಂದಲೂ ಪ್ರಕೃತವು ಅಪ್ರಕೃತವಾಗಿಯೂ ಅಪ್ರಕೃತವು ಪ್ರಕೃತವಾಗಿಯೂ ಪರಿಣಮಿಸುವುದುಂಟು. ಈ ಅಪ್ರಕೃತವಾದ ವಿಷಯವು ಕಾಲಾಂತರದಲ್ಲಿ ಪ್ರಕೃತ ವಿಷಯವೆನ್ನಿಸಿ ಕೊಳ್ಳುವುದಾದರೆ, ಈಗ ನಾವು ಕೆಲಸಕ್ಕೆ ಬಾರದುದನ್ನು ಉಲ್ಲೇಖಿಸುವುದಕ್ಕೆ ಕಳೆವ ಕಾಲವು ಕೂಡ ನಿಷ್ಫಲವೆನಿಸಿಕೊಳ್ಳಲಾರದು.

ವಕೀಲು ವಿಧುಭೂಷಣನು ವಿದ್ಯಾನಗರದಿಂದ ದೇವದುರ್ಗಕ್ಕೆ ಹೊರಟು ಬರುವಾಗ ವೀರಚಂದ್ರನ ಬಳಿಗೈತಂದು ಇಂತೆಂದನು :—

"ವೀರಚಂದ್ರ ಮಹಾಶಯ, ಒಬ್ಬ ಪಶ್ಚಿಮ ದೇಶದ ಧನಿಕನು ಇಲ್ಲಿಗೆ ಬಂದು ವಾಸವಾಗಿರುವುದಕ್ಕೆ ದೇವದುರ್ಗವನ್ನು ಬೆಲೆಗೆ ಕೊಂಡುಕೊಂಡಿರುವನು.

ನಾಳೆ ಬರುವ ಆಶ್ವಯುಜ ಶುದ್ಧ ಪ್ರಥಮೆಯ ದಿನ ಅಲ್ಲಿ ನೂತನ ಗೃಹ ಪ್ರವೇಶ ಮಹೋತ್ಸವವು ನಡೆವುದಾಗಿ ನಿಶ್ಚಯವಾಗಿರುವುದು. ತಾವೂ ತಮ್ಮ ಮಕ್ಕಳೂ ದಯೆಗೆಯ್ದು ಆ ಮುಹೂರ್ತಕ್ಕೆ ಸರಿಯಾಗಿ ಅಲ್ಲಿಗೆ ಬಿಜಯಮಾಡಿಸ ಬೇಕೆಂದು ನಮ್ಮ ಜಹಗೀರುದಾರರು ತಮ್ಮನ್ನು ನನ್ನ ಮುಖದಿಂದ ಪ್ರಾರ್ಥಿಸಿ ಕೊಂಡಿರುವರು. ಅವರು ತಮಗೆ ಸಮೀಪ ಬಂಧುಗಳಂತೆ. ಕೆಲವು ಕಾರಣಾಂತರ ದಿಂದ ನಾನು ಅವರ ಹೆಸರನ್ನು ಬಹಿರಂಗ ಪಡಿಸಕೂಡದವನಾಗಿರುವೆನು. ತಾವು ಅಲ್ಲಿಗೆ ಬಂದ ಕೂಡಲೆ ಎಲ್ಲವೂ ವಿಶದವಾಗಿ ಗೊತ್ತಾಗುವುದು. ಜಹಗೀರು ದಾರರು ವಿಶೇಷವಾದ ಸಂಪತ್ತಿಗೆ ಅಧಿಕಾರಿಗಳಾಗಿರುವುದರಿಂದ ತಮ್ಮ ವೆಚ್ಚವೆಲ್ಲ ವನ್ನೂ ವಹಿಸುವುದಾಗಿ ತಿಳಿಸಿರುವರು. ಪ್ರಕೃತದಲ್ಲಿ ದಾರಿಯ ವೆಚ್ಚಕ್ಕೆಂದು ಒಂದುನೂರು ರೂಪಾಯಿಗಳನ್ನು ತಮಗೆ ಕೊಡುವುದಾಗಿ ನನಗೆ ಅಪ್ಪಣೆಮಾ ಡಿರುವರು. ತಾವು ಮೊಬಲಗನ್ನು ತೆಗೆದುಕೊಂಡು ತಪ್ಪದೆ ಆ ಕಾಲಕ್ಕೆ ಸರಿಯಾಗಿ ಅಲ್ಲಿಗೆ ಬರಬೇಕೆಂದು ಪ್ರಾರ್ಥನೆ."

ವೀರಚಂದ್ರನು ಉತ್ಸವಕ್ಕೆ ಬರುವುದಾಗಿ ಮಾತುಕೊಟ್ಟು ರೂಪಾಯಿ ಗಳನ್ನು ತೆಗೆದುಕೊಂಡನು. ಅವನ ಮನಸ್ಸಿನಲ್ಲಿ "ಈಗಣ ವೆಚ್ಚಕ್ಕೆ ನೂರು ರೂಪಾಯಿ ಸಿಕ್ಕಿದ ಹಾಗಾಯಿತು. ಹಿಂದಣ ಸಂಬಂಧ ವಿರಲಿ, ಇಲ್ಲದಿರಲಿ, ಜಹ ಗೀರುದಾರ ನೊಡನೆ ಹೊಸದಾಗಿ ಸಂಬಂಧವನ್ನು ಬಳೆಯಿಸುವುದರಿಂದ ಹೆಚ್ಚಿನ ಪ್ರಯೋಜನವೇ ಆಗುವುದು, ಈ ಆದಾಯವನ್ನು ಆರು ತಾನೇ ಕಳೆದುಕೊಳ್ಳುವು ದಕ್ಕೆ ಇಷ್ಟಪಟ್ಟಾರು? ತಾನು ನಿಜವಾಗಿಯೂ ಅಲ್ಲಿಗೆ ಹೋಗಿ ಬುದ್ಧಿಯ ಪ್ರಭಾ ವವನ್ನು ನಖಮುಖದಲ್ಲಿಯೂ ತೋರಿಸಿ ಸ್ವಕಾರ್ಯವನ್ನಾಗ ಮಾಡಿಕೊಳ್ಳು ವೆನು," ಎಂದು ಪರಿಪರಿಯಾಗಿ ಚಿಂತಿಸುತ್ತಾ ಕುಳಿತನು. ವಿಧುಭೂಷಣನು ಆತನ ಅಪ್ಪಣೆಯನ್ನು ತೆಗೆದುಕೊಂಡು ಹೊರ ಹೊರಟು ಜಯ ಚಂದ್ರನ ಮನೆಗೆ ಬಂದು ವೀರಚಂದ್ರನಿಗೆ ಹೇಳಿದಹಾಗೆಯೇ ಹೇಳಿ ಅವನ ಕೈಯಲ್ಲಿ ಒಂದು ನೂರು ರೂಪಾಯಿಗಳನ್ನು ಇಟ್ಟನು. ಜಯಚಂದ್ರನೂ ವೀರಚಂದ್ರನಂತೆಯೇ ಭಾವಿಸಿ ದೇವದುರ್ಗಕ್ಕೆ ಹೋಗಲು ಒಪ್ಪಿಕೊಂಡನು. ಅದರಂತೆಯೇ ಜಯಚಂದ್ರ ವೀರ ಚಂದ್ರರು ತಮ್ಮ ತಮ್ಮ ಕುವರಿಯರನ್ನು ಜತೆಯಲ್ಲಿ ಕರೆದುಕೊಂಡು ದೇವ ದುರ್ಗಕ್ಕೆ ಬಂದು ಸೇರಿದುದು.

ಕಮಲಾಕಾಂತರಾಯನು ಚೌಧುರಿಯ ಕೈಗಳನ್ನು ಹಿಡಿದುಕೊಂಡು ಕುಳಿ ತಿರುವ ಸಮಯದಲ್ಲಿ, ಆತನ ವಕೀಲನಾದ ವಿಧುಭೂಷಣನು ಮನೆಯೊಳಗಡೆಯಿಂದ ಹಜಾರಕ್ಕೆ ಬಂದನು. ಕಮಲಾಕಾಂತನು ತನ್ನ ಬಂಧುಗಳಿಗೆಲ್ಲಾ ಆತನ ಪರಿ ಚಯವನ್ನುಂಟುಮಾಡಿಕೊಟ್ಟನು. ವಿಧುಭೂಷಣನು ಯಜಮಾನನನ್ನು ಬೇರೆ

ಯಾಗಿ ಕರೆದುಕೊಂಡುಹೋಗಿ, "ಸ್ವಾಮಿ, ನಾಗೇಂದ್ರಭೂಷಣನು ತಾವು ಬಂದಾಗ ಸರಿಯಾಗಿ ಉಪಚರಿಸಲಿಲ್ಲವೆಂದು ಗೊತ್ತಾಯಿತು. ಬಳಿಕ ತಾವೇ ಯಜಮಾನರೆಂದು ತಿಳಿಸಿದೊಡನೆಯೇ ಅವನು ಕಂಗೆಟ್ಟು ಹೋಗಿರುವನು. ತಮಗೆ ಮುಖತೋರಿಸುವುದೇ ಅವನಿಗೆ ಕಷ್ಟಕ್ಕೆ ಬಂದಿರುವುದು. ನಾನು ಅವನಿಗೆ ಬಹಳ ವಾಗಿ ಬುದ್ಧಿಗಲಿಸಿದ ಮೇಲೆ ಈಗ ಎಲ್ಲವೂ ಒಂದುಬಗೆಯಾಗಿ ಸಮಾಧಾನಸ್ಥಿತಿಗೆ ಬಂದಿರುವುದು," ಎಂದು ನಗುತನಗುತ ಮಾತನಾಡಿ ಎಲ್ಲರ ಬಳಿಯಲ್ಲಿಯೂ ಬಂದು ಕುಳಿತನು. ಇದಾದ ಕೊಂಚ ಹೊತ್ತಿನ ಮೇಲೆ ನಾಗೇಂದ್ರಭೂಷಣನು ಹಜಾರಕ್ಕೆ ಬಂದು "ಎಲ್ಲವೂ ಅಪ್ಪಣೆಯಂತೆ ಸಿದ್ಧವಾಗಿರುವುದು," ಎಂದು ಹೇಳಿ ದುಡದುಡನೆ ಹೊರಟುಹೋದನು. ಕಮಲಾಕಾಂತನು ಅಲ್ಲಿದ್ದವರೆಲ್ಲರನ್ನೂ ಕರೆದು ಕೊಂಡು ಮನೆಯೊಳಗೆ ಪ್ರವೇಶಮಾಡಿದನು.

---

## ಹನ್ನೊಂದನೆಯ ವಿಲಾಸ

### ವಕೀಲು ಮಹಾಶಯ

ಎಲ್ಲರೂ ಭೋಜನವನ್ನು ತೀರಿಸಿಕೊಂಡು ಮನೆಗೆ ಸೇರಿದ ಹೂದೋಟಕ್ಕೆ ಬಂದರು. ಕಮಲಾಕಾಂತನು ಮುಂದಣಕೆಲಸವನ್ನು ಮಾಡುವುದಕ್ಕಾಗಿ ವಕೀಲ ನೊಡನೆ ಗುಟ್ಟಾದ ಕೋಣೆಗೆ ತೆರಳಿದನು. ವಿಧುಭೂಷಣನು ಕಾಲವನ್ನು ವ್ಯರ್ಥ ವಾಗಿ ಕಳೆಯುತಕ್ಕ ಮನುಷ್ಯನಲ್ಲ. ಕಾಲವೇ ಅವನಿಗೆ ಸರ್ವಸ್ವ ಸ್ವರೂಪವಾಗಿದ್ದಿತು. ಅದುಕಾರಣ ಅವನು ಮರುದಿನ ಪ್ರಾತಃಕಾಲವೇ ವಿದ್ಯಾನಗರಕ್ಕೆ ಹೊರಟುಹೋಗ ಬೇಕಾಗಿದ್ದುದರಿಂದ, ದೇವದುರ್ಗಕ್ಕೆ ಸಂಬಂಧಪಟ್ಟ ಕಾಗದ ಪತ್ರಗಳೆಲ್ಲವನ್ನೂ ಯಜಮಾನನ ಕೈಗೆ ಕೊಟ್ಟು ಅದರ ವಿಷಯವೆಲ್ಲವನ್ನೂ ತಿಳಿಸಬೇಕೆಂದು ಕಮಲಾ ಕಾಂತನನ್ನು ತನ್ನ ಕೋಣೆಗೆ ಕರೆದುಕೊಂಡು ಹೋದನು. ಅಲ್ಲಿ ಯಜಮಾನನಿಗೆ ಒಂದೊಂದಾಗಿ ಎಲ್ಲವನ್ನೂ ತಿಳಿಯ ಹೇಳಿದನು. ಕಮಲಾಕಾಂತನು ತನಗೆ ಸಂ ಬಂಧಪಟ್ಟ ಕಾಗದ ಪತ್ರಗಳೆಲ್ಲವನ್ನೂ ಒಂದು ಬಲವತ್ತರವಾದ ಪೆಟ್ಟಿಗೆಯಲ್ಲಿಟ್ಟು ವಕೀಲನನ್ನು ಕುರಿತು, "ಮಹಾಶಯ, ಎಲ್ಲವೂ ತಿಳಿದಂತಾಯಿತು. ನನ್ನ ತಮ್ಮನ ಮಗ ಮಧುಸೂದನನಿಗೂ ತಮಗೂ ನಡೆದ ಸಂಭಾಷಣೆಯನ್ನು ಮಟ್ಟಿಗೆ ತಿಳಿಸ ಲಿಲ್ಲ. ಈಗ ಅವನ ವಿಷಯವಾಗಿ ತಿಳಿಸೋಣವಾಗಲಿ," ಎಂದು ಕೇಳಿದನು.

ವಿಧುಭೂಷಣ—ಸ್ವಲ್ಪ ದಿವಸದ ಹಿಂದೆ ನಿಮ್ಮ ತಮ್ಮನ ಮಗನು ರಾಯಪೇಟೆಯಿಂದ ಬಂದು ನನ್ನ ಕೈಯಲ್ಲಿ ಒಂದು ಕಾಗದದ ಕಟ್ಟನ್ನು ಕೊಟ್ಟು ಇದಕ್ಕೆ ಉತ್ತರವೇನಾದರೂ ಇದ್ದರೆ ತಿಳಿಸಬಹುದು, ಎಂದನು. ನಾನು ಅದನ್ನು

ನೋಡಿ ಮೇಲಿನ ವಿಳಾಸದಿಂದ ನಿಮ್ಮದೇ ಎಂದು ನಿರ್ಧರಮಾಡಿಕೊಂಡು ಆತನನ್ನು ಒಂದೆಡೆಯಲ್ಲಿ ಕುಳ್ಳಿರಿಸಿಕೊಂಡೆನು. ನಾನು ಕಾಗದವನ್ನು ಸಂಪೂರ್ಣವಾಗಿ ಓದಿದ ಬಳಿಕ ಮಧುಸೂದನನನ್ನು ಕುರಿತು, "ಮಹಾಶಯ ವ್ರಜವಿಹಾರಿಲಾಲ ರೆಂಬುವರು ನಿಮಗೆ ದೊಡ್ಡಪ್ಪನಾಗಬೇಕು. ಇದನ್ನು ನೀವೂ ಬಲ್ಲವರಾಗಿದ್ದೀರಿ. ನಿಮಗೆ ಗೊತ್ತಾದ ಬಗೆಯು ಅವರಿಗೂ ಗೊತ್ತುಂಟು. ಅವರಿಲ್ಲದಿರುವಾಗ ನೀವು ಅವರ ಕೋಣೆಗೆ ಹೋಗಿ ಅವರ ಕಾಗದ ಪತ್ರಗಳನ್ನು ನೋಡಿ ಹೊರಟು ಬಂದುದನ್ನು ಅವರು ಬಲ್ಲರು. ಅಲ್ಲದೆಯೂ ನೀವು ಗೋಪ್ಯವಾಗಿ ಸೂಳೆಯ ಮಗಳಾದ ಚಂದ್ರವದನೆಯೆಂಬುವಳನ್ನು ವಿವಾಹಮಾಡಿಕೊಂಡಿರುವುದನ್ನೂ, ಚಂದ್ರವದನೆಯು ರಾಯಪೇಟೆಗೆ ಒಂದು ಸರಕಾರವಾಡಿಯ ಹೊದ್ದೋಟದಲ್ಲಿ ನಿಮ್ಮೊಡನೆ ಮಾತನಾಡಿದ ಸಂಗತಿಯನ್ನೂ ಅವರು ಚೆನ್ನಾಗಿಯೂ ಬಲ್ಲರು," ಎಂದು ಹೇಳಿದೆನು.

ಕಮಲಾಕಾಂತ—ಆ ಮೇಲೆ.

ವಿಧುಭೂಷಣ—ಆ ಮಾತನ್ನು ಕೇಳಿದ ಕೂಡಲೆ ಅವನು ಸತ್ತವನೂ ಅಲ್ಲ, ಬದುಕಿದವನೂ ಅಲ್ಲ. ಆಗ ಅವನ ಮುಖದಲ್ಲಿ ಉಂಟಾದ ವ್ಯಸನವನ್ನು ನಾನು ಆವಾಗಲೂ ಮತ್ತಾರಲ್ಲಿಯೂ ನೋಡಲಿಲ್ಲ. ಆತನು ನನ್ನ ಮಾತನ್ನು ಕೇಳಿದ ಕೂಡಲೆ ಉತ್ತರಕೊಡಲು ಪ್ರಯತ್ನ ಪಟ್ಟನು; ಆದರೆ ಅದು ಸಾಗದೇ ಹೋಯಿತು. ತರುವಾಯ ನಾನು ಮತ್ತೆ ಮಾತನಾಡಿದೆನು. "ಮಹಾಶಯ, ನಿಮ್ಮ ಸಂಪತ್ತಿನಲ್ಲಿ ಒಂದು ಕವಡೆಯನ್ನಾದರೂ ಉಳಿಸಿಲ್ಲವೆಂದು ನಿಮ್ಮ ದೊಡ್ಡಪ್ಪನವರು ಬಲ್ಲರು. ಬಲು ಮಾತಿನಿಂದೇನು? ಇಂದಿನ ವರೆಗೂ ನೀವು ಏನೇನು ಕೆಲಸಮಾಡಿರುವಿರೋ ಅವೆಲ್ಲವೂ ಅವರಿಗೆ ತಿಳಿಯದೇ ಇಲ್ಲ. ಆದರೂ ಅವರು ನಿಮ್ಮ ವಿಷಯದಲ್ಲಿ ದಯಾಮಯರಾಗಿ ಇನ್ನೂ ಕೆಲವುಕಾಲ ನಿರೀಕ್ಷಿಸುವ ರಾಗಿರುವರು. ಅದರೊಳಗಾಗಿ ನೀವು ನಿಮ್ಮ ಸ್ವಭಾವವನ್ನು ತಿದ್ದಿ ಸರಿಪಡಿಸಿ ಕೊಳ್ಳಬೇಕು; ಶ್ರಮಪಟ್ಟು ನಿಮ್ಮ ಅನ್ನವನ್ನು ನೀವೇ ಸಂಪಾದಿಸಿಕೊಳ್ಳಬೇಕು; ಹಿಂದಿದ್ದ ಕೆಟ್ಟ ನಡತೆಯೆಲ್ಲವನ್ನೂ ಬಿಟ್ಟು ಸನ್ಮಾರ್ಗದಲ್ಲಿ ವರ್ತಿಸಬೇಕು. ಹೀಗೆ ನೀವು ನಡೆಯಿಸುವುದಾದರೆ ಅವರು ನಿಮ್ಮನ್ನು ತ್ಯಾಗಮಾಡುವುದಿಲ್ಲ. ನಾನು ಈಗ ಹೇಳುವ ಮಾತುಗಳೆಲ್ಲವನ್ನೂ ನೀವು ಬಲು ಮಟ್ಟಿಗೆ ಗುಟ್ಟಾಗಿಟ್ಟುಕೊಂಡಿರ ಬೇಕು. ನಿಮ್ಮ ಸೋದರತ್ತೆಯರ ಗಂಡಂದಿರಿಗೂ ಇದು ಬಹಿರಂಗವಾಗಕೂಡದು. ನೀವು ಆವಾಗಲೂ ನಿಮ್ಮ ದೊಡ್ಡಪ್ಪನವರ ಹೆಸರನ್ನೆತ್ತಕೂಡದು."

ಕಮಲಾಕಾಂತ—ಅದಕ್ಕೆ ಅವನೇನೆಂದನು?

ವಿಧುಭೂಷಣ—ನನ್ನ ಕೊನೆಯ ಮಾತುಗಳನ್ನು ಕೇಳಿ ಅವನಿಗೆ ಸ್ವಲ್ಪ ಧೈರ್ಯವುಂಟಾಯಿತಾದರೂ ಅವನು ಆವ ಮಾತನ್ನೂ ಆಡಲಿಲ್ಲ. ಬಳಿಕ ನಾನು ತಮ್ಮ ಅಪ್ಪಣೆಯ ಮೇರೆಗೆ ಅವನು ಆವರೀತಿಯಲ್ಲಿ ಕೆಲಸಮಾಡಿಕೊಂಡು ಜೀವನೋಪಾಯವನ್ನು ಕಲ್ಪಿಸಿಕೊಳ್ಳತಕ್ಕುದೆಂಬುದನ್ನು ಆತನಿಗೆ ತಿಳಿಯ ಪಡಿಸಿದೆನು. ಅದಕ್ಕೆಅವನು ಉತ್ತರ ಕೊಟ್ಟುದು:—"ತಾವು ಆವ ರೀತಿಯಲ್ಲಿ ಅಪ್ಪಣೆಮಾಡಿದರೂ ನಾನು ಅದರಂತೆಯೇ ನಡೆದುಕೊಳ್ಳುವೆನು. ನಾನು ಗುಟ್ಟಾಗಿ ಮದುವೆ ಮಾಡಿಕೊಂಡುದು ಸುಳ್ಳಲ್ಲ. ಆ ತಪ್ಪಿಗಾಗಿ ಈಗ ನಾನು ಬಹಳವಾಗಿ ಕೊರಗಿ ಕೊರಗಿ ಸಾಯುತ್ತಿರುವೆನು. ನನ್ನ ಸಂಕಟವನ್ನು ನಾನು ಹೇಗೆ ಹೊರಪಡಿಸಿಕೊಳ್ಳಲಿ?" ಈ ಮಾತನ್ನು ಕೇಳಿ ನನಗೆ ಆತನ ಮಾತಿನಲ್ಲಿ ನಂಬುಗೆಯುಂಟಾಯಿತು.

ಕಮಲಾಕಾಂತ—ಅವನು ಒಳ್ಳೆಯವನಾದರೆ ಸಂತೋಷವೇ ಸರಿ ; ಆದರೆ ನನಗೆ ಮಟ್ಟಿಗೆ ಆತನಲ್ಲಿ ವಿಶ್ವಾಸವಿಲ್ಲ. ಆಮೇಲೆ ಮತ್ತೇನು ನಡೆಯಿತು ?

ವಿಧುಭೂಷಣ—ಆತನು, "ಕೆಲಸಕಾರ್ಯಗಳನ್ನು ಸ್ವಂತವಾಗಿ ಮಾಡಿಕೊಂಡು ಜೀವನ ನೆರವೇರಿಸಿಕೊಳ್ಳಬೇಕಾದರೆ ಹಣವು ಬೇಕಾಗುವುದು, ಈಗ ನನಗೆ ಒಂದು ಕಾಸಿಗೂ ಮಾರ್ಗವಿಲ್ಲ," ಎಂದು ಹೇಳಿದುದನ್ನು ಕೇಳಿ, "ಮಹಾಶಯ, ನಿಮ್ಮ ದೊಡ್ಡಪ್ಪನವರು ನಿಮಗೆ ವ್ಯಾಪಾರಮಾಡುವುದಕ್ಕೆಂದು ಈಗ ಐದು ಸಾವಿರ ರೂಪಾಯಿಗಳನ್ನಾದರೂ ಕೊಡಲುಳ್ಳವರು. ನೀವು ವ್ಯಾಪಾರ ಮಾಡಿಕೊಂಡು ದಿನದಿನಕ್ಕೆ ಅಭಿವೃದ್ಧಿಗೆ ಬರುವುದನ್ನು ಅವರು ಕಂಡರೆ ನಿಮಗೆ ಬೇಕಾದ ಹಾಗೆ ಹಣವನ್ನು ಕೊಡುವರು. ಇಲ್ಲವಾದರೆ ಅವರು ನಿಮ್ಮನ್ನು ತ್ಯಾಗಮಾಡಿಬಿಡುವರು. ನೀವು ದೊಡ್ಡಪ್ಪನವರಿಗೆ ಎಂದೆಂದಿಗೂ ಮೋಸಗಾರಿಕೆಯ ಬುದ್ಧಿಯನ್ನು ತೋರಿಸದೇ ಇರಬೇಕು. ಕಾರಣವೇನೆಂದರೆ—ಅವರು ಎಲ್ಲಿದ್ದರೂ ಅವರಿಗೆ ಎಲ್ಲವೂ ಗೊತ್ತಾಗುವುದು." ಎಂದು ತಿಳಿಯಪಡಿಸಿದೆನು.

ಕಮಲಾಕಾಂತ—ಅದಾದ ಮೇಲೆ ?

ವಿಧುಭೂಷಣ—ಅದಾದ ಮೇಲೆ ಆತನು ತಮಗೆ ಎಂದೆಂದಿಗೂ ಮೋಸ ಮಾಡುವುದಿಲ್ಲವಾಗಿ ಆಣೆಯಿಟ್ಟುಕೊಂಡನು. ಬಳಿಕ ನಾನು ಆತನಿಗೆ ಐದು ಸಾವಿರ ರೂಪಾಯಿಗಳನ್ನು ಕೊಟ್ಟುಬಿಟ್ಟೆನು.

ಕಮಲಾ—ಅದಾದ ಮೇಲೆ ಕೇಳಿಬಂದ ಸಂಗತಿಯೇನು ?

ವಿಧು—ನನಗೆ ಅದರ ಮುಂದಣ ಸಂಗತಿಗಳಾವುವೂ ಗೊತ್ತಿಗೆ ಬಂದಿಲ್ಲ. ನಾನು ದೇವದುರ್ಗದ ವಿಚಾರದಲ್ಲಿ ವಿಶೇಷವಾದ ಗಮನವಿಟ್ಟಿದ್ದುದರಿಂದ, ಬೇರೆಯ

ಕೆಲಸಕ್ಕೆ ಹೋಗಲು ಅವಕಾಶವು ದೊರೆಯದಂತಾಯಿತು. ನಾಳೆಯ ದಿನ ನಾನು ವಿದ್ಯಾನಗರಕ್ಕೆ ಹೋಗಿ ಸೇರಿದೊಡನೆಯೇ ಮಧುಸೂದನನ ವೃತ್ತಾಂತವನ್ನು ತಿಳಿದು ತಮಗೆ ಬರೆದು ಕಳುಹುವೆನು.

ಈ ರೀತಿಯಾಗಿ ಮಾತುಕತೆಗಳು ನಡೆದ ಬಳಿಕ ಎಲ್ಲರೂ ಮಲಗಿ ನಿದ್ರೆ ಮಾಡಿದರು. ಬೆಳಗಾದ ಕೂಡಲೆ ವಕೀಲು ವಿಧುಭೂಷಣನು ವಿದ್ಯಾನಗರವನ್ನು ಕುರಿತು ತೆರಳಿದನು. ಕಮಲಾಕಾಂತನು ತಂಗೆಯರ ಗಂಡಂದಿರಾದ ವೀರಚಂದ್ರ ಜಯಚಂದ್ರರನ್ನು ಕೆಲವು ದಿನಗಳು ಇಲ್ಲಿಯೇ ವಾಸಮಾಡಿಕೊಂಡಿರಬೇಕೆಂದು ಪ್ರಾರ್ಥಿಸಿದನು. ಅವರೂ ಪ್ರತಿಯಾಗಿ ಮಾತನಾಡದೆ ಇರುವುದಕ್ಕೆ ಒಪ್ಪಿ ಕೊಂಡರು. ಬಳಿಕ ಚೌಧುರಿ ಮಹಾಶಯನನ್ನು ಕಂಡು, "ಮಹಾಶಯ, ನೀವು ಕೆಲಸಗಾರರು. ನಿಮ್ಮನ್ನು ಇಲ್ಲಿಯೇ ಉಳಿಸಿಕೊಳ್ಳುವುದರಿಂದ ನಿಮ್ಮ ಕೆಲಸ ಗಳಿಗೆ ಹಾನಿಯುಂಟಾಗುವ ಸಂಭವವುಂಟು. ಅದು ಕಾರಣವೇ ನೀವು ಈ ದಿನ ಮಧ್ಯಾಹ್ನ ಭೋಜನಾನಂತರದಲ್ಲಿ ನಿಮ್ಮೂರಿಗೆ ಹೊರಡುವುದು ಯುಕ್ತವಾಗಿರು ವುದು. ನಾನು ಕೆಲವು ದಿನಗಳು ಇಲ್ಲಿಯೇ ಇದ್ದು ಇವರ ಸ್ವಭಾವಗಳನ್ನು ಚೆನ್ನಾಗಿ ಪರೀಕ್ಷಿಸಿ ನೋಡುವೆನು. ನಮ್ಮ ದೇವದುರ್ಗವು ನಿಮ್ಮೂರಿಗೆ ಸಮೀಪ ವಾಗಿಯೇ ಇರುವುದರಿಂದ, ನೀವು ಅವಕಾಶ ಸಿಕ್ಕಿದಾಗಲೆಲ್ಲಾ ಇಲ್ಲಿಗೆ ಬಂದು ಹೋಗುತ್ತಿರಬೇಕು," ಎಂದು ಕಮಲಾಕಾಂತನು ನುಡಿದನು.

ಅದೇ ಪ್ರಕಾರವಾಗಿಯೇ ಚೌಧುರಿ ಮಹಾಶಯನು ಮಧ್ಯಾಹ್ನದ ಭೋಜನಾ ನಂತರದಲ್ಲಿ ಕಮಲಾಕಾಂತನ ಅಪ್ಪಣೆಯನ್ನು ಪಡೆದು ತನ್ನ ಮಗಳು ಸ್ವರ್ಣ ಕುಮಾರಿಯನ್ನೂ ಜತೆಯಲ್ಲಿಯೇ ಕರೆದುಕೊಂಡು ತನ್ನ ಗ್ರಾಮಕ್ಕೆ ಪಯಣ ಮಾಡಿದನು. ಕಮಲಾಕಾಂತನು ಜಯಚಂದ್ರ ವೀರಚಂದ್ರರನ್ನು ಮನೆಯಲ್ಲಿರ ಹೇಳಿ ಚೌಧುರಿಯನ್ನು ಕಳುಹಿಸಿಕೊಟ್ಟುದಕ್ಕಾಗಿ, ಅವರಿಬ್ಬರಿಗೂ ಉಂಟಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ಜಯಚಂದ್ರ ವೀರಚಂದ್ರರು ತಮ್ಮಿಬ್ಬರನ್ನೇ ಮನೆಯಲ್ಲಿಟ್ಟುಕೊಂಡುದರಿಂದ, ತಮಗೆ ಏನೋ ವಿಶೇಷವಾದ ಲಾಭಪ್ರಯೋ ಜನಗಳುಂಟಾದೀತೆಂದು ತಿಳಿದು ಮೆಯ್ಯುಬ್ಬಿಹೋದರು.

ವಕೀಲು ವಿಧುಭೂಷಣನೂ ಚೌಧುರಿ ಮಹಾಶಯನೂ ಹೊರಟು ಹೋದ ಬಳಿಕ ಮನೆಯಲ್ಲಿ ಪರಪುರುಷರಾರೂ ಇದ್ದಂತಾಗಲಿಲ್ಲ. ಮನೆಯಲ್ಲಿ ದಾಸದಾಸಿ ಯರೂ ನೌಕರರೂ ಕೆಲಸಮಾಡಿಕೊಂಡಿರುತಿದ್ದರೂ, ಅವರು ಸೇವಕವರ್ಗಕ್ಕೆ ಸೇರಿದವರಾದುದರಿಂದ ಅವರನ್ನು ಪರಪುರುಷರೆಂದು ಭಾವಿಸುವುದು ಯುಕ್ತಿ ಸಂಗತವಾಗಿರಲಿಲ್ಲ. ಆದುದರಿಂದ ಜಯಚಂದ್ರ ವೀರಚಂದ್ರರ ಪೂರ್ಣಯುವತಿ ಯರಾದ ಹೆಣ್ಣು ಮಕ್ಕಳು ನಾಚುಗೆಯಿಂದ ಹಗಲಿರುಳೂ ಅಂತಃಪುರದಲ್ಲಿ ಅಡ

ವಿಧುಭೂಷಣ—ನನ್ನ ಕೊನೆಯ ಮಾತುಗಳನ್ನು ಕೇಳಿ ಅವನಿಗೆ ಸ್ವಲ್ಪ ಧೈರ್ಯವುಂಟಾಯಿತಾದರೂ ಅವನು ಆವ ಮಾತನ್ನೂ ಆಡಲಿಲ್ಲ. ಬಳಿಕ ನಾನು ತಮ್ಮ ಅಪ್ಪಣೆಯ ಮೇರೆಗೆ ಅವನು ಆವರೀತಿಯಲ್ಲಿ ಕೆಲಸಮಾಡಿಕೊಂಡು ಜೀವನೋಪಾಯವನ್ನು ಕಲ್ಪಿಸಿಕೊಳ್ಳತಕ್ಕುದೆಂಬುದನ್ನು ಆತನಿಗೆ ತಿಳಿಯ ಪಡಿಸಿದೆನು. ಅದಕ್ಕೆಅವನು ಉತ್ತರ ಕೊಟ್ಟುದು:—"ತಾವು ಆವ ರೀತಿಯಲ್ಲಿ ಅಪ್ಪಣೆಮಾಡಿದರೂ ನಾನು ಅದರಂತೆಯೇ ನಡೆದುಕೊಳ್ಳುವೆನು. ನಾನು ಗುಟ್ಟಾಗಿ ಮದುವೆ ಮಾಡಿಕೊಂಡುದು ಸುಳ್ಳಲ್ಲ. ಆ ತಪ್ಪಿಗಾಗಿ ಈಗ ನಾನು ಬಹಳವಾಗಿ ಕೊರಗಿ ಕೊರಗಿ ಸಾಯುತ್ತಿರುವೆನು. ನನ್ನ ಸಂಕಟವನ್ನು ನಾನು ಹೇಗೆ ಹೊರಪಡಿಸಿಕೊಳ್ಳಲಿ?" ಈ ಮಾತನ್ನು ಕೇಳಿ ನನಗೆ ಆತನ ಮಾತಿನಲ್ಲಿ ನಂಬುಗೆಯುಂಟಾಯಿತು.

ಕಮಲಾಕಾಂತ—ಅವನು ಒಳ್ಳೆಯವನಾದರೆ ಸಂತೋಷವೇ ಸರಿ; ಆದರೆ ನನಗೆ ಮಟ್ಟಿಗೆ ಆತನಲ್ಲಿ ವಿಶ್ವಾಸವಿಲ್ಲ. ಆಮೇಲೆ ಮತ್ತೇನು ನಡೆಯಿತು?

ವಿಧುಭೂಷಣ—ಆತನು, "ಕೆಲಸಕಾರ್ಯಗಳನ್ನು ಸ್ವಂತವಾಗಿ ಮಾಡಿಕೊಂಡು ಜೀವನ ನೆರವೇರಿಸಿಕೊಳ್ಳಬೇಕಾದರೆ ಹಣವು ಬೇಕಾಗುವುದು, ಈಗ ನನಗೆ ಒಂದು ಕಾಸಿಗೂ ಮಾರ್ಗವಿಲ್ಲ," ಎಂದು ಹೇಳಿದುದನ್ನು ಕೇಳಿ, "ಮಹಾಶಯ, ನಿಮ್ಮ ದೊಡ್ಡಪ್ಪನವರು ನಿಮಗೆ ವ್ಯಾಪಾರಮಾಡುವುದಕ್ಕೆಂದು ಈಗ ಐದು ಸಾವಿರ ರೂಪಾಯಿಗಳನ್ನಾದರೂ ಕೊಡಲುಳ್ಳವರು. ನೀವು ವ್ಯಾಪಾರ ಮಾಡಿಕೊಂಡು ದಿನದಿನಕ್ಕೆ ಅಭಿವೃದ್ಧಿಗೆ ಬರುವುದನ್ನು ಅವರು ಕಂಡರೆ ನಿಮಗೆ ಬೇಕಾದ ಹಾಗೆ ಹಣವನ್ನು ಕೊಡುವರು. ಇಲ್ಲವಾದರೆ ಅವರು ನಿಮ್ಮನ್ನು ತ್ಯಾಗಮಾಡಿಬಿಡುವರು. ನೀವು ದೊಡ್ಡಪ್ಪನವರಿಗೆ ಎಂದೆಂದಿಗೂ ಮೋಸಗಾರಿಕೆಯ ಬುದ್ಧಿಯನ್ನು ತೋರಿಸದೇ ಇರಬೇಕು. ಕಾರಣವೇನೆಂದರೆ—ಅವರು ಎಲ್ಲಿದ್ದರೂ ಅವರಿಗೆ ಎಲ್ಲವೂ ಗೊತ್ತಾಗುವುದು." ಎಂದು ತಿಳಿಯಪಡಿಸಿದೆನು.

ಕಮಲಾಕಾಂತ—ಅದಾದ ಮೇಲೆ?

ವಿಧುಭೂಷಣ—ಅದಾದ ಮೇಲೆ ಆತನು ತಮಗೆ ಎಂದೆಂದಿಗೂ ಮೋಸ ಮಾಡುವುದಿಲ್ಲವಾಗಿ ಆಣೆಯಿಟ್ಟುಕೊಂಡನು. ಬಳಿಕ ನಾನು ಆತನಿಗೆ ಐದು ಸಾವಿರ ರೂಪಾಯಿಗಳನ್ನು ಕೊಟ್ಟುಬಿಟ್ಟೆನು.

ಕಮಲಾ—ಅದಾದ ಮೇಲೆ ಕೇಳಿಬಂದ ಸಂಗತಿಯೇನು?

ವಿಧು—ನನಗೆ ಅದರ ಮುಂದಣ ಸಂಗತಿಗಳಾವುವೂ ಗೊತ್ತಿಗೆ ಬಂದಿಲ್ಲ. ನಾನು ದೇವದುರ್ಗದ ವಿಚಾರದಲ್ಲಿ ವಿಶೇಷವಾದ ಗಮನವಿಟ್ಟದ್ದುದರಿಂದ, ಬೇರೆಯ

ಕೆಲಸಕ್ಕೆ ಹೋಗಲು ಅವಕಾಶವು ದೊರೆಯದಂತಾಯಿತು. ನಾಳೆಯ ದಿನ ನಾನು ವಿದ್ಯಾನಗರಕ್ಕೆ ಹೋಗಿ ಸೇರಿದೊಡನೆಯೇ ಮಧುಸೂದನನ ವೃತ್ತಾಂತವನ್ನು ತಿಳಿದು ತಮಗೆ ಬರೆದು ಕಳುಹುವೆನು.

ಈ ರೀತಿಯಾಗಿ ಮಾತುಕತೆಗಳು ನಡೆದ ಬಳಿಕ ಎಲ್ಲರೂ ಮಲಗಿ ನಿದ್ರೆ ಮಾಡಿದರು. ಬೆಳಗಾದ ಕೂಡಲೆ ವಕೀಲು ವಿಧುಭೂಷಣನು ವಿದ್ಯಾನಗರವನ್ನು ಕುರಿತು ತೆರಳಿದನು. ಕಮಲಾಕಾಂತನು ತಂಗೆಯರ ಗಂಡಂದಿರಾದ ವೀರಚಂದ್ರ ಜಯಚಂದ್ರರನ್ನು ಕೆಲವು ದಿನಗಳು ಇಲ್ಲಿಯೇ ವಾಸಮಾಡಿಕೊಂಡಿರಬೇಕೆಂದು ಪ್ರಾರ್ಥಿಸಿದನು. ಅವರೂ ಪ್ರತಿಯಾಗಿ ಮಾತನಾಡದೆ ಇರುವುದಕ್ಕೆ ಒಪ್ಪಿ ಕೊಂಡರು. ಬಳಿಕ ಚೌಧುರಿ ಮಹಾಶಯನನ್ನು ಕಂಡು, " ಮಹಾಶಯ, ನೀವು ಕೆಲಸಗಾರರು. ನಿಮ್ಮನ್ನು ಇಲ್ಲಿಯೇ ಉಳಿಸಿಕೊಳ್ಳುವುದರಿಂದ ನಿಮ್ಮ ಕೆಲಸ ಗಳಿಗೆ ಹಾನಿಯುಂಟಾಗುವ ಸಂಭವವುಂಟು. ಅದು ಕಾರಣವೇ ನೀವು ಈ ದಿನ ಮಧ್ಯಾಹ್ನ ಭೋಜನಾನಂತರದಲ್ಲಿ ನಿಮ್ಮೂರಿಗೆ ಹೊರಡುವುದು ಯುಕ್ತವಾಗಿರು ವುದು. ನಾನು ಕೆಲವು ದಿನಗಳು ಇಲ್ಲಿಯೇ ಇದ್ದು ಇವರ ಸ್ವಭಾವಗಳನ್ನು ಚೆನ್ನಾಗಿ ಪರೀಕ್ಷಿಸಿ ನೋಡುವೆನು. ನಮ್ಮ ದೇವದುರ್ಗವು ನಿಮ್ಮೂರಿಗೆ ಸಮೀಪ ವಾಗಿಯೇ ಇರುವುದರಿಂದ, ನೀವು ಅವಕಾಶ ಸಿಕ್ಕಿದಾಗಲೆಲ್ಲಾ ಇಲ್ಲಿಗೆ ಬಂದು ಹೋಗುತ್ತಿರಬೇಕು," ಎಂದು ಕಮಲಾಕಾಂತನು ನುಡಿದನು.

ಅದೇ ಪ್ರಕಾರವಾಗಿಯೇ ಚೌಧುರಿ ಮಹಾಶಯನು ಮಧ್ಯಾಹ್ನದ ಭೋಜನಾ ನಂತರದಲ್ಲಿ ಕಮಲಾಕಾಂತನ ಅಪ್ಪಣೆಯನ್ನು ಪಡೆದು ತನ್ನ ಮಗಳು ಸ್ವರ್ಣ ಕುಮಾರಿಯನ್ನೂ ಜತೆಯಲ್ಲಿಯೇ ಕರೆದುಕೊಂಡು ತನ್ನ ಗ್ರಾಮಕ್ಕೆ ಪಯಣ ಮಾಡಿದನು. ಕಮಲಾಕಾಂತನು ಜಯಚಂದ್ರ ವೀರಚಂದ್ರರನ್ನು ಮನೆಯಲ್ಲಿರ ಹೇಳಿ ಚೌಧುರಿಯನ್ನು ಕಳುಹಿಸಿಕೊಟ್ಟುದಕ್ಕಾಗಿ, ಅವರಿಬ್ಬರಿಗೂ ಉಂಟಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ಜಯಚಂದ್ರ ವೀರಚಂದ್ರರು ತಮ್ಮಿಬ್ಬರನ್ನೇ ಮನೆಯಲ್ಲಿಟ್ಟುಕೊಂಡುದರಿಂದ, ತಮಗೆ ಏನೋ ವಿಶೇಷವಾದ ಲಾಭಪ್ರಯೋ ಜನಗಳುಂಟಾದೀತೆಂದು ತಿಳಿದು ಮೆಯ್ಯುಬ್ಬಿಹೋದರು.

ವಕೀಲು ವಿಧುಭೂಷಣನೂ ಚೌಧುರಿ ಮಹಾಶಯನೂ ಹೊರಟು ಹೋದ ಬಳಿಕ ಮನೆಯಲ್ಲಿ ಪರಪುರುಷರಾರೂ ಇದ್ದಂತಾಗಲಿಲ್ಲ. ಮನೆಯಲ್ಲಿ ದಾಸದಾಸಿ ಯರೂ ನೌಕರರೂ ಕೆಲಸಮಾಡಿಕೊಂಡಿರುತಿದ್ದರೂ, ಅವರು ಸೇವಕವರ್ಗಕ್ಕೆ ಸೇರಿದವರಾದುದರಿಂದ ಅವರನ್ನು ಪರಪುರುಷರೆಂದು ಭಾವಿಸುವುದು ಯುಕ್ತಿ ಸಂಗತವಾಗಿರಲಿಲ್ಲ. ಆದುದರಿಂದ ಜಯಚಂದ್ರ ವೀರಚಂದ್ರರ ಪೂರ್ಣಯುವತಿ ಯರಾದ ಹೆಣ್ಣು ಮಕ್ಕಳು ನಾಚುಗೆಯಿಂದ ಹಗಲಿರುಳೂ ಅಂತಃಪುರದಲ್ಲಿ ಅಡ

ಗಿರದೆ ಆಗಿಂದಾಗ ಮನೆಯಲ್ಲೆಲ್ಲಾ ಧೈರ್ಯವಾಗಿ ಸಂಚರಿಸಲಾರಂಭಿಸಿದರು. ಕಮಲಾಕಾಂತನು ಹುಡುಗಿಯರನ್ನು ಕುರಿತು, "ಮಕ್ಕಳಿರಾ! ಈ ಮನೆಯು ನಿಮ್ಮದಾಗಿರುವುದು. ಒಬ್ಬಂಟಿಗನಾದ ನಿಮ್ಮ ಸೋದರಮಾವನಾದ ನಾನು ಇಷ್ಟು ದೊಡ್ಡ ಮನೆಯನ್ನು ಕಟ್ಟಿಕೊಂಡು ಏನ ಮಾಡುವುದಕ್ಕಾದೀತು? ಮನೆಯ ಕಾರ್ಯಭಾರವೆಲ್ಲವನ್ನೂ ನೀವೇ ವಹಿಸಿಕೊಂಡು ಬಂದುಹೋಗುವವರ ಯೋಗ ಕ್ಷೇಮವನ್ನು ಚೆನ್ನಾಗಿಯೂ ನೋಡಿಕೊಳ್ಳುತ್ತಿರಬೇಕು. ಇಲ್ಲಿ ನಿಮ್ಮ ಸುಖ ಸಂತೋಷಗಳಿಗೆ ಆವ ಕುಂದು ಕೊರತೆಗಳೂ ಉಂಟಾಗಲಿಕ್ಕಿಲ್ಲ. ನೀವು ಮಟ್ಟಿಗೆ ನಿಷ್ಕಾರಣವಾಗಿ ನಾಚುಗೆಯನ್ನು ನಟಿಸುತ್ತಾ ಮಾಡತಕ್ಕ ಕೆಲಸಗಳನ್ನು ಉಪೇಕ್ಷಿಸಲಾಗದು," ಎಂದು ತಿಳಿಯ ಹೇಳಿದನು. ಅದೇ ರೀತಿಯಲ್ಲಿಯೇ ಮನೆಯ ಯೋಗಕ್ಷೇಮವೆಲ್ಲವೂ ನಾಲ್ಕು ಹುಡುಗಿಯರ ತಲೆಯ ಮೇಲೆ ಸಂಪೂರ್ಣವಾಗಿ ಬಿದ್ದಿತು. ಅಂದು ಮೊದಲು ನಾಲ್ಕು ಯುವತಿಯರೂ ಕಮಲಾಕಾಂತನ ಸಂಸಾರ ದಲ್ಲಿ ಪ್ರಧಾನಾಧಿದೇವತೆಗಳಾಗಿ ವಿರಾಜಿಸುತ್ತಿದ್ದರು.

ಒಂದು ದಿನ ವೀರಚಂದ್ರನ ಹುಡುಗಿಯರು ಗೋಡೆಗಳಲ್ಲಿ ಅಲಂಕರಿಸಿದ್ದ ಅಮೂಲ್ಯವಾದ ಚಿತ್ರಪಟಗಳನ್ನು ನೋಡುತ್ತಾ ಕಾಲವನ್ನು ಕಳೆಯುತಿದ್ದರು. ಅವರಲ್ಲಿ ತಂಗೆಯು ಅಕ್ಕನನ್ನು ನೋಡಿ, "ಅಕ್ಕ! ಇಲ್ಲಿ ನೋಡು, ಒಂದು ಪಟಕ್ಕೆ ಮಟ್ಟಿಗೆ ಬಟ್ಟೆಯ ಆವರಣವಿರುವುದು. ಇದಕ್ಕೆ ಕಾರಣವೇನಿರ ಬಹುದು,?" ಎಂದು ಕೇಳಿದಳು.

ಅಕ್ಕ—ನನಗೆ ಕಾರಣ ಗೊತ್ತಿಲ್ಲ; ಬಟ್ಟೆಯನ್ನು ತೆಗೆದರೆ ತಾನಾಗಿಯೇ ಗೊತ್ತಾಗುವುದು.

ತಂಗೆ—ಆ ಮುದಿಗೊಡ್ಡು ನೋಡಿದರೆ ಏನೆಂದಾನು?

ಅಕ್ಕ—ಆ ಮುದಿಗೂಬೆ ಏನೆಂದಾನು?

ಹೀಗೆ ಹೇಳಿ ಅಕ್ಕನು ಆ ಪಟದ ಮೇಲಿದ್ದ ಬಟ್ಟೆಯನ್ನು ಕಿತ್ತು ಬಿಸುಟಳು. ಅದು ಸಾಧಾರಣವಾದ ಚಿತ್ರಪಟವಾಗಿದ್ದಿತು. ಅದರಲ್ಲಿ ಶ್ರೀಕೃಷ್ಣನು ಒಂದು ಗಿಡದ ಮರೆಯಲ್ಲಿ ಅವಿತುಕೊಂಡು ರಾಧೆಯ ರೂಪರೇಖಾ ಲಾವಣ್ಯವನ್ನು ನೋಡಿ ನೋಡಿ ಹಿಗ್ಗುವಂತೆ ಚಿತ್ರಿಸಲ್ಪಟ್ಟಿದ್ದಿತು. ಚಿತ್ರಪಟದಲ್ಲಿ ಚಿತ್ರಗಾರನ ಅತ್ಯದ್ಭುತ ರೂಪರಂಜನ ಶಕ್ತಿಯು ಕಾಣಬರುತ್ತಿರಲಿಲ್ಲವಾದರೂ, ಬಣ್ಣವು ಹೊಸದಾಗಿ ಹಾಕಿದ್ದುದರಿಂದ ದೂಳು ಬೀಳದಿರಲೆಂದು ಬಟ್ಟೆಯು ಮೇಲೆ ಮುಚ್ಚಲ್ಪಟ್ಟಿದ್ದಿತು. ಹುಡುಗಿಯರಿಗೆ ಇದರ ಮರ್ಮವು ಗೊತ್ತಾಗಲಿಲ್ಲವಾದುದ ರಿಂದ, ಅವರು ಆವರಣದ ಬಟ್ಟೆಯನ್ನು ತೆಗೆದು ನೋಡಿದರು. ಅವರಿಗೆ ಪಟ

ದಲ್ಲಿ ಅತಿಶಯವೇನೂ ಕಂಡುಬರಲಿಲ್ಲ. ಇದನ್ನು ನೋಡಿ ತಂಗೆಯು ಅಕ್ಕನನ್ನು ಕುರಿತು, "ಅಕ್ಕ! ಆ ಪಟವನ್ನು ಬಟ್ಟೆಯಿಂದ ಮೊದಲಿನಂತೆಯೇ ಮುಚ್ಚಿಬಿಡು. ಮಾರವಾಡಿಯು ನೋಡಿದರೆ ಏನಾದರೂ ಹೇಳುವನು," ಎಂದಳು. ಅಕ್ಕನು ಅದನ್ನು ಮುಚ್ಚುವ ಸಂಭ್ರಮದಲ್ಲಿ ಸಮೀಪದಲ್ಲಿಟ್ಟದ್ದ ಹೂಗೊಂಚಲಿನಿಂದಲಂಕರಸಲ್ಪಟ್ಟ ಚೀನಾದೇಶದ ಅತಿಸುಂದರವಾದ ಕುಂಡ ವಿಶೇಷವು ಕೆಳಗೆ ಬಿದ್ದು ಪುಡಿಪುಡಿಯಾಗಿ ಹೋಯಿತು. ಕುಂಡದಲ್ಲಿದ್ದ ನೀರು ನೆಲದ ಮೇಲೆ ಹಾಸಿದ್ದ ಸೊಗಸಾದ ರನ್ನಗಂಬಳಿಯ ಮೇಲೆಲ್ಲಾ ಚೆಲ್ಲಾಡಿ ಅದರ ಅಂದವೆಲ್ಲವನ್ನೂ ಮಂದಮಾಡಿಬಿಟ್ಟಿತು. ಅಕ್ಕನು ಈ ಅತ್ಯಾಚಾರವನ್ನು ತಿದ್ದಿ ಸರಿಪಡಿಸುವುದರಲ್ಲಿದ್ದಳು. ಅವಳ ತಂಗೆಯು ಅದನ್ನು ನೋಡಿ "ದಾಸ ದಾಸಿಯರು ಅದನ್ನು ಎತ್ತಿಹಾಕುವರು. ಅಕ್ಕ! ನೀನೇತಕ್ಕೆ ಎತ್ತಿಹಾಕಬೇಕು? ನೀನು ಈ ಕೆಲಸಗಳನ್ನು ಮಾಡುವುದು ಗೌರವಕ್ಕೆ ತಕ್ಕುದಲ್ಲ," ಎಂದು ನುಡಿದಳು. ಬಳಿಕ ಇಬ್ಬರೂ ಅಲ್ಲಿನ ಸೌಂದರ್ಯವನ್ನು ಹಾಳುಮಾಡಿಬಿಟ್ಟು ಬೇರೊಂದು ಕಡೆಗೆ ಹೊರಟು ಹೋದರು.

ಕಮಲಾಕಾಂತನು ಒಂದೆರಡು ದಿನಗಳಾದ ಬಳಿಕ ದೇವೀ ಸರೋವರಕ್ಕೆ ಬಂದಿದ್ದ ಭಟ್ಟಾಚಾರ್ಯನನ್ನು ನೋಡಬೇಕೆಂಬ ಕುತೂಹಲದಿಂದ ಆತನನ್ನು ಕರೆತರಲು ನವದ್ವೀಪಕ್ಕೆ ಜನರನ್ನು ಕಳುಹಿದನು. ಭಟ್ಟಾಚಾರ್ಯನು ಮರುದಿನವೇ ದೇವದುರ್ಗಕ್ಕೆ ಬಂದನು. ಕಮಲಾಕಾಂತನು ವಿಶೇಷವಾದ ಆದರದೊಡನೆ ಭಟ್ಟಾಚಾರ್ಯನನ್ನು ಒಂದು ಕೋಣೆಗೆ ಕರೆದುಕೊಂಡು ಹೋಗಿ ಬಾಗಲಿಗೆ ಒಳಗಡೆಯಿಂದ ಅಗಳಿಯನ್ನು ಹಾಕಿಕೊಂಡು ಮಾತನಾಡುವುದಕ್ಕೆ ಕುಳಿತನು. ಭಟ್ಟಾಚಾರ್ಯನು ವೈದಿಕನಾದುದರಿಂದ ಲೌಕಿಕರ ವ್ಯವಹಾರವನ್ನು ಕೊಂಚವೂ ಅರಿತವನಾಗಿರಲಿಲ್ಲ. ಜಹಗೀರುದಾರನಿಗೆ ಆವ ಬಗೆಯಲ್ಲಿ ಮಂಗಳಾಶಾಸನವನ್ನು ಮಾಡಬೇಕೆಂಬುದನ್ನೇ ತಿಳಿಯದವನಾದ ಭಟ್ಟಾಚಾರ್ಯನು ಕೋಣೆಯೊಳಗೆ ಬಂದಕೂಡಲೆ ಒಂದಾಸನದ ಮೇಲೆ ಕುಳಿತುಬಿಟ್ಟನು.

ರಾಯಮಹಾಶಯನು ಆತನಿಗೆ ಕೊಂಚ ದೂರವಾಗಿ ಕುಳಿತುಕೊಂಡು, "ಭಟ್ಟಾಚಾರ್ಯ ಮಹಾಶಯ!" ಎಂದನು.

"ಈಗಣ ಕಾಲದಲ್ಲಿ ಭಟ್ಟಾಚಾರ್ಯರೆಲ್ಲರೂ ಭಿಕ್ಷಾಚಾರ್ಯರಾಗಿ ಹೋಗಿರುವರು, ಮಹಾಶಯ!" ಎಂದು ಭಟ್ಟಾಚಾರ್ಯನು ಉತ್ತರ ಕೊಟ್ಟನು.

ಇಬ್ಬರಿಗೂ ಸರಸ ಪರಿಹಾಸೋಕ್ತಿಗಳು ನಡೆದ ಮೇಲೆ, ಕಮಲಾಕಾಂತನು ತನ್ನ ಪೂರ್ವ ವೃತ್ತಾಂತವೆಲ್ಲವನ್ನೂ ವಿಶದವಾಗಿ ವರ್ಣನೆಮಾಡಿ ತಿಳಿಸಿದನು.

ಭಟ್ಟಾಚಾಯ—ರಾಯರೆ! ತಾವು ಜಟಾಜೂಟಧಾರಿಯಾದ ವಿರಕ್ತ ಸನ್ಯಾಸಿಯಾಗಿದ್ದಿರಾ? ಈಗ ನೋಡಿದರೆ ಅದೆಲ್ಲವೂ ಕಾಣುವುದಿಲ್ಲ. ಪ್ರಕೃತ ಸಂದರ್ಭದಲ್ಲಿ ನೀವು ಸಂಸಾರದಲ್ಲಿ ಸನ್ಯಾಸಿಯಾಗಿರುವಿರಿ.

ಕಮಲಾಕಾಂತ—ಭಟ್ಟಮಹಾಶಯ, ಸಂಸಾರದಲ್ಲಿದ್ದುಕೊಂಡು ಸನ್ಯಾಸಿಯಾಗಬಹುದೇ? ಶಾಸ್ತ್ರದಲ್ಲಿ ಸನ್ಯಾಸಿಯ ಲಕ್ಷಣವೇನು?

ಭಟ್ಟ—ತಾವು ದೊಡ್ಡ ಪಂಡಿತರಾಗಿ ಕಾಣುವಿರಿ. ದೇವೀಸರೋವರದಲ್ಲಿ ತಾವು ಹೇಳಿದ ಮಾತುಗಳನ್ನು ಕೇಳಿದಾಗಲೇ ತಾವು ಮಹಾಪಂಡಿತರೆಂದು ನನಗೆ ಗೊತ್ತಾಯಿತು. ಇದೂ ಅಲ್ಲದೆ ತಾವು ನಾನಾ ದೇಶಗಳನ್ನು ಸಂಚಾರ ಮಾಡಿ ಲೋಕಾನುಭವವುಳ್ಳವರಾಗಿರುವಿರಿ. ನಿಮ್ಮ ಪ್ರಶ್ನೆಗಳಿಗೆ ನಮ್ಮಂತಹ ಭಿಕ್ಷಾಚಾರ್ಯರಾದ ವೈದಿಕ ಬ್ರಾಹ್ಮಣರು ಸಮಂಜಸವಾದ ಉತ್ತರಕೊಡುವುದು ಸಾಧ್ಯವಲ್ಲ. ನೀವು ನಮ್ಮನ್ನು ಮಾತು ಮಾತಿಗೂ ಸಿಕ್ಕಿಸಿಕೊಳ್ಳುವಿರಿ. ನಿಮ್ಮ ಶಕ್ತಿಯ ಮುಂದೆ ನಮ್ಮ ಶಕ್ತಿಯೇ! ಈಗ ನೀವು ಪ್ರಶ್ನೆ ಹಾಕಿರುವುದು ನೋಡಿದರೆ,—

ಕಮಲಾ—ನೋಡುವುದೇನೂ ಇಲ್ಲ; ಸನ್ಯಾಸಿಯ ಲಕ್ಷಣವನ್ನು ತಿಳಿಸೋಣವಾಗಲಿ.

ಭಟ್ಟ—ರಾಯ ಮಹಾಶಯರೇ! ತಾವು ಕೇಳುವಿರಾದುದರಿಂದ, ನಾನು ತಿಳಿದ ಮಟ್ಟಿಗೆ ಅರಿಕೆಮಾಡಿಕೊಳ್ಳುವೆನು. ಅದರಲ್ಲಿ ಸರಿಯಾವುದೋ ಬೆಸವಾವುದೋ ನೀವೇ ನೋಡಿಕೊಳ್ಳತಕ್ಕುದು. ಸುಖದುಃಖ, ಪಾಪಪುಣ್ಯಗಳೆಂಬ ಕರ್ಮ ಫಲವನ್ನು ಸ್ವಪ್ರಯೋಜನಕ್ಕಾಗಿ ಬಯಸದೇ ಪರಮಾತ್ಮನಲ್ಲಿ ಸಮರ್ಪಣೆ ಮಾಡುವುದೇ ಸನ್ಯಾಸ ಶಬ್ದಾರ್ಥವು. ಕರ್ಮಫಲವನ್ನು ತ್ಯಾಗಮಾಡಿದವನು ಸಂಸಾರದಲ್ಲಿದ್ದುಕೊಂಡಿದ್ದರೂ ಸನ್ಯಾಸಿಯೆನಿಸುವನು; ಕರ್ಮಫಲವನ್ನು ತ್ಯಾಗ ಮಾಡದ ಪರಿವ್ರಾಜಕನು ಮುಂಡಿಯಾಗಲಿ, ಜಟಿಲನಾಗಲಿ ಸನ್ಯಾಸಿಯೆನಿಸಲಾರನು. ಸರ್ವಸಂಗ ಪರಿತ್ಯಾಗಿಯೆಂದು ನಟನೆಮಾಡುವ ಕೆಂಪುಬಟ್ಟೆಯ ಸನ್ಯಾಸಿಗಿಂತಲೂ, ಹೆಂಡಿತಿ ಮಕ್ಕಳನ್ನು ಪಡೆದು ಸಂಸಾರಿಯಾದ ಬಿಳೀ ಬಟ್ಟೆಯ ಸನ್ಯಾಸಿಯೇ ಉತ್ತಮನು.

ಕಮಲಾ—ಸಂಸಾರಿಗಿಂತಲೂ ಯತಿಯು ದೊಡ್ಡವನೆಂದು ಬಲ್ಲವರು ನುಡಿವರು. "ಕಾಷಾಯ ದಂಡಮಾತ್ರೇಣ। ಯತಿಃ ಪೂಜ್ಯೋ ನಸಂಶಯಃ॥" ಎಂದು ಶಾಸ್ತ್ರವಿರುವುದು.

ಭಟ್ಟ—ಶಾಸ್ತ್ರವು ಸುಳ್ಳಲ್ಲ. ಕಾಷಾಯದಂಡಗಳು ನಿಜವಾದ ಸನ್ಯಾಸದ ಗುರುತುಗಳು. ಜನರು ಅದಕ್ಕೆ ವಿಶೇಷವಾದ ಗೌರವವನ್ನು ಕೊಡುವರು. ತಾತ್ಪರ್ಯವೇನೆಂದರೆ—ಪರಿಶುದ್ಧವಾದ ಸನ್ಯಾಸ ಲಕ್ಷಣವು ಆರಲ್ಲಿದ್ದರೂ ಅವರು ಪೂಜಾ ಯೋಗ್ಯರಾಗುವರು. ಅಹಂಕಾರ ಮಮಕಾರಗಳೆಂಬ ಅಭಿಮಾನವನ್ನು ತ್ಯಾಗಮಾಡಿದವನು ಸಂಸಾರವನ್ನು ಕಟ್ಟಿಕೊಂಡಾದರೂ ಇರಬಹುದು ; ಬಿಟ್ಟಾದರೂ ಇರಬಹುದು. ಅಭಿಮಾನರಹಿತನಾದ ಸಂಸಾರಿಯೂ ಪೂಜ್ಯನು, ಯತಿಯೂ ಪೂಜ್ಯನು. ಅಭಿಮಾನ ಸಹಿತನಾದವನಿಗೆ ಸಂಸಾರವು ನಿಸ್ಸಾರವಾಗಿ ಪರಿಣಮಿಸುವುದು ; ಅಭಿಮಾನ ಸಹಿತನಾದ ಯತಿಗಂತೂ ಇಹತ್ರೆಯಲ್ಲಿ ಮತಿಯೂ ಇಲ್ಲ, ಪರತ್ರೆಯಲ್ಲಿ ಗತಿಯೂ ಇಲ್ಲ.

ಕಮಲಾ—ಹಾಗಾದರೆ ನಾನು ನಿಷ್ಕಾಮ ವ್ರತವನ್ನಾಚರಿಸುವೆನು.

ಭಟ್ಟ—ಅದು ಸನ್ಯಾಸ ಲಕ್ಷಣವೇ ಅಹುದು. ತಾವು ನಿಜವಾಗಿಯೂ ಸಂಸಾರದಲ್ಲಿ ಸನ್ಯಾಸಿಗಳು.

ಕಮಲಾ—ಮತ್ತೊಂದು ವಿಷಯವನ್ನು ಕೇಳಬೇಕೆಂದಿರುವೆನು. ನಾನು ಪಶ್ಚಿಮ ದೇಶದಲ್ಲಿ ರಾಜಸೇವೆಯಲ್ಲಿದ್ದುಕೊಂಡು ಅಪರಿಮಿತವಾದ ಸಂಪತ್ತನ್ನು ಪಡೆದಿರುವೆನು. ಇತರರನ್ನು ಸಂಕಟಪಡಿಸದೆ ಸಂಪತ್ತು ಕೈವಶವಾಗುವುದು ಸಾಧ್ಯದ ಮಾತಲ್ಲ. ನಾನು ತಿಳಿದೇ ಆಗಲಿ ತಿಳಿಯದೆಯೇ ಆಗಲಿ, ದ್ರವ್ಯಾರ್ಜನೆಗಾಗಿ ಪಾಪಕರ್ಮಗಳನ್ನು ಮಾಡಿರುವೆನು. ಅದಕ್ಕೆ ಪ್ರಾಯಶ್ಚಿತ್ತವೇನೆಂಬುದನ್ನು ತಾವು ತಿಳಿಸಿದಲ್ಲಿ ನಾನು ಅದನ್ನು ನೆರವೇರಿಸಿ ಧನ್ಯನಾಗುವೆನು.

ಭಟ್ಟ—ತೀವ್ರವಾದ ಪಶ್ಚಾತ್ತಾಪವೇ ಅದಕ್ಕೆ ಪ್ರಾಯಶ್ಚಿತ್ತವು. ಕೃಚ್ಛ್ರಚಾಂದ್ರಾಯಣಾದಿ ವ್ರತಗಳನ್ನಾಚರಿಸುವುದಕ್ಕಿಂತಲೂ ಇದೇ ಸುಲಭೋಪಾಯವು. ಅಜ್ಞಾನಿಗೆ ವ್ರತನಿಯಮಗಳು ಉಕ್ತವಾಗಿರುವುವು. ಜ್ಞಾನಿಗಾದರೋ ಪಶ್ಚಾತ್ತಾಪವೆಂಬ ಬೆಂಕಿಯೇ ಸರ್ವದೋಷಗಳನ್ನೂ ಸುಟ್ಟು ಬೂದಿ ಮಾಡಿಬಿಡುವುದು. ತಾವು ಪಶ್ಚಾತ್ತಾಪ ಪಡುವಿರಾದುದರಿಂದ ತಮ್ಮ ಹಿಂದಣ ದೋಷಗಳೆಲ್ಲವೂ ನಿವಾರಣೆಯಾದುವು. ತಾವು ಈಗ ಪುಟಪಾಕಶೋಧಿತವಾದ ಬಂಗಾರದ ಪ್ರತಿಮೆಯಂತಿರುವಿರಿ. ಇನ್ನು ತಮಗೆ ನಿಷ್ಕಾಮವ್ರತವೊಂದೇ ಸಾಕು. ನಿಷ್ಕಾಮ ಧರ್ಮಾವಲಂಬನದಿಂದ ಹಿಂದಣ ಪಾಪಗಳು ಬೆಂದುಹೋಗುವುವಲ್ಲದೇ ಮುಂದಣ ಸನಾತನ ಲೋಕಗಳೂ ಸುಲಭಸಾಧ್ಯವಾಗುವುವು.

ಕಮಲಾಕಾಂತರಾಯನು ಭಟ್ಟಾಚಾರ್ಯನ ಸದುಪದೇಶವನ್ನು ಕೇಳಿ ಪರಮಾನಂದಭರಿತನಾಗಿ ಆತನನ್ನು ತನ್ನ ಆತ್ಮೋದ್ಧಾರದ ಗುರುವನ್ನಾಗಿಯೂ

ಸಭಾಪಂಡಿತನನ್ನಾಗಿಯೂ ಮಾಡಿಕೊಂಡೆನು. ಅಂದಿನಿಂದ ಭಟ್ಟಾಚಾರ್ಯನ ದಾರಿದ್ರ್ಯವು ದೂರ ಸರಿಯಲಾರಂಭವಾಯಿತು. ಲಕ್ಷ್ಮಿಯ ಕಟಾಕ್ಷವೊಂದಿದ್ದರೆ ಬಗೆಬಗೆಯ ದೋಷಗಳೆಲ್ಲವೂ ಕ್ಷಣಕಾಲದಲ್ಲಿಯೇ ಮಾಯವಾಗುವುವು.

---

## ಹನ್ನೆರಡನೆಯ ವಿಲಾಸ.

### ಪರಾಮರ್ಶೆ

ಕಮಲಾಕಾಂತರಾಯ ಮಹಾಶಯನು ದೇವದುರ್ಗದಲ್ಲಿ ವಾಸಮಾಡುವುದಕ್ಕೆ ಪ್ರಾರಂಭಮಾಡಿ ಒಂದು ತಿಂಗಳಾಗುತ ಬಂದಿತು. ಚೌಧುರಿಯು ಆಗಿಂದಾಗ ಬಂದು ಜಹಗೀರುದಾರನನ್ನು ನೋಡಿಕೊಂಡು ಹೋಗುತಿದ್ದನು. ಕಮಲಾಕಾಂತನಿಗೆ ಸರಳಸ್ವಭಾವದವನಾದ ಚೌಧರಿಯಲ್ಲಿ ಸಹಜವಾದ ಪ್ರೀತಿಯೇರ್ಪಟಿತು. ಕಾರಣ ವೇನೆಂದರೆ—ಚೌಧುರಿಯು ಅಂತರ್ಯದಲ್ಲಿ ಕಮಲಾಕಾಂತನನ್ನು ತನ್ನ ಅಣ್ಣನಿ ಗಿಂತಲೂ ಅಧಿಕವಾಗಿ ಪ್ರೀತಿಸುತ್ತಿದ್ದನು. ಜಯಚಂದ್ರ ವೀರಚಂದ್ರರಾದರೋ ಕಮಲಾಕಾಂತನನ್ನು ಪ್ರೀತಿಸುವುದಕ್ಕಿಂತಲೂ ಹೆಚ್ಚಾಗಿ ಆತನ ಐಶ್ವರ್ಯವನ್ನು ಪ್ರೀತಿಸುತ್ತಿದ್ದರು. ಅವರಿಬ್ಬರಿಗೂ ಹಣವು ಆವಾಗಸಿಕ್ಕುವುದೋ ಎಂಬು ದೊಂದೇ ಚಿಂತೆಯಾಗಿದ್ದಿತು. ಇಂತಹ ಸ್ವಭಾವದವರು ಕಮಲಾಕಾಂತನನ್ನು ಕಟ್ಟಿಕೊಂಡು ಮಾಡುವುದೇನು ? ಕಮಲಾಕಾಂತನು ಸಾಧ್ಯವಾದಷ್ಟು ಬೇಗನೆ ಸ್ವಾಮಿ ಪಾದಾರವಿಂದವನ್ನು ಸೇರುವುದೊಂದೇ ಅವರಿಗೆ ಬೇಕಾಗಿದ್ದುದು. ಅದಕ್ಕಾಗಿಯೇ ಅವರಿಬ್ಬರೂ ಕಂಡಕಂಡ ದೇವರಿಗೆಲ್ಲಾ ಮುಡುಪು ಕಟ್ಟಿಟ್ಟಿದ್ದರು. ಇದೆಲ್ಲವೂ ತಿಳಿಯದವರು ಮಾಡತಕ್ಕ ಕೆಲಸವಾಗಿರುವುದು. ಬಯಸಿದರೆ ಮಕ್ಕ ಳಾಗುವುದಿಲ್ಲ, ಬೇಡಿದರೆ ಹಣ ಸಿಕ್ಕುವುದಿಲ್ಲ. ಹಣ ಬರುವುದಕ್ಕೂ ಮಕ್ಕಳಾಗು ವುದಕ್ಕೂ ಹೆಚ್ಚಿನ ಪುಣ್ಯವನ್ನೇ ಮಾಡಿರಬೇಕು. ಇದಕ್ಕಾಗಿ ನಾವು ಎಷ್ಟೇ ಪ್ರಯತ್ನಪಟ್ಟರೂ ಪ್ರಯೋಜನವಾಗಲಾರದು. ನಾವು ಈ ಮಾತನ್ನು ಹೇಳಿದರೆ ಕೇಳುವವರಾರು ? ಮಕ್ಕಳಾಗಬೇಕೆಂದು ಕಂಡ ಕಂಡ ದೇವರಿಗೆ ಕೈಮುಗಿದವ ರನ್ನು ನಾವು ಎಷ್ಟೋ ನೋಡಿರುವೆವು. ಐಶ್ವರ್ಯವಂತರಾಗಬೇಕೆಂದು ಸ್ಥಳ ವನ್ನು ಜಲವನ್ನಾಗಿಯೂ, ಜಲವನ್ನು ಸ್ಥಳವನ್ನಾಗಿಯೂ ಮಾಡಿದ ಅನೇಕರನ್ನು ನಾವು ಕಣ್ಣಾರೆ ನೋಡಿರುವೆವು. ಪ್ರಯತ್ನವೊಂದು ಕಡೆಯಾದರೆ, ಫಲವೊಂದು ಕಡೆಯಾಗುವುದನ್ನು ನೋಡಿದರೆ ಪೌರುಷಕ್ಕೂ ಅದೃಷ್ಟಕ್ಕೂ ಮಹತ್ತಾದ ವ್ಯತ್ಯಾಸವಿರಬೇಕೆಂದು ತೋರುವುದು. ಪೌರುಷವಿದ್ದಲ್ಲಿ ಅದೃಷ್ಟವಿದೆಯೆಂದಾ ಗಲಿ, ಅದೃಷ್ಟದಲ್ಲಿ ಪೌರುಷಬೇಕೆಂದಾಗಲಿ ಸಿದ್ಧಾಂತ ಪಡಿಸುವುದು ಸಾಮಾನ್ಯರಿಗೆ ಸಾಧ್ಯವಲ್ಲ.

ಕಮಲಾಕಾಂತನು ಒಂದು ತಿಂಗಳಕಾಲದೊಳಗಾಗಿ ಜಯಚಂದ್ರ, ವೀರ ಚಂದ್ರರ ಮತ್ತು ಅವರ ಹೆಣ್ಣು ಹುಡುಗಿಯರ ಶೀಲ ಸ್ವಭಾವಗಳನ್ನು ನಡೆನುಡಿ ಗಳಿಂದ ಚೆನ್ನಾಗಿಯೂ ತಿಳಿದುಕೊಂಡನು, ಆದರೆ ಅದನ್ನು ಅರಲ್ಲಿಯೂ ಪ್ರಕಾಶ ಪಡಿಸಲಿಲ್ಲ.

ಒಂದು ದಿನ ಕಮಲಾಕಾಂತನು ಕೋಣೆಯಲ್ಲಿ ಕುಳಿತುಕೊಂಡು ತನ್ನ ಕೆಲಸ ವನ್ನು ಮಾಡಿಕೊಳ್ಳುತ್ತಿರುವಾಗ ಜಯಚಂದ್ರ ವೀರಚಂದ್ರರು ಹೂದೋಟದಲ್ಲಿ ತಿರುಗಾಡುತಿದ್ದರು. ಆಗ ವೀರಚಂದ್ರನು ಜಯಚಂದ್ರನನ್ನು ಕುರಿತು, " ಜಯ, ನಾವು ಇಲ್ಲಿಗೆ ಬಂದು ಒಂದು ತಿಂಗಳಾಯಿತು. ನಾವು ಇನ್ನು ವಿದ್ಯಾನಗರಕ್ಕೆ ತೆರ ಳುವ ಪ್ರಯತ್ನ ಮಾಡಬೇಕಲ್ಲವೇ ? " ಎಂದು ಕೇಳಿದನು.

ಜಯಚಂದ್ರ—ವೀರ, ನಾವು ಬಂದ ಹಾಗೆ ಹೊರಟುಹೋಗುವುದು ತರ ವಲ್ಲ. ನಾವು ಇಲ್ಲಿಗೆ ಬಂದುದಕ್ಕೆ ಏನಾದರೂ ಇತ್ಯರ್ಥಮಾಡಿ ಹೋಗುವುದೇ ಒಳ್ಳೆಯದು. ಈಗ ನೋಡು, ಮುದುಕನು ರೋಗಗ್ರಸ್ತನು. ಅವನು ಇಂದೋ ನಾಳೆಯೋ ಇಹಲೋಕವನ್ನು ಬಿಟ್ಟು ಹೋಗುವುದರಲ್ಲಿರುವನು. ಅವನು ಸಾಯು ವುದಕ್ಕೆ ಮೊದಲೇ ಮರಣಶಾಸನ ವೊಂದನ್ನು ಬರೆಯಿಸಿಡುವುದು ಒಳ್ಳೆಯ ದಲ್ಲವೇ ? ನಮ್ಮ ಮುದುಕನಿಗೂ ಅದೇ ಅಭಿಪ್ರಾಯವಿದ್ದಂತೆ ತೋರುವುದು. ಆತನು ನಮ್ಮನ್ನು ಕೇಳದೆ ಮರಣಶಾಸನವನ್ನು ಬರೆದಿಡಲಾರನು. ನಾವು ಇಷ್ಟು ದಿನಗಳು ಇಲ್ಲಿದ್ದು ಎಣ್ಣೆಬರುವಾಗ ಕಣ್ಣುಮುಚ್ಚಿಕೊಂಡ ಹಾಗಾಗಬಾರದು.

ವೀರಚಂದ್ರ—ಮುದುಕನು ಈ ಮಾತನ್ನು ಆಡುತ್ತಲೇ ಇರುವನು. ಅವನನ್ನು ಬಲಾತ್ಕಾರ ಪಡಿಸುವುದು ಸಾಧ್ಯವೇ ?

ಜಯಚಂದ್ರ—ಮುದುಕನ ಪ್ರಯತ್ನ ನೋಡಿದರೆ ಸಾವಕಾಶವಾಗಲಾರ ದೆಂದು ತೋರುವುದು. ಈಗ ನಾವು ದುಡುಕಬಾರದು. ಮುದುಕನು ಸೂಕ್ಷ್ಮ ದೃಷ್ಟಿಯುಳ್ಳವನು.

ವೀರಚಂದ್ರ—ಅಯ್ಯಾ ಜಯಚಂದ್ರ ! ನಿನಗೆ ಮತ್ತೊಂದು ಗುಟ್ಟಿನ ಸಂಗತಿಯನ್ನು ತಿಳಿಸುವೆನು, ಕೇಳು. ಮುದುಕನು ಮೊನ್ನೆಯ ದಿನ ನಮ್ಮ ಸಂಪತ್ತು ಕಳೆದುಹೋದ ವಿಚಾರದಲ್ಲಿ ಕೆಲವು ಪ್ರಶ್ನೆಗಳನ್ನು ಮಾಡಿದನು. ನಾನು ಗುಟ್ಟುಬಿಡದೆ ಸಂಪತ್ತಿಯು ಹೋಗುವುದಕ್ಕೆ ನಿಮ್ಮ ತಂಗೆಯರೇ ಮೂಲ ಕಾರಣವೆಂದು ಹೇಳಿಬಿಟ್ಟೆನು. ಆತನು ಅಯ್ಯೋ, ಪಾಪ ! ಎಂದು ಸಂಕಟ ಪಟ್ಟುಕೊಂಡು ಸುಮ್ಮನಾದನು.

ಜಯ—ಒಳ್ಳೆಯ ಕೆಲಸ ಮಾಡಿದೆ. ನೀನು ಹಾಗೆ ಹೇಳಿದುದೇ ಒಳ್ಳೆಯದಾಯಿತು.

ವೀರ—ಈ ದಡ್ಡನಾದ ಮುದುಕನ ಕಣ್ಣಿಗೆ ಮಣ್ಣೆರಚುವುದು ಅದೊಂದು ಕಷ್ಟದ ವಿಷಯವೇ! ಇಂತಹ ಎಷ್ಟೋ ಮಂದಿ ಮುದುಕರು ನನ್ನ ಕೌಂಕುಳಲ್ಲಿ ತೂರಿಹೋಗಿದ್ದಾರೆ. ನನ್ನ ಚಮತ್ಕಾರಗಳೇ ಬೇರೆ, ನನ್ನ ಮೋಸದ ಪರಿಪಾಟಿಯೇ ಒಂದು ಬಗೆ. ಅದನ್ನು ಭೇದಿಸುವುದಕ್ಕೆ ಮುಕ್ಕಣ್ಣನಿಗೂ ಅಸದಳವು.

ಜಯ—ಮುದುಕನು ಮದ್ದು ಮದ್ದಾಗಿ ಕಾಣಿಸುವನು. ಅವನಲ್ಲಿ ಬುದ್ಧಿಮಂತಿಕೆಯೇ ಕಂಡುಬರುವುದಿಲ್ಲ. ಹಣವನ್ನು ಸಂಪಾದಿಸುವುದೇ ಬೇರೆ, ಬುದ್ಧಿಯ ಶಕ್ತಿಯೇ ಬೇರೆ, ಎಲ್ಲರಲ್ಲಿಯೂ ಒಂದೇ ಸಮವಾದ ಬುದ್ಧಿಯು ಹೇಗೆ ತಾನೇ ಇದ್ದೀತು? ಇದೆಲ್ಲಾ ಹಾಗಿರಲಿ, ಈ ಮುದಿಗೂಬೆಯ ಬಳಿಯಲ್ಲಿ ಎಷ್ಟು ಐಶ್ವರ್ಯವಿರಬಹುದು? ಜನರಾದರೋ ಈತನನ್ನು ಕೋಟೀಶ್ವರನೆಂದು ಹೇಳುತ್ತಿರುವರು. ಇದು ನಿಜವಿರಬಹುದೇ?

ವೀರ—ಗುಟ್ಟಿನ ಮುದುಕ. ಈತನಲ್ಲಿ ಅಷ್ಟು ಹಣವಿದ್ದರೂ ಇರಬಹುದು. ನನಗೆ ಅದರಲ್ಲಿ ಮೂವತ್ತು ಲಕ್ಷಕ್ಕೆ ಕಡಿಮೆಯಿಲ್ಲದೆ ಪಾಲು ಬರಬೇಕಾಗುವುದು. ಜಯ, ನೀನು ಏನ ಹೇಳುವೆ?

ಜಯ—ನನಗೆ ಇಪ್ಪತ್ತು ಲಕ್ಷವಾದರೂ ಸಲ್ಲಬೇಕು. ಉಳಿದುದೆಲ್ಲವೂ ಮಧುಸೂದನನಿಗಲ್ಲದೆ ಮತ್ತಾರಿಗೆ ಸೇರತಕ್ಕುದಾಗಿರುವುದು? ನಮ್ಮಗಳನ್ನು ಬಿಟ್ಟರೆ ಇತರರಿಗೆ ಏನು ಸಂಬಂಧವಿದೆ?

ವೀರ—ಜಯ, ನೀನು ಹೇಳುವುದು ನಿಜ. ನಮ್ಮನ್ನು ಬಿಟ್ಟರೆ ಇತರರಿಗೆ ಏನು ಸಂಬಂಧವಿದೆ? ಮುದುಕನು ಇತರರಾರಿಗೂ ಹಣಕಾಸು ಕೊಡತಕ್ಕವನಲ್ಲ. ನಮ್ಮನ್ನು ಇಲ್ಲಿಯೇ ಇರಹೇಳಿ ಚೌಧುರಿಯನ್ನು ಬೇಗನೆ ಕಳುಹಿಸಿಕೊಟ್ಟುದೊಂದೇ ಸಾಲದೇ!

ಜಯ—ವೀರಚಂದ್ರ, ಈತನ ಆಸ್ತಿಯಲ್ಲಿ ಮಧುಸೂದನನಿಗೆ ಒಂದು ಕವಡೆಯೂ ಸಲ್ಲುವುದಿಲ್ಲವೆಂದು ನನಗೆ ತೋರುವುದು. ಮುದುಕನು ಚೌಧುರಿಗೂ ಅವನ ಮಗಳಿಗೂ ಏನಾದರೂ ಕೊಟ್ಟಾನು. ಅವನಿಗೆ ಚೌಧುರಿಯಲ್ಲಿ ಕೊಂಚ ಮಟ್ಟಿಗೆ ಅಭಿಮಾನವಿರುವಂತೆ ತೋರಿಬರುವುದು. ಹಾಗೆ ಕೊಡುವುದಾದರೆ, ಕೊಟ್ಟುಕೊಂಡು ಹೋಗಲಿ, ನಾವೇತಕೆ ಅದಕ್ಕೆ ಅಡ್ಡಿಯಾಗಬೇಕು?

ವೀರ—ಚೌಧುರಿಗೆ ಸಿಕ್ಕುವುದೋ ಇಲ್ಲವೋ ಹೇಳುವುದಕ್ಕಾಗುವುದಿಲ್ಲ. ಆ ಮೂದೇವಿಯ ಮದುವೆಗೆ ಏನಾದರೂ ಕೊಡಬಹುದು.

ಜಯ—ಈಗ ಆವುದೂ ಸಿದ್ಧಾಂತವಾಗಿ ಹೇಳುವುದಕ್ಕಾಗುವುದಿಲ್ಲ. ಮುದುಕನು ಒಂದುಬಗೆಯ ವಕ್ರದ ಮನುಷ್ಯನು.

ಜಯಚಂದ್ರ ವೀರಚಂದ್ರರಿಬ್ಬರೂ ಈ ರೀತಿಯಾಗಿ ಮಾತನಾಡುತ್ತಿರುವಲ್ಲಿ ಹತ್ತಿರದಲ್ಲಿದ್ದ ಒಂದು ಮರದ ಮರೆಯಲ್ಲಿ ಸರಸರ ಎಂದು ಶಬ್ದವಾಯಿತು. ಇಬ್ಬರೂ ಆ ದಿಕ್ಕಿನ ಕಡೆ ನೋಡಿ ಚಕಿತರಾದರೂ ನರಿಗಿರಿ ಓಡಿಹೋಗಿರಬೇಕೆಂದು ಊಹಿಸಿಕೊಂಡು ಮನೆಯ ಕಡೆ ತಿರುಗಿದರು.

ಆಗ ಸೂರ್ಯನು ಕಣ್ಮರೆಯಾಗಿದ್ದನು. ಸಂಧ್ಯಾಕಾಲದ ಶೋಭಾರಾಶಿಯು ಗಗನ ಮಂಡಲವನ್ನಾವರಿಸಿ ನೋಡುವುದಕ್ಕೆ ಬಹು ರಮಣೀಯವಾಗಿದ್ದಿತು. ಈ ರಮಣೀಯತೆಯನ್ನು ನೋಡುವುದಕ್ಕೆ ಕಣ್ಣುಳ್ಳವರೆಲ್ಲರೂ ಬಯಸಿ ಬರುವ ಹಾಗೆ ಅಂಧಕಾರವೂ ಮೆಲ್ಲ ಮೆಲ್ಲನೆ ಬರಲಾರಂಭಿಸಿತು. ಕಡೆ ಕಡೆಗೆ ಕಗ್ಗತ್ತಲೆಯೇ ಎಲ್ಲೆಲ್ಲಿಯೂ ಆವರಿಸಿ ಬಿಟ್ಟಿತು.

ಜಯಚಂದ್ರ ವೀರಚಂದ್ರರು ಇನ್ನು ಕತ್ತಲೆಯಲ್ಲಿರುವುದು ಸರಿಯಲ್ಲವೆಂದು ಮನೆಯ ಕಡೆಗೆ ತಿರುಗಿದವರಾಗಿ ದಾರಿಯಲ್ಲಿ ಮತ್ತೆ ಮಾತಿಗಾರಂಭಿಸಿದರು.

ವೀರಚಂದ್ರ—ಜಯ, ನೀನು ಹೇಳಿದ ಮಾತೇನು? ಮುದುಕನು ಒಂದು ಬಗೆಯ ವಕ್ರದ ಮನುಷ್ಯನೆಂದಲ್ಲವೇ?

ಜಯಚಂದ್ರ—ಅಹುದು. ಮುದುಕನು ವಕ್ರನೂ ಅಹುದು, ಕಳ್ಳನೂ ಅಹುದು. ಅವನು ಕಳ್ಳತನದಿಂದಲೇ ಇಷ್ಟು ಸಂಪತ್ತನ್ನು ಸಂಪಾದಿಸಿದುದು. ಭಟ್ಟಾಚಾರ್ಯನನ್ನು ಕರೆಯಿಸಿಕೊಂಡಿರುವುದು ನೋಡಿದರೆ ಮರ್ಮವೆಲ್ಲವೂ ಗೊತ್ತಾಗುವುದು. ಇದೆಲ್ಲಾ ನಮಗೇಕೆ? ಮುದುಕನು ಕಳ್ಳತನದಿಂದಾಗಲಿ ಸುಳ್ಳುತನದಿಂದಾಗಲಿ ಹಣವನ್ನು ಸಂಪಾದಿಸಿಕೊಂಡು ಬಂದಿರುವನು. ನಮಗೆ ಬೇಕಾದುದು ಹಣ; ಇದು ಹೊರತು ನಮಗೆ ಇನ್ನೇನೂ ಬೇಕಿಲ್ಲ.

ವೀರ—ನಮಗೆ ಹಣವಲ್ಲದೆ ಇನ್ನೇನುಬೇಕು? ನಾನು ದೊಡ್ಡ ತಂಗೆಯ ಗಂಡನಾದುದರಿಂದ, ನನಗೆ ಸ್ಥಿರಚರ ಸ್ವತ್ತುಗಳಲ್ಲಿ ಹೆಚ್ಚಿನ ಭಾಗವೇ ಬರಬೇಕಾಗುವುದು. ನೀನು ಚಿಕ್ಕ ತಂಗೆಯ ಗಂಡನಾದುದರಿಂದ ನಿನಗೇನಾದರೂ ಕೊಂಚ ಸಿಕ್ಕುವುದು. ಮಧುಸೂದನನು ದುರ್ವ್ಯಾಪಾರದಲ್ಲಿ ಆಸಕ್ತನಾಗಿರುವುದರಿಂದ ಇದರಲ್ಲಿ ಅವನಿಗೆ ಏನೂ ಸಿಕ್ಕಲಾರದು. ಒಂದುವೇಳೆ ಏನಾದರೂ ಸಿಕ್ಕುವ

ಹಾಗಿದ್ದರೂ ನಾನು ಅದಕ್ಕೆ ಕಲ್ಲ ಹಾಕುವೆನು. ಈ ಹಣವು ಯೋಗ್ಯರಿಗಲ್ಲದೆ ಅಯೋಗ್ಯರಿಗೆಂದಿಗೂ ಸಲ್ಲತಕ್ಕುದಲ್ಲ.

ಜಯ—ವೀರಚಂದ್ರ, ಬಲು ಮಾತಿನಿಂದೇನು ಪ್ರಯೋಜನ? ಈ ಸಂಪತ್ತು ನನ್ನ ಕೈಯಲ್ಲಿರಬೇಕಾಗಿತ್ತು; ಆಗ ನಾನು ಇದರ ಸೊಗಸನ್ನು ತೋರಿಸುತ್ತಿದ್ದೆ.

ವೀರ—ಜಯ, ಈ ಮಾತು ಹಾಗಿರಲಿ. ಈಗಣ ಸಂದರ್ಭದಲ್ಲಿ ನನಗೇನೋ ಹೆದರಿಕೆಯಾಗುತ್ತಿರುವುದು.

ಜಯ—ಹೆದರಿಕೆಗೆ ಕಾರಣವೇನು?

ವೀರ—ನಾವು ಇಷ್ಟೆಲ್ಲಾ ಮಾತನಾಡುವೆವು. ಮರಣಶಾಸನವನ್ನು ಬರೆಯುವುದಕ್ಕಿಂತ ಮುಂಚೆ ಮುದುಕನೇ ಸತ್ತುಹೋದರೆ ನಮ್ಮ ಪರಿಣಾಮವೇನು? ಸಂಪತ್ತೆಲ್ಲವೂ ಉತ್ತರಾಧಿಕಾರಿಯಾದ ಮಧುಸೂದನನಿಗಲ್ಲವೇ ಸೇರುವುದು.

ಜಯ—ಅಹುದಯ್ಯಾ, ಅಹುದು. ಕಾಲಹರಣಕ್ಕೆ ಅವಕಾಶ ಕೊಡದೆ ಮರಣಶಾಸನವು ಈಗಳೇ ಆಗುವಂತೆ ಏರ್ಪಾಡು ಮಾಡಬೇಕು. ಮರಣಶಾಸನವು ಈಗಳೇ ಆಗಬೇಕೆಂಬುದಕ್ಕೆ ನಾನಾ ಯುಕ್ತಿಗಳನ್ನು ತಿಳಿಯ ಹೇಳಿ ಕೆಲಸವನ್ನು ಬೇಗನೆಯೇ ಆಗ ಮಾಡಿಸುವುದಕ್ಕಾಗುವುದಿಲ್ಲವೇ?

ವೀರ—ಆಗದೇ ಏನು? ಆದರೆ ಸ್ವಲ್ಪ ಶ್ರಮಪಡಬೇಕಾಗುವುದು. ಮೋಸವನ್ನರಿಯದ ಆ ಚೌಧುರಿಯನ್ನು ಇಲ್ಲಿಗೆ ಕರೆತಂದರೆ ಕೆಲಸವೆಲ್ಲವೂ ನಿರಾಯಾಸವಾಗಿ ನೆರವೇರಿ ಹೋಗುವುದು.

ಜಯ—ಹಾಗಾದರೆ ಅವನನ್ನು ಬರಮಾಡಿಕೊಳ್ಳುವ ಸನ್ನಾಹವನ್ನು ಮಾಡಬೇಕು.

ವೀರ—ಬೇರೆಯ ಉಪಾಯವಿಲ್ಲ. ಹುಲ್ಲು ತೋರಿಸಿದರಲ್ಲವೇ ಕತ್ತೆಯು ದಾರಿಗೆ ಬರುವುದು. ಇರಲಿ.

ಇಷ್ಟೆನ್ನುವುದರೊಳಗಾಗಿ ಮನೆಯು ಸಮೀಪಿಸಿತು. ಇಬ್ಬರೂ ಮಾತನ್ನು ನಿಲ್ಲಿಸಿ ಮನೆಯೊಳಗೆ ಪ್ರವೇಶಮಾಡಿ ಕಮಲಾಕಾಂತನನ್ನು ನೋಡಬೇಕೆಂದು ಯಜಮಾನನ ಕೋಣೆಗೆ ಬಂದರು. ಅಲ್ಲಿ ಯಜಮಾನನು ಇರಲಿಲ್ಲ. ಯಜಮಾನನು ಜಯಚಂದ್ರ ವೀರಚಂದ್ರರಿಗೆ ಕಾಣಿಸಿ ಕೊಳ್ಳದಂತೆ ಮರೆಯಲ್ಲಿದ್ದು ಅವರ ಸಂಭಾಷಣೆಯೆಲ್ಲವನ್ನೂ ಕೇಳಿ ಬೇರೊಂದು ಕಡೆಯಿಂದ ಮನೆಗೆ ಬಂದು ಸೇರಿಕೊಂಡನು.

ಮರುದಿನ ಮಧ್ಯಾಹ್ನದ ಭೋಜನವಾದ ಮೇಲೆ ಕಮಲಾಕಾಂತನು ತಂಗಿಯರ ಗಂಡಂದಿರಿಬ್ಬರನ್ನೂ ತನ್ನ ಕೋಣೆಗೆ ಕರೆದುಕೊಂಡು ಹೋಗಿ ಅವರೊಡನೆ ಮಾತನಾಡುತ್ತಾ ಕುಳಿತನು. ಮಾತಿನ ಸಂದರ್ಭದಲ್ಲಿ ಕಮಲಾಕಾಂತನು ಅವರನ್ನು ಕುರಿತು, "ನೀವಿಬ್ಬರೂ ಒಂದು ತಿಂಗಳಿಂದಲೂ ಇಲ್ಲಿಯೇ ಇದ್ದುದದರಿಂದ ನಿಮ್ಮ ಶೀಲಸ್ವಭಾವಗಳೂ, ನಿಮ್ಮ ಪ್ರೀತಿ ವಿಶ್ವಾಸಗಳೂ ನನ್ನ ತಿಳಿವಿಗೆ ಬಂದಂತಾಯಿತು," ಎಂದನು.

ವೀರಚಂದ್ರ—ನಾನು ನಿಮ್ಮ ತಂಗೆಯ ಗಂಡನಲ್ಲವೇ? ಪ್ರೀತಿವಿಶ್ವಾಸಗಳನ್ನು ನಿಮ್ಮಲ್ಲಿಲ್ಲದೆ ಮತ್ತಾರಲ್ಲಿ ತೋರಿಸಲಾದೀತು?

ಜಯಚಂದ್ರ—ಸತ್ಯವಾದ ಮಾತು.

ಕಮಲಾಕಾಂತ—ಅದು ಹಾಗಿರಲಿ. ನನಗೆ ರೋಗವು ದಿನ ದಿನಕ್ಕೆ ಹೆಚ್ಚುತ್ತಿರುವುದು. ನಾನು ಈ ಸಂಕಟದಿಂದ ಆವಾಗ ಸಾಯುವೆನೋ!

ಜಯ—(ನಟನಂತೆ ನಿಟ್ಟುಸಿರನ್ನು ಬಿಡುತ್ತಾ) ರಾಯ ಮಹಾಶಯ, ತಾವು ಈ ಅಶ್ಲೀಲವಾದ ಮಾತನ್ನು ಎತ್ತಿ ಆಡಬಾರದು. ತಾವು ಚಿರಕಾಲ ಬದುಕಿರೋಣವಾಗಲಿ. ತಮ್ಮಿಂದ ಹತ್ತು ಮಂದಿಯಾದರೂ ಜೀವಿಸುತ್ತಿರುವರು.

ಕಮಲಾ—ನಾನೇನ ಮಾಡಲಿ, ಜಯಚಂದ್ರ! ಮರಣವು ಆರ ಆಧೀನವು? ಅದು ಆವಾಗ ಬರುವುದೋ ಬಲ್ಲವರಾರು? ನನಗಾದರೋ ಸಾಯುವೆನೆಂಬ ಹೆದರಿಕೆಯು ಹುಟ್ಟಿಹೋಗಿರುವುದು. ಆದುದರಿಂದ ನಾನು ಕೆಲಸಗಳನ್ನು ಮುಂದಾಗಿಯೇ ಅಣಿಮಾಡಿಡಬೇಕಾಗಿರುವುದು. ಇದಕ್ಕಾಗಿ ನಾನು ನನ್ನ ವಕೀಲನಿಗೆ ಕಾಗದ ಬರೆದಿರುವೆನು. ಅವನೂ ಇಷ್ಟರಲ್ಲಿಯೇ ಬರುವವನಾಗಿರುವನು. ನಿಮ್ಮೆಲ್ಲರನ್ನೂ ಇಟ್ಟುಕೊಂಡು ನಾನು ಮರಣಶಾಸನವನ್ನು ಬರೆದು ಮುಗಿಸಬೇಕೆಂದಿರುವೆನು. ನಾನು ಮರಣಶಾಸನವನ್ನು ಬರೆವುದಕ್ಕೆ ನನ್ನ ಸಂಪತ್ತು ಯೋಗ್ಯರಾದವರ ಕೈಗೆ ಸೇರಬೇಕೆಂಬುದೇ ಉದ್ದೇಶವು. ಅಯೋಗ್ಯರ ಕೈಯ್ಯಲ್ಲಿಟ್ಟ ಹಣವು ಹೆಸರ ಹೇಳತಕ್ಕುದಲ್ಲ. ಇದಕ್ಕಾಗಿ ನಾನು ಮೊದಲು ಮಧುಸೂದನನ ಯೋಗ್ಯತೆಯನ್ನು ತಿಳಿಯ ಬೇಕೆಂದಿರುವೆನು. ನೀವು ನನ್ನ ಮೇಲೆ ಕೃಪೆಗೆಯ್ದು ಪಕ್ಷಪಾತವಿಲ್ಲದ ಹಾಗೆ ಎಲ್ಲವನ್ನೂ ತಿಳಿಸುವಿರೆಂದು ನಂಬಿರುವೆನು.

ವೀರಚಂದ್ರ—ಪಕ್ಷಪಾತಮಾಡಲು ಕಾರಣವೇನಿರುವುದು? ಇಂತಹ ಸಂದರ್ಭಗಳಲ್ಲಿ ನಾವು ಮುಚ್ಚುಮರೆಮಾಡಿ ತಿಳಿಸಬೇಕಾದುದನ್ನು ತಿಳಿಸದೇ

ಹೋಗುವುದಾದರೆ ಕೆಲಸವೆಲ್ಲವೂ ಕಿಡುವುದೆಂಬುದನ್ನು ನಾವು ಕಾಣೆವೇ? ನೀವು ಕೇಳಿದ ಮೇಲೆ ನಾವು ಹೇಳಬೇಕಾದುದನ್ನು ಹೇಳಿಯೇ ತೀರಬೇಕು. ಮಧು ಸೂದನನು ತನ್ನ ಅಸದ್ವ್ಯವಹಾರದಿಂದ ತಂದೆ ತಾತಂದಿರ ಹೆಸರನ್ನು ನರಕ ಕೂಪದಲ್ಲಿ ಮುಳುಗಿಸಿಬಿಟ್ಟಿರುವನು. ಇದರಲ್ಲಿ ಅವ ಸಂದೇಹವೂ ಇಲ್ಲ. ಜಯ ಚಂದ್ರ! ನೀನು ಏನ ಹೇಳುವೆ?

ಜಯಚಂದ್ರ—ವೀರು ಮಹಾಶಯ, ನೀನು ಹೇಳಿದುದೆಲ್ಲವೂ ನಿಜವೇ ಸರಿ; ಇದರಲ್ಲಿ ಒಂದಕ್ಷರವಾದರೂ ಸುಳ್ಳಿಲ್ಲ. ಮಧುಸೂದನನ ಕೆಟ್ಟ ಚಾಳಿ ಯಿಂದ ನಮ್ಮ ಹೆಸರೆಲ್ಲವೂ ಕಳಂಕಿತವಾಗಿರುವುದು.

ಕಮಲಾ—ನೀವಿಬ್ಬರೂ ಹೇಳಿದುದೆಲ್ಲವೂ ನಿಜವೇ ಎಂದು ನಾನು ಒಪ್ಪಿ ಕೊಳ್ಳುವೆನು. ನಮ್ಮ ವಕೀಲಿನ ಕಾಗದದಿಂದ, ಮಧುಸೂದನನು ನಾನು ಕೊಟ್ಟ ಅಲ್ಪದ್ರವ್ಯದಿಂದ ವ್ಯಾಪಾರ ಮಾಡುತ್ತಿರುವನೆಂದೂ, ವ್ಯಾಪಾರದಲ್ಲಿ ದಿನ ದಿನಕ್ಕೆ ವೃದ್ಧಿಯುಂಟಾಗುತ್ತಿರುವುದೆಂದೂ, ಆತನ ಗುಪ್ತಪತ್ನಿಯಾದ ಚಂದ್ರವದನೆಯೆಂಬ ಸೂಳೆಯ ಮಗಳು ಸತ್ತು ಹೋದಳೆಂದೂ, ಅಂದು ಮೊದಲು ಮಧುವು ಪ್ರಾಯಶ್ಚಿತ್ತ ಮಾಡಿಕೊಂಡು ಶುದ್ಧನಾಗಿರುವನೆಂದೂ, ಆತನು ಇತರ ದುರ್ಗುಣಗಳೆಲ್ಲವನ್ನೂ ಬಿಟ್ಟು ಸುಗುಣಗಳ ಕಡೆಗೆ ತಿರುಗುತ್ತಿರುವನೆಂದೂ ತಿಳಿದುಬಂದಿದೆ. ಹುಡುಗರು ಬಾಲ್ಯ ದೋಷದಿಂದ ತಪ್ಪುಮಾಡುವರು ; ದೊಡ್ಡ ವರಾದ ಮೇಲೆಯೂ ಅದೇ ತಪ್ಪನ್ನೇ ಮಾಡುವರೆಂದು ಎಲ್ಲೆಡೆಗಳಲ್ಲಿಯೂ ಊಹಿ ಸುವುದಕ್ಕಾದೀತೇ? ಲೋಕದಲ್ಲಿ ಎಷ್ಟೋ ದುಷ್ಟರು ಸಾಧುಗಳಾಗಿರುವುದನ್ನು ನಾವು ಕೇಳುತ್ತಲೂ ನೋಡುತ್ತಲೂ ಇರುವೆವು. ಆದುದರಿಂದ ಮಧುಸೂದ ನನು ಈಗ ಕೆಟ್ಟವನೆಂದು ಅವನನ್ನು ಹಾಳುಮಾಡುವುದು ನಮಗೆ ತಕ್ಕುದಲ್ಲ.

ವೀರಚಂದ್ರ—ಸರಿ ಸರಿ, ತಾವು ಹೇಳುವುದೇ ಸರಿ; ನಾನು ಹೇಳು ವುದಕ್ಕೆ ಬಂದುದೂ ಅದೇ. ಕೆಟ್ಟವನೆಂದು ಅವನನ್ನು ದೂರ ತಳ್ಳದೇ ಅವ ನಿಗೆ ಜೀವನಕ್ಕೆ ಏನಾದರೂ ಕಲ್ಪಿಸಿ ಕೊಡಬೇಕೆಂಬುದೇ ನನ್ನ ಅಭಿಪ್ರಾಯವು.

ಜಯಚಂದ್ರ—ನಾನು ಹೇಳುವುದೇನೆಂದರೆ-ಅವನಿಗೆ ಏನಾದರೂ ಕೊಡು ವುದಾದರೆ, ಕೊಂಚವೇ ಕೊಡಬೇಕು. ಹೆಚ್ಚಾಗಿ ಕೊಡುವುದಾದರೆ ಅವನಿಗೆ ಉಪಕಾರ ಮಾಡುವುದಕ್ಕೆ ಬದಲಾಗಿ ಅಪಕಾರವೇ ಮಾಡಿದಂತಾಗುವುದು. ಲೋಕದಲ್ಲಿ ಹೆಚ್ಚಾಗಿ ಹಣವಿದ್ದೆಡೆಗಳಲ್ಲೆಲ್ಲಾ ಅಸಹ್ಯಕರವಾದ ದೋಷಗಳೇ ತಾವೇ ತಾವಾಗಿ ಮೆರೆಯುವುವು. ದಾರಿದ್ರ್ಯದಲ್ಲಿ ಅನೇಕ ದೋಷಗಳಿಗೆ ಆಸ್ಪದ ವಿಲ್ಲದಿರುವುದು ನಮ್ಮ ಅನುಭವದಲ್ಲಿಯೂ ಕಂಡುಬರುವುದು.

ಕಮಲಾ—ಮಧುಸೂದನನ ವಿಷಯವು ಒಂದು ಬಗೆಯಲ್ಲಿ ಇತ್ಯರ್ಥ ವಾದಹಾಗಾಯಿತು. ನನ್ನ ಷಡ್ಡಕನ ವಿಷಯವು ಆಲೋಚಿಸತಕ್ಕುದಿದೆ. ಆತನಿಗೆ ಏನೂ ಕೊಡದಿರುವುದು ಚೆನ್ನಾಗಿ ಕಾಣುವುದಿಲ್ಲ.

ವೀರ—ಗೋವಿಂದ ಚಂದ್ರ ಚೌಧುರಿಯು ಒಳ್ಳೆಯ ಸ್ವಭಾವದ ದೊಡ್ಡ ಮನುಷ್ಯನಾಗಿರುವನು.

ಜಯ—ಆತನು ಹಸುವಿನಂತಹ ಸಾಧು ಪ್ರಾಣಿ; ಆತನ ಸರಳಸ್ವಭಾವಕ್ಕೂ ಸಾಧುಪ್ರಕೃತಿಗೂ ನಾನು ಬಹಳವಾಗಿ ಪ್ರೀತಿಸುವೆನು. ಆತನಿಗೆ ಏನಾದರೂ ಕೊಟ್ಟೇ ಕೊಡಬೇಕು.

ವೀರ—ಚೌಧುರಿಯು ಇದ್ದಿದ್ದರಲ್ಲಿ ಪುಣ್ಯವಂತನಾಗಿಯೇ ಇರುವನು. ಆದುದರಿಂದ ಅವನಿಗೆ ಹಣದ ಆಸೆಯೂ ಅಷ್ಟಾಗಿ ಕಾಣುವುದಿಲ್ಲ. ಆತನಿಗೆ ಹಣ ಕೊಟ್ಟುದರಿಂದ ಸಂತೋಷವೂ ಇಲ್ಲ, ಕೊಡದುದರಿಂದ ವ್ಯಸನವೂ ಇಲ್ಲ. ಈ ವಿಚಾರದಲ್ಲಿ ನನ್ನ ಅಭಿಪ್ರಾಯವೇನೆಂದರೆ—ನಿರೀಹನಾದ ಚೌಧುರಿಗೆ ಹಣ ಕೊಡುವುದಕ್ಕಿಂತಲೂ ಆತನ ಮಗಳ ಮದುವೆಗೆಂದು ಏನಾದರೂ ಕೊಡುವುದಾದರೆ ನೋಡುವವರಿಗೂ ಚೆನ್ನಾಗಿರುವುದು, ಕೇಳುವವರಿಗೂ ಚೆನ್ನಾಗಿರುವುದು.

ಜಯ—ಇದೇ ಸರಿಯಾದ ಸಲಹೆ. ಮದುವೆಗಾಗಿ ಒಂದು ಸಾವಿರ ರೂಪಾಯಿಗಳು ಕೊಟ್ಟರೆ ಸಾಕು; ಒಂದು ವೇಳೆ ಎರಡು ಸಾವಿರ ಕೊಡುವುದಾದರೆ ತಲೆ ಮೀರಿದ ಉಪಕಾರವಾದ ಹಾಗಾಯ್ತು.

ಕಮಲಾ—ನಿಮ್ಮಗಳ ಸತ್ಪರಾಮರ್ಶದಿಂದ ನನಗೆ ಮಹೋಪಕಾರ ವಾಯಿತು. ಇದನ್ನು ಬಾಯಿಂದ ಹೇಳಿ ತೀರದು. ನಿಮಗಿಂತಲೂ ನನಗೆ ಸಮೀಪ ಬಂಧುಗಳಾರಿರುವರು? ನಿಮ್ಮ ಉಪಕಾರಕ್ಕೆ ತಕ್ಕ ಪ್ರತ್ಯುಪಕಾರವು ನನ್ನ ಮರಣಾನಂತರ ಗೊತ್ತಾದೀತು. ಈಗ ಬಾಯಿಂದ ಹೇಳಿ ಪ್ರಯೋಜನವಿಲ್ಲ.

"ಇದರಲ್ಲಿ ನಮ್ಮ ಉಪಕಾರವೇನಿರುವುದು? ಇದಕ್ಕೆ ತಕ್ಕ ಪ್ರತಿಫಲವು ತಮ್ಮ ಮರಣಾನಂತರದಲ್ಲಿ ಗೊತ್ತಾಗುವುದೆಂದು ತಾವು ಹೇಳೋಣವಾಯಿತು. ಶಿವಶಿವ! ತಾವು ಚಿರಕಾಲ ಜೀವವಂತರಾಗಿರಬೇಕು. ಅದರಿಂದ ನಮಗೆ ಪ್ರಯೋಜನವೇ ಹೊರತು ಆ ಮೇಲೆ ಏನಿರುವುದು?" ಎಂದು ಹೇಳಿ ವೀರಚಂದ್ರನು ಹೆಂಗುಸರಂತೆ ಗಳಗಳನೆ ಅಳತೊಡಗಿದನು. ಜಯಚಂದ್ರನು ಇದನ್ನು ನೋಡಿ ತಾನೂ ಮುಖಕ್ಕೆ ಬಟ್ಟೆಯನ್ನು ಹಾಕಿಕೊಂಡು ಅಳುವವನಂತೆ ನಟಿಸಿದನು. ರಾಯ ಮಹಾಶಯನು ಅವರಿಬ್ಬರನ್ನೂ ನೋಡಿ, "ಈಗ ನೀವಿಬ್ಬರೂ ನಿಮ್ಮ ನಿಮ್ಮ ಕೋ

ಣಗೆ ತೆರಳುವವರಾಗಿರಿ. ನಾನು ಕೊಂಚಹೊತ್ತಿನ ಮೇಲೆ ನಿಮ್ಮನ್ನು ಬಂದು ನೋಡುವೆನು," ಎಂದು ಹೇಳಿ ಜಯಚಂದ್ರ ವೀರಚಂದ್ರರನ್ನು ಕಳುಹಿಸಿಕೊಟ್ಟನು.

ಜಯಚಂದ್ರ ವೀರಚಂದ್ರರು ಹೊರಗೆ ಬಂದು ಒಬ್ಬರ ಮುಖವನು ಒಬ್ಬರು ನೋಡಿಕೊಂಡು ಕಿಲಕಿಲನೆ ನಕ್ಕರು. ಇವರಿಬ್ಬರ ಸಾಹಸಕಾರ್ಯಕೆ ಇವರಿಬ್ಬರೇ ಆನಂದ ಪಡುತ್ತಾ ತಮ್ಮ ತಮ್ಮ ಕೋಣೆಗಳಿಗೆ ತೆರಳಿದರು. ಕಮಲ ಕಾಂತನು ಇದೆಲ್ಲವನ್ನೂ ಬಾಗಿಲಕಿಂಡಿಯಿಂದ ನೋಡಿ ತಿಳಿದುಕೊಂಡು ಸುಮ ನಾದನು.

---

## ಹದಿಮೂರನೆಯ ವಿಲಾಸ

### ಮರಣ ಶಾಸನ

ಮತ್ತೊಂದು ತಿಂಗಳು ಕಳೆದು ಹೋಯಿತು. ವೀರಚಂದ್ರನು ಕಮಲಾ ಕಾಂತನ ಅಪ್ಪಣೆಯನ್ನು ಪಡೆದು ತನ್ನ ಮಕ್ಕಳನ್ನು ಕರೆದುಕೊಂಡು ವಿದ್ಯಾ ನಗರಕ್ಕೆ ಹೊರಟು ಹೋದನು. ಕಮಲಾಕಾಂತನೂ ರಾಯಪೇಟೆಗೆ ಬಂದು ಚೌಧುರಿಯ ಮನೆಯಲ್ಲಿ ವಾಸವಾಗಿದ್ದನು. ಒಂದು ವಾರದ ಮೇಲೆ ವಕೀಲು ಮಹಾಶಯನು ದೇವದುರ್ಗಕ್ಕೆ ಬರುವುದಾಗಿ ತಿಳಿದುಬರಲು, ಕಮಲಾಕಾಂತನು ಅವನನ್ನು ಕಂಡು ಮಾತನಾಡುವುದಕ್ಕಾಗಿ ದೇವದುರ್ಗಕ್ಕೆ ಬಂದನು. ಅಷ್ಟು ಹೊತ್ತಿಗೆ ವಕೀಲು ವಿಧುಭೂಷಣನು ದೇವದುರ್ಗಕ್ಕೆ ಬಂದಿದ್ದನು. ಕಮಲಾ ಕಾಂತನು ಆತನನ್ನು ಕಂಡೊಡನೆಯೇ ಮಧುಸೂದನನ ವಿಷಯವೇನೆಂದನು. ವಿಧುಭೂಷಣನು ಹೇಳಿದುದು:—ನಾನು ತಮ್ಮ ಅಪ್ಪಣೆಯ ಪ್ರಕಾರ ಮಧು ಸೂದನನ ನಡೆವಳಿಯನ್ನು ಪರೀಕ್ಷಿಸಲಾರಂಭಿಸಿದೆನು. ನಾಕು ಗುಟ್ಟಾಗಿ ಪರೀ ಕ್ಷಿಸುತ್ತಿದ್ದುದು ಅವನ ತಿಳಿವಿಗೆ ಬರಲಿಲ್ಲ. ಅವನು ತನ್ನ ಕೆಲಸವನ್ನು ಎಚ್ಚರಿಕೆ ಯಿಂದ ನಡೆಯಿಸುತ್ತಿರುವನು. ಅವನ ವ್ಯಾಪಾರವು ದಿನದಿನಕ್ಕೆ ವೃದ್ಧಿಯಾಗು ತ್ತಿರುವಂತೆ ತೋರುವುದು. ಆತನ ಸ್ವಭಾವದಲ್ಲಿ ಪರಿವರ್ತನೆಯುಂಟಾಗುತ್ತಿರುವು ದನ್ನು ನೋಡಿ ದೊಡ್ಡಮನುಷ್ಯರು ಆತನಲ್ಲಿಗೆ ಬಂದು ಹೋಗುತ್ತಿರುವರು. ಈಚೀಚೆಗೆ ಅವನನ್ನು ಆರೂ ತಿರಸ್ಕರಿಸುವಂತೆ ಕಂಡು ಬರುವುದಿಲ್ಲ. ಅವನು ಒಂದು ಸಣ್ಣ ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಹೆಚ್ಚಿನ ವೆಚ್ಚಕ್ಕೆ ಹೋಗದೆ ಗೌರವದಿಂದ ಜೀವನ ಮಾಡಿಕೊಂಡಿರುವನು. ಈ ತೆರನಾದ ವ್ಯವಹಾರ ದಿಂದ ಮಧುಸೂದನನು ಮುಂದೆ ಯೋಗ್ಯನಾಗಬಹುದೆಂದು ತೋರುವುದು."

ಕಮಲಾಕಾಂತ—ಇದು ಒಳ್ಳೆಯ ವಿಷಯವೇ ಸರಿ ಸಂಪತ್ತನ್ನು ಪಡೆದುಕೊಳ್ಳುವುದಕ್ಕಾಗಿ ಹೀಗೆ ನಡೆಯುತ್ತಿರುವುದೂ ಸರಿಯಾದ ವಿಷಯವೇ ಸರಿ. ಇದರಿಂದಲಾದರೂ ಕೆಟ್ಟನಡತೆಯು ಮಾರ್ಪಡುವ ಸಂಭವವುಂಟು. ಇದಂತಿರಲಿ. ಆತನ ಹೆಂಡಿತಿಯು ಸತ್ತ ಸಮಾಚಾರವೇನು ?

ವಿಧುಭೂಷಣ—ಆಕೆಯು ಸತ್ತ ಸಮಾಚಾರ ನನ್ನ ಕಿವಿಗೆ ಬಿದ್ದೊಡನೆಯೇ ನಾನು ಆಕೆ ಆವ ಸ್ಥಳದಲ್ಲಿ ರೋಗಪೀಡಿತೆಯಾಗಿದ್ದಳೋ ಅಲ್ಲಿಗೆ ಜನರನ್ನು ಕಳುಹಿಸಿದ್ದೆನು. ಆಕೆಯು ಸತ್ತುದು ನಿಜವೆಂದು ತಿಳಿದುಬಂದಿದೆ. ಇಷ್ಟೇ ಅಲ್ಲದೆ ಆಕೆಗೆ ಆವ ವೈದ್ಯನು ಚಿಕಿತ್ಸೆಮಾಡುತಿದ್ದನೋ, ಅವನನ್ನೂ ಕೇಳಿ ನೋಡಿದೆನು. ಆಕೆಯು ಜ್ವರದಿಂದ ಮಡಿದಳೆಂದು ಗೊತ್ತಾಯಿತು. ಮಧುಸೂದನನೇ ಆಕೆಯ ಸತ್ಕಾರಕ್ಕೆ ಹಣವನ್ನು ಕೊಟ್ಟನೆಂದು ತಿಳಿದುಬಂದಿದೆ. ಅಂದಿನಿಂದ ನಾನು ಅವನ ವಿಷಯದಲ್ಲಿ ಆವ ಕೆಟ್ಟ ಸುದ್ದಿಯನ್ನೂ ಕೇಳಿಲ್ಲ. ಈ ಕಾರಣದಿಂದ ಮುಂದಣ ಕಾರ್ಯವನ್ನು ಊಹಿಸುವುದಾದರೆ, ಅವನು ಗುಣವಂತನಾಗಬಹುದು.

ಕಮಲಾ—ಆಕೆಯು ಸತ್ತು ಎಷ್ಟು ದಿನಗಳಾದುವು ?

ವಿಧು—ನಾನು ಹೋದ ಸಲ ಇಲ್ಲಿಗೆ ಬಂದಿದ್ದೆನಲ್ಲಾ, ಅದಕ್ಕೂ ಕೆಲವು ದಿನಗಳು ಹಿಂದೆಯೇ ಸತ್ತುದು. ಆಕೆಯು ಸತ್ತ ಒಂದು ತಿಂಗಳ ಮೇಲೆ ಮಧುಸೂದನನು ಪ್ರಾಯಶ್ಚಿತ್ತರೂಪವಾಗಿ ಚಾಂದ್ರಾಯಣ ವ್ರತವನ್ನೂ ಆಚರಿಸಿದನೆಂದು ಕೇಳಿದೆನು. ನಾನು ಕಂಡು ಕೇಳಿದುದೆಲ್ಲವನ್ನೂ ತಮಗೆ ಪತ್ರಮುಖದಿಂದ ಮೊದಲೇ ತಿಳಿಯಪಡಿಸಿಕೊಂಡಿರುವೆನು.

ಕಮಲಾ—ಈ ವಿಚಾರವದಂತಿರಲಿ. ನಾನು ತಮ್ಮೊಡನೆ ಮತ್ತೊಂದು ಗುರುತರವಾದ ವಿಷಯವನ್ನು ಜಿಜ್ಞಾಸಿಸಬೇಕೆಂದು ಇಷ್ಟಪಡುತ್ತಿರುವೆನು. ಅದು ಈ ರೀತಿಯಾಗಿರುವುದು ;—ನಾನು ಪ್ರಬಲವಾದ ರೋಗದಿಂದ ದಿನದಿನಕ್ಕೆ ಕಂದಿಕುಂದಿ ಹೋಗುತ್ತಿರುವುದು ನಿಮಗೆ ತಿಳಿಯದ ಸಂಗತಿಯೇನೂ ಅಲ್ಲ. ನನಗೆ ಆವಾಗ ಪ್ರಾಣಹೋಗುವುದೋ ಅದೂ ತಿಳಿಯಲಸಾಧ್ಯವು. ನಾನು ಈ ರೋಗದಲ್ಲಿ ಇಷ್ಟು ದಿನ ಬದುಕಿದ್ದುದೇ ನನ್ನ ಪುಣ್ಯೋದಯವೆಂದು ಹೇಳಬೇಕು. ಈ ಪುಣ್ಯೋದಯದ ಬಲದಿಂದಲೇ ನಾನು ಜನ್ಮಭೂಮಿಯನ್ನೂ ಸ್ವಜನರನ್ನೂ ನೋಡುವ ಅದೃಷ್ಟವನ್ನು ಪಡೆದುದು. ನಾನು ವಿದ್ಯಾನಗರಕ್ಕೆ ಬಂದ

ಮೇಲೆ ಕೆಲಗಾಲದ ವರೆಗೂ ನಾಮರೂಪಗಳನ್ನು ಮಾರ್ಪಡಿಸಿಕೊಂಡು ತಿರುಗಾಡು ತಿದ್ದುದು ತಮಗೆ ಜ್ಞಾಪಕದಲ್ಲಿರಬಹುದು. ನಾನು ಆ ವೇಷದ ಬಲದಿಂದ ನಮ್ಮ ಜನರ ಶೀಲಸ್ವಭಾವಗಳನ್ನು ಚೆನ್ನಾಗಿ ಪರಿಶೋಧಿಸುವುದಕ್ಕೆ ತುಂಬಾ ಅನುಕೂಲತೆ ಯುಂಟಾಯಿತು. ನಮ್ಮ ಬಂಧುಬಾಂಧವರು ನನ್ನ ವಿಷಯದಲ್ಲಿ ತೋರ್ಪಡಿ ಸುವ ಕೃತ್ರಿಮ ಸ್ನೇಹವೂ ಕಪಟಭಕ್ತಿಯೂ ಗೊತ್ತಿಗೆ ಬಂದುವು. ನನಗೆ ಉತ್ತ ರಾಧಿಕಾರಿಯಾಗಬೇಕಾಗಿದ್ದ ಮಧುಸೂದನನ ಯೋಗ್ಯತೆಯನ್ನೂ ಪರೀಕ್ಷಿಸಿ ತಿಳಿದುಕೊಂಡೆನು. ಈಗ ನಾನು ಮರಣಶಾಸನವನ್ನು ಬರೆವುದೊಂದೇ ಉಳಿದಿ ರುವುದು. ಈ ಕ್ಷಣದಲ್ಲಿಯೇ ಬರೆಯುವ ಕೆಲಸವು ನಡೆಯತಕ್ಕುದು. ನಾನು ಬರೆಯತಕ್ಕ ವಿಷಯುವನ್ನು ಸೂಚಿಸುವೆನು, ತಾವು ಕೃಪೆಯಿಟ್ಟು ಬರೆಯೋಣ ವಾಗಲಿ.

ವಕೀಲು ವಿಧುಭೂಷಣನು ಬರವಣಿಗೆಯ ಸಾಮಗ್ರಿಯೆಲ್ಲವನ್ನೂ ಸಿದ್ಧಪಡಿ ಸಿಟ್ಟುಕೊಂಡು ಕುಳಿತನು. ಕಮಲಾಕಾಂತರಾಯನು ಕೊಂಚಹೊತ್ತು ಆಲೋ ಚಿಸಿದ ಬಳಿಕ ಹೇಳತೊಡಗಿದನು. ಅದೆಂತೆನೆ :—

"ನನ್ನ ತಂಗೆಯರ ಗಂಡಂದಿರಾದ ವೀರಚಂದ್ರ ಘೋಷ ಮತ್ತು ಜಯ ಚಂದ್ರವಸು, ಇವರಿಬ್ಬರಿಗೂ ನನ್ನ ಸಂಪತ್ತಿನಲ್ಲಿ ಕೊಂಚವಾಗಿಯಾದರೂ ಸಲ್ಲ ತಕ್ಕುದು ಉಚಿತವಾಗಿಲ್ಲ. ಅವರಿಬ್ಬರೂ ದುರ್ವ್ಯಸನಿಗಳು, ಅಲ್ಲದೆಯೂ ಮಿತ ವ್ಯಯವೆಂಬುದನ್ನೇ ಅರಿಯದವರು. ಅವರ ಸಹವಾಸದಿಂದ ಉಳಿದವರು ದೋಷ ದೂಷಿತರಾಗಿ ಪಾಪಾತ್ಮರೆನಿಸುವರು. ಒಂದೊಂದು ವೇಳೆ ಕಲ್ಲಾದರೂ ಕರಗಿ ಕರಗಿ ನೀರಾಗಿ ಹರಿದು ಹೋಗಬಹುದು ; ಅವರ ಹೃದಯವಾದರೋ ಎಂದೂ ಕರಗಿದುದೇ ಅಲ್ಲ. ಅವರ ಹೊಟ್ಟೆಗಿಲ್ಲದ ಅಹಂಕಾರವನ್ನು ನೋಡಿದರೆ ನನ್ನ ಮೆಯ್ಯೆಲ್ಲವೂ ಉರಿದುರಿದು ಹೋಗುವುದು. ಅಕಟಕಟ ! ಅವರ ಸ್ವಾರ್ಥಪರತೆ ಯಾದರೋ ಎಂತಹ ಗ್ರಂಥಕಾರನಿಂದಲೂ ವರ್ಣಿಸಲಸದಳವು. ಅವರು ತಮ್ಮ ತಮ್ಮ ಮಕ್ಕಳಿಗೂ ಆ ದುಷ್ಟ ಸ್ವಭಾವವನ್ನೇ ಕಲಿಸುತ್ತಿರುವರು. ವೀರಚಂದ್ರ ಜಯಚಂದ್ರರ ಮಕ್ಕಳಲ್ಲಿ ಜಯಚಂದ್ರನ ಮಕ್ಕಳು ಯೋಗ್ಯರೆಂದೇ ಹೇಳಬೇಕು. ಇವರು ತಮ್ಮ ತಂದೆಯ ದುರ್ಗುಣವನ್ನು ಅವಲಂಬಿಸಿರಲಿಲ್ಲ. ನಾನು ಇವರ ಸ್ವಭಾವವೆಲ್ಲವನ್ನೂ ಪ್ರತ್ಯಕ್ಷವಾಗಿ ಪರೀಕ್ಷಿಸಿ ನೋಡಿರುವೆನು. ಆದುದರಿಂದ ಇವರಿವರ ಗುಣಕ್ಕೆ ತಕ್ಕ ಹಾಗೆ ಕೆಲಸ ಮಾಡಿ ತೋರಿಸಬೇಕೆಂದಿರುವೆನು. ವೀರ ಚಂದ್ರ ಜಯಚಂದ್ರರಾದರೋ ವಿಷದ ಹುಳುಗಳಾಗಿರುವರು. ಇವರು ಹಗಲಿ ನಲ್ಲಿ ಏಕಾಂತವಾಗಿ ಮಾತನಾಡಿದುದನ್ನೂ, ಇವರು ನನ್ನ ಪರೋಕ್ಷದಲ್ಲಿ ನಾನಾ ಮುಖ ಭಂಗಿಗಳಿಂದ ನನ್ನನ್ನು ಪರಿಹಾಸ ಮಾಡಿರುವುದನ್ನೂ, ಅಲ್ಲದೆ

ಇವರು ರಾತ್ರಿಯಲ್ಲಿ ಎಲ್ಲರೂ ಮಲಗಿದ ಮೇಲೆ ಹೆಂಡ ಕುಡಿದು ಭಂಡರಾಗಿ ಬಾಳು ತ್ತಿರುವುದನ್ನೂ ನಾನು ಕಣ್ಣಾರೆ ನೋಡಿಯೂ ಕಿವಿಯಾರೆ ಕೇಳಿಯೂ ಬೇಸತ್ತು ಸತ್ತು ಹೋಗಿರುವೆನು. ಇವರ ಬಹಿರಂಗದ ನಟನೆಯಾದರೋ ಹೇಳಿ ತೀರದು. ಆದುದರಿಂದ ಇವರಿಬ್ಬರಿಗೂ ನನ್ನ ಆಸ್ತಿಯಲ್ಲಿ ಒಂದು ಕವಡೆಯೂ ಸಿಕ್ಕ ಲಾರದು.

"ವೀರಚಂದ್ರನ ಹೆಣ್ಣುಮಕ್ಕಳನ್ನು ನೋಡಿದರೆ ನನಗೇ ಸಂಕಟವಾಗು ವುದು. ಅವರು ತಮ್ಮ ತಮ್ಮ ಗಂಡಂದಿರ ಮನೆಯಲ್ಲಿ ಸುಖವಾಗಿ ಬಾಳಿಕೊಂಡಿರ ಲಾರರೆಂದು ತೋರಿಬರುತ್ತಿರುವುದು. ತಿನ್ನುವುದಕ್ಕೆ ಮಾರ್ಗವಿಲ್ಲದಿದ್ದರೂ ಅವರ ಅಹಂಕಾರವು ಅವರ ತಲೆಯನ್ನೇ ತಿನ್ನುತ್ತಿರುವುದು. ಏನೂ ಅರಿಯದ ಪಸುಳೆಯಾದ ಸ್ವರ್ಣಕುಮಾರಿಯು ಇಲ್ಲಿಗೆ ಬಂದಿದ್ದಾಗ, ವೀರಚಂದ್ರನ ಹುಡು ಗಿಯರು ಅವಳ ವಿಷಯದಲ್ಲಿ ತೋರಿಸಿದ ಅವಾಚ್ಯವಾದ ತಿರಸ್ಕಾರವು ಇನ್ನೂ ನನ್ನ ಮರ್ಮವನ್ನು ಕತ್ತರಿಸುತ್ತಿರುವುದು. ನಾನು ಸ್ವರ್ಣಕುಮಾರಿಯನ್ನು ಪ್ರೀತಿಸುವೆನೆಂಬುದನ್ನು ಅವರು ತಿಳಿದ ಬಳಿಕ ಸ್ವರ್ಣಕುಮಾರಿಗೆ ತೋರಿಸುತಿದ್ದ ಬಹಿರಂಗದ ಪ್ರೀತಿಯನ್ನೂ ನಾನು ಮರೆತಿಲ್ಲ. ನಡೆನುಡಿಗಳನ್ನು ನೋಡಿದರೆ ಅವರಲ್ಲಿ ಸ್ತ್ರೀಲಕ್ಷಣವೇ ವಿಲೋಪಿಸುವುದರಲ್ಲಿದ್ದಿತೆಂದು ಹೇಳಬಹುದು. ಹೆಂಗು ಸಿಗೆ ನಾಚುಗೆಯೇ ಆಭರಣವು. ಅದಿಲ್ಲದ ಮೇಲೆ ಹೆಂಗುಸು ರಾಕ್ಷಸಿಯೇ ಸರಿ. ಹಾಗಾದರೆ ಈ ಹುಡುಗಿಯರಿಬ್ಬರೂ ನರರಾಕ್ಷಸಿಯರಾಗಿದ್ದರು. ಇವರ ವಿಷಯ ದಲ್ಲಿಯೂ ನನಗೆ ಅಪರಾಗವೇ ಉಂಟಾಗಿರುವುದಾದರೂ ಹೆಣ್ಣು ಮಕ್ಕಳ ವಿಷ ಯದಲ್ಲಿ ನನ್ನ ಮನವು ಮರುಗುತ್ತಿರುವುದು. ಇದಕ್ಕಾಗಿ ಇವರಿಬ್ಬರಲ್ಲಿ ಒಬ್ಬೊಬ್ಬರಿಗೂ ಹತ್ತುಸಾವಿರ ರೂಪಾಯಿಗಳನ್ನು ಕೊಡಬೇಕೆಂದಿರುವೆನು. ಈ ಹಣವು ಪೋಲಾಗದಂತೆ ಇರುವುದಕ್ಕೆ ತಕ್ಕ ಏರ್ಪಾಡು ಮಾಡಬೇಕು. ಇದರ ಮೇಲೆ ಅವರ ತಂದೆಗೆ ಆವ ಅಧಿಕಾರವೂ ಇರಕೂಡದು.

"ಜಯಚಂದ್ರನ ಮಕ್ಕಳು ಮೇಲೆ ಹೇಳಿದವರಿಗಿಂತಲೂ ಎಷ್ಟೋ ಸಾಧು ಗಳಾಗಿರುವರು. ಅವರ ಹೃದಯದಲ್ಲಿ ಮಾರ್ದವವಿದೆ, ದೇಹದಲ್ಲಿ ಕೋಮಲತೆ ಯಿದೆ, ಮಾತಿನಲ್ಲಿ ವಿನಯವಿದೆ. ಸ್ತ್ರೀಜನ ಸಾಧಾರಣವಾದ ನಾಚುಗೆಯು ಅವ ರಲ್ಲಿ ಇನ್ನೂ ಸೇರಿಕೊಂಡು ರೂಪವನ್ನು ಹೆಚ್ಚಿಸುತ್ತಿರುವುದು. ಇವರು ಸಂಸಾರ ಮಾಡುವುದರಲ್ಲಿ ಜಾಣೆಯರಾಗಿ ಕಾಣುವರು. ಇವರಲ್ಲಿ ಮನೆಹಾಳತನವು ಕಂಡು ಬರುವುದಿಲ್ಲ. ಹೀಗಿರುವುದರಿಂದ ಇವರಿಬ್ಬರಲ್ಲಿ ಒಬ್ಬೊಬ್ಬರಿಗೂ ಎಪತ್ತು ಸಾವಿರ ರೂಪಾಯಿಗಳನ್ನು ಕೊಡುವುದಾಗಿ ಸಂಕಲ್ಪ ಮಾಡಿರುವೆನು. ಈ ಮೊಬಲಗು

ಹಾಳಾಗಿ ಹೋಗದ ಹಾಗೂ, ಇದರ ಮೇಲೆ ಅವರ ತಂದೆಗೆ ಆವ ಅಧಿಕಾರವೂ ಇಲ್ಲದ ಹಾಗೂ ಕಟ್ಟುಮಾಡತಕ್ಕುದಿದೆ.

"ಈಗ ಮಧುಸೂದನನ ವಿಷಯವು ವಿಚಾರಕ್ಕೆ ತೆಗೆದುಕೊಳ್ಳಬೇಕಾಗಿದೆ. ಇವನು ಸರಕಾರವಾಡಿಗೆ ಬಂದ ತರುಣದಲ್ಲಿ ನನ್ನನ್ನು ನೋಡಿ ಸಿಡಿಮಿಡಿ ಗುಟ್ಟು ತ್ತಿದ್ದನು. ಬಳಿಕ ನನ್ನನ್ನು ಕಮಲಾಕಾಂತರಾಯನಿರಬಹುದೆಂದು ಹೇಗೋ ಗುರುತಿಸಿ ನನ್ನ ವಿಷಯದಲ್ಲಿ ವಿನೀತಭಾವವನ್ನು ತೋರಿಸುವುದಕ್ಕೆ ಮೊದಲು ಮಾಡಿದನು. ಅವನು ತನ್ನ ಸಂದೇಹವನ್ನು ನಿವೃತ್ತಿಮಾಡಿಕೊಳ್ಳುವುದಕ್ಕಾಗಿ ನನ್ನ ಕೋಣೆಗೆ ಬಂದು ನನ್ನ ಕಾಗದ ಪತ್ರವೆಲ್ಲವನ್ನೂ ನೋಡಿದನು. ಇದೂ ಹಾಗಿರಲಿ. ಇವನು ಗುಟ್ಟಾಗಿ ಸೂಳೆಯ ಮಗಳನ್ನು ಮದುವೆ ಮಾಡಿಕೊಂಡು, ಅವಳ ಮೋಹಾಗ್ನಿಯಲ್ಲಿ ತನ್ನ ಪಿತೃಪೈತಾಮಹ ಸಂಪತ್ತೆಲ್ಲವನ್ನೂ ನಿರ್ಬಾಧ ವಾಗಿ ಹೋಮಮಾಡಿಬಿಟ್ಟು ಮತ್ತೆ ಹಣವನ್ನು ಸಂಪಾದಿಸುವುದಕ್ಕಾಗಿ ಸ್ವರ್ಣ ಕುಮಾರಿಯನ್ನು ಮದುವೆಯಾಗಲು ತನ್ನ ಚಮತ್ಕಾರವೆಲ್ಲವನ್ನೂ ತೋರಿಸಲಾರಂ ಭಿಸಿದನು. ನಾನು ಇವನ ಹೆಂಡಿತಿಯನ್ನೂ ನೋಡಿದೆನು, ಇವರಿವರ ಸಂಭಾಷಣೆ ಯನ್ನೂ ಕೇಳಿದೆನು. ನನಗೆ ಗುಟ್ಟುಗೊತ್ತಾಯಿತೆಂದೋ, ಇಲ್ಲವೆ, ಮತ್ತಾವ ಕಾರಣದಿಂದಲೋ ಮಧುಸೂದನನು ಅಂದು ಮೊದಲು ನನ್ನಲ್ಲಿ ವಿನಯನಮ್ರ ನಾಗಿ ನಡೆದುಕೊಳ್ಳುತಿದ್ದನು. ನಾನು ಪರೀಕ್ಷಿಸಿ ನೋಡಿದ್ದರಲ್ಲಿ, ಇವನ ಸ್ವಭಾ ವವು ಭಯಂಕರವಾದುದು; ಇವನು ಆವ ಕೆಲಸ ಮಾಡುವುದಕ್ಕೂ ಹೇಸನು. ನೀವೇನೋ ಇವನು ಗುಣವಂತನಾಗುವನೆಂದು ಭರವಸೆಯಿಟ್ಟಿರುವಿರಿ. ನನಗೆ ಈತನಲ್ಲಿ ಕೊಂಚವೂ ನಂಬುಗೆಯೆಂಬುದೇ ಇಲ್ಲ. ಈತನು ದೊಡ್ಡವನಾದ ಮೇಲೆ ಅನೇಕ ಕೆಟ್ಟಕೆಲಸಗಳನ್ನುಮಾಡಿ ಪಡಬಾರದ ಸಂಕಟಕ್ಕೀಡಾಗುವನೆಂದು ನನಗೆ ಹೇಗೋ ತೋರುತ್ತಿರುವುದು. ಅದರ ಕಾರಣವನ್ನು ಈಗ ನಾನು ತಿಳಿಯ ಹೇಳ ಲಾರದವನಾಗಿರುವೆನು. ಅವನು ಮುಂದೆ ಬದುಕಲಿ, ಹಾಳಾಗಿ ಹೋಗಲಿ, ಅದನ್ನು ಕಟ್ಟಿಕೊಂಡು ನನಗಾಗುವುದೇನು? ಆದರೂ ಧರ್ಮದ ಮೇಲೆ ದೃಷ್ಟಿಯಿಟ್ಟು ಅವನಿಗೆ ಹಿಂದೆ ಕೊಟ್ಟುದು ಹೋಗಲಿಕ್ಕಾಗಿ ಇನ್ನೂ ಹತ್ತು ಸಾವಿರ ರೂಪಾಯಿ ಗಳನ್ನು ಕೊಟ್ಟು ಬಿಡುವೆನು. ಅವನು ಅದನ್ನು ಉಳಿಸಿದರೆ ಉಳಿಸಲಿ, ಇಲ್ಲ ವಾದರೆ ಹಾಳುಮಾಡಿಕೊಳ್ಳಲಿ; ಅದರ ವಿಚಾರವೇ ನನಗೆ ಬೇಡ. ನಾನು ಕೊಡುವ ಹಣವು ವ್ಯರ್ಥವಾಯಿತೆಂದೇ ತಿಳಿದು ಕೊಡುವೆನು.

"ನನ್ನ ಷಡ್ಡಕನಾದ ಚೌಧುರಿ ಮಹಾಶಯನು ವಾಸ್ತವಿಕವಾಗಿ ದೇವತಾ ಮನುಷ್ಯನು. ಅವನ ಸದಯಹೃದಯವೂ ಸರಳಸ್ವಭಾವವೂ ನಿರೀಹಲಕ್ಷಣವೂ ಪರದುಃಖದುಃಖಿತೆಯೂ ಮೃದು ಮಧುರಾಲಾಪವೂ ಮನುಷ್ಯನ ಸಾಧಾರಣ

ಗುಣಗಳಲ್ಲ. ಆವ ದೇವತೆಯೋ ಆತನ ರೂಪದಲ್ಲಿ ಅವತರಿಸಿರಬೇಕೆಂದು ಹೇಳುವುದಾದರೂ ಅತ್ಯುಕ್ತಿಯಾಗಲಾರದು. ನಾನು ಕಮಲಾಕಾಂತನೆಂದು ಹೇಳುವ ವರೆಗೂ ಚೌಧುರಿಗೆ ನಾನು ವಿದೇಶಿಯಾದ ವ್ರಜವಿಹಾರಿಲಾಲನಾಗಿಯೇ ಇದ್ದೆನು. ಅವನು ನಿರಾಶ್ರಯನಾದ ನನಗೆ ಒಂದು ದಿನವಾದರೂ ಅಸದ್ವ್ಯವಹಾರವನ್ನು ತೋರಿಸಿದ ಪ್ರಾಣಿಯೇ ಅಲ್ಲ. ಆತನ ಉಪಕಾರಕ್ಕೆ ಪ್ರತ್ಯುಪಕಾರ ಮಾಡಲು ನನಗೆ ಇಹಲೋಕದಲ್ಲಿ ಆವ ಸಾಮಗ್ರಿಯೂ ದೊರೆಯಲಾರದು. ನಾನು ಎಷ್ಟು ಜನ್ಮವೆತ್ತಿ ಸೇವಿಸಿದರೂ ಅವನ ಋಣವು ತೀರತಕ್ಕುದಲ್ಲ. ಚೌಧುರಿಯ ಮಗಳಾದ ಸ್ವರ್ಣಕುಮಾರಿಯಂತೂ ಸಾಕ್ಷಾತ್ತಾಗಿ ತ್ರಿಭುವನೇಶ್ವರಿಯಾದ ಅನ್ನಪೂರ್ಣಾದೇವಿಯೇ ಆಗಿರುವಳು. ನನಗೆ ಪ್ರಾಣದಾನಮಾಡಿದವಳೇ ಅವಳು. ನಾನು ರೋಗದಿಂದ ನರಳುತ್ತಿದ್ದಾಗ ನನ್ನನ್ನು ಹಗಲಿರುಳೂ ಸೇವೆಮಾಡುತ್ತಿದ್ದವಳೇ ಅವಳು. ನಾನು ರುಗ್ಣಾವಸ್ಥೆಯಲ್ಲಿದ್ದಾಗ ಪರೀಕ್ಷಿಸಲೋಸುಗ ಇಚ್ಛಾಪೂರ್ವಕವಾಗಿ ಕಿರಿಕಿರಿ ಮಾಡಿದೆನು, ಕಂಡಕಂಡವರನ್ನು ಬಾಯಿಗೆ ಬಂದಹಾಗೆ ಬೈದೆನು, ಹತ್ತಿರಕ್ಕೆ ಬಂದವರನ್ನು ಹೊಡೆದೆನು. ಸ್ವರ್ಣಕುಮಾರಿಯು ಇದೆಲ್ಲವನ್ನೂ ಸಹಿಸಿಕೊಂಡು ಪರಮ ವಿಶ್ವಾಸದಿಂದ ನನ್ನ ಸೇವೆಯಲ್ಲಿಯೇ ಇರುತಿದ್ದಳು. ಒಂದು ದಿನವಾದರೂ ಆಕೆಯು ಅತಿಥಿಸೇವಾ ಸತ್ಕಾರದಲ್ಲಿ ಸಿಡಿಮಿಡಿಗುಟ್ಟಿದವಳೇ ಅಲ್ಲ. ಕೆಟ್ಟ ಮಾತುಗಳನ್ನಾಡಿ ಇತರರ ಮನಸ್ಸಿಗೆ ವ್ಯಥೆಯುಂಟು ಮಾಡುವುದನ್ನು ಆಕೆಯು ಅರಿತ ಪ್ರಾಣಿಯೇ ಅಲ್ಲ. ಒಂದು ದಿನ ನಾನು ಅವಳ ಉಪಕಾರಕ್ಕೆ ಪ್ರತ್ಯುಪಕಾರವಾಗಿ ಅಮೂಲ್ಯರತ್ನಾಭರಣದ ಭರಣಿಯೊಂದನ್ನು ಕೊಡುವುದಕ್ಕೆ ಹೋದೆನು. ಅದನ್ನು ಕೈಯಿಂದಲೂ ಮುಟ್ಟದೆ, ತೆಗೆದುಕೊಳ್ಳುವುದಿಲ್ಲವೆಂದು ತಿರಸ್ಕಾರಮಾಡಿಬಿಟ್ಟಳು. ಇಂತಹ ದೇವತೆಯ ಕೈಯಲ್ಲಿ ಸಂಪತ್ತನ್ನು ಕೊಟ್ಟರೆ, ಅದೆಂದಿಗೂ ವ್ಯರ್ಥವಾಗಲಾರದು, ಹಾಗೂ ಅಪಾತ್ರದಲ್ಲಿ ವಿನಿಯೋಗ ಮಾಡಿದಂತೆಯೂ ಆಗುವುದಿಲ್ಲ. ಸ್ವರ್ಣಕುಮಾರಿಯು ದುರಾಶೆಯ ಪ್ರಕೃತಿಯವಳಲ್ಲವಾದುದರಿಂದ, ನಾನು ಆಕೆಯಲ್ಲಿ ಸಮರ್ಪಿಸುವ ಸಂಪತ್ತು ಸದ್ವ್ಯಾಪಾರದಲ್ಲಿಯೇ ಉಪಯೋಗಿಸಲ್ಪಡುವುದು. ಆದುದರಿಂದ ನಾನು ಕೃತಜ್ಞತಾಸೂಚಕವಾಗಿ ಚೌಧುರಿ ಮಹಾಶಯನಿಗೆ ಒಂದು ಲಕ್ಷ ರೂಪಾಯಿಯನ್ನು ಕೊಂಡತಕ್ಕವನಾಗಿರುವೆನು.

"ಮೇಲೆ ಹೇಳಿದಂತೆ ಇತರರಿಗೆ ಸಲ್ಲಬೇಕಾದುದನ್ನು ಸಲ್ಲಿಸಿ ಧರ್ಮಕಾರ್ಯಕ್ಕೂ ನನ್ನ ಉತ್ತರ ಕ್ರಿಯಾದಿಗಳಿಗೂ ವಿನಿಯೋಗವಾಗತಕ್ಕ ಮೊಬಲಗನ್ನೂ ಕಳೆದುಳಿವ ಚರಸ್ಥಿರಸ್ವತ್ತುಗಳೆಲ್ಲಾ ಸ್ವರ್ಣಕುಮಾರಿಗೆ ಸೇರತಕ್ಕುವುಗಳಾಗಿರುವುವು. ಸ್ವರ್ಣಕುಮಾರಿಯು ಪ್ರಾಪ್ತವಯಸ್ಕಳಾದ ಮೇಲೆ ನನ್ನ ಅತುಲಸಂಪತ್ತಿಗೂ ಸರ್ವಪ್ರಕಾರದಿಂದಲೂ ಉತ್ತರಾಧಿಕಾರಿಣಿಯಾಗುವಳು.

ಅಲ್ಲಿಯ ವರೆಗೂ ಚೌಧುರಿ ಮಹಾಶಯನು ಅದರ ರಕ್ಷಣಾವೇಕ್ಷಣೆಯನ್ನು ಮಾಡಿಕೊಂಡಿರತಕ್ಕುದು. ನನ್ನ ಮರಣಾನಂತರದಲ್ಲಿ ಸ್ವರ್ಣಕುಮಾರಿಯು ದೇವದುರ್ಗದಲ್ಲಿಯೇ ವಾಸವಾಗಿರತಕ್ಕುದು. ಆಕೆಯು ಪ್ರಾಪ್ತವಯಸ್ಕಳಾದ ಕೂಡಲೆ ವಿವಾಹ ಮಾಡಿಕೊಳ್ಳಬೇಕೆಂದು ನನ್ನ ಪೂರ್ಣಾಭಿಪ್ರಾಯವು. ಈ ವಿಚಾರವನ್ನು ಕುರಿತು ನಾನು ವಿಶೇಷವಾಗಿ ನಿರ್ಬಂಧಪಡಿಸತಕ್ಕವನಾಗಿರುವುದಿಲ್ಲ. ನನ್ನ ಮರಣಶಾಸನದಲ್ಲಿ ಕಂಡ ಅಂಶಗಳನ್ನೆಲ್ಲಾ ಯಥಾರೀತಿಯಾಗಿ ನೆರವೇರಿಸಲು ಚೌಧುರಿ ಮಹಾಶಯರೊಬ್ಬರೇ ಸಮರ್ಥರೆಂದು ನಾನು ತಿಳಿದು ಎಲ್ಲವನ್ನೂ ಅವರ ಅಧೀನ ಮಾಡುವೆನು. ನನ್ನ ಮರಣಶಾಸನದಲ್ಲಿ ಒಂದಕ್ಷರವೂ ಲೋಪವಾಗದಂತೆ ನನ್ನ ಉದ್ದೇಶವನ್ನು ನೆರವೇರಿಸಿದಲ್ಲಿ ನನಗೆ ಪರಲೋಕವಾಸದಲ್ಲಿ ಶಾಂತಿಯುಂಟಾಗುವುದು. ಇದೇ ನನ್ನ ಚರಮಪ್ರಾರ್ಥನೆ.

"ನನ್ನ ಉತ್ತರಕ್ರಿಯಾದಿಗಳಿಗೆ ಹೆಚ್ಚಾಗಿ ವೆಚ್ಚಮಾಡಬೇಕಾದುದೇನೂ ಇರುವುದಿಲ್ಲ. ಅದಕ್ಕಾಗಿ ನಾನು ಹತ್ತು ಸಾವಿರ ರೂಪಾಯಿಗಳನ್ನು ತೆಗೆದಿಡುವೆನು. ಇದನ್ನು ಕಾಲದೇಶಸಂದರ್ಭಾನುಗುಣವಾಗಿ ವೆಚ್ಚಮಾಡಬಹುದು. ಇದರಲ್ಲಿಯೂ ಉಳಿವುದಾದರೆ, ಅದೂ ಸ್ವರ್ಣಕುಮಾರಿಗೆ ಸೇರತಕ್ಕುದು.

"ನಮ್ಮ ದೇಶದಲ್ಲಿ ಜನರು ಅಜ್ಞಾನದ ಪ್ರಾಬಲ್ಯದಿಂದ ಅಪಾಮಾರ್ಗವನ್ನು ಹಿಡಿದು ಸ್ವಸ್ವಕರ್ಮತ್ಯಾಗಿಗಳಾಗಿ ದಾರಿದ್ರ್ಯದೋಷಕ್ಕೆ ಸಿಕ್ಕಿ ಪರಿಪರಿಯಾಗಿ ಸಂಕಟಪಡುತ್ತಿರುವರು. ಇದನ್ನು ಸಾಧ್ಯವಾದಷ್ಟು ಮಟ್ಟಿಗೆ ನಿವಾರಿಸುವುದಕ್ಕಾಗಿ ಸಿದ್ಧಸಾರಸ್ವತಾಶ್ರಮವನ್ನು ಕಲ್ಪಿಸಿ ಅದರಲ್ಲಿ ಶ್ರೀ ಸರಸ್ವತೀ ಪೀಠವೆಂಬ ಶ್ರೀಸರಸ್ವತೀ ದೇವಸ್ಥಾನವನ್ನು ಕಟ್ಟಿಸಿ, ಆಶ್ರಮ ವ್ಯಾಪಾರವನ್ನು ಆರು ಅಧಿಕರಣಗಳಾಗಿ ವಿಭಾಗಿಸತಕ್ಕುದು. ಅವಾವುವೆಂದರೆ:—

೧—ಗ್ರಂಥಾಧಿಕರಣ:—(ವಿವಿಧ ಗ್ರಂಥ ಭಾಂಡಾಗಾರ) ವಿವಿಧ ಭಾಷೆಗಳಲ್ಲಿರುವ ಗ್ರಂಥಗಳನ್ನು ಸಂಗ್ರಹಿಸಿ ಅವುಗಳಿಂದ ಜನರಿಗೆ ಪ್ರಯೋಜನವನ್ನುಂಟುಮಾಡಿಕೊಡುವುದು.

೨—ವಿದ್ಯಾಧಿಕರಣ:—(ಸದ್ಧರ್ಮ ಪಾಠಶಾಲಾ) ಚತುರ್ವಿಧ ಪುರುಷಾರ್ಥ ಪರಿಪೋಷಕವಾದ ಜ್ಞಾನವಿಜ್ಞಾನವನ್ನು ಪಡೆವುದಕ್ಕೆ ಸಂಸ್ಕೃತದಲ್ಲಿಯೂ ಸ್ವದೇಶಭಾಷೆಯಲ್ಲಿಯೂ ವಿದ್ಯಾಭ್ಯಾಸಮಾಡಿಸುವುದು.

೩—ಕಲಾಧಿಕರಣ:—(ಸಕಲ ಕಲಾಶಾಲಾ) ಸುಖಜೀವನಕ್ಕೆ ಮುಖ್ಯೋಪಾಯವಾದ ಕೃಷಿ ವಾಣಿಜ್ಯ ಕೈಗಾರಿಕೆ ಮುಂತಾದುವನ್ನು ಧರ್ಮಾವಿರೋಧವಾಗಿ ಕಲಿಸುವುದು.

೪—ರಕ್ಷಾಧಿಕರಣ:—(ದೀನಾನಾಥ ಜನಾಲಯ) ಅನಾಥರಾದ ಬಾಲಕ ಬಾಲಿಕಾಜನರಿಗೆ ಅನ್ನವಸ್ತ್ರಾದಿಗಳನ್ನಿತ್ತು ಅವರನ್ನು ದೇಶದ ಸತ್ಪ್ರಜೆಯನ್ನಾಗಿ ಮಾಡುವುದು.

೫—ಸೇವಾಧಿಕರಣ:—(ಧರ್ಮಸೇವಾ ಸಮಾಜ) ದೇಶಸೇವೆಗಾಗಿ ಪೂರ್ವಾ ಪರಪ್ರಯೋಗವನ್ನರಿತ ಸದ್ಧರ್ಮಪುರೋಹಿತರು ಮುಂತಾದವರಿಂದ ಸ್ವಧರ್ಮವು ವಿಲೋಪಿಸದಂತೆ ಮಾಡುವುದು.

೬—ಬೋಧಾಧಿಕರಣ:—(ಧರ್ಮಬೋಧಕ ಮಂಡಲಿ) ಅರ್ಹತ್ತಮರಿಗೆ ಪುರಾಣ ಹೇಳುವುದರಲ್ಲಿಯೂ, ಹರಿಕಥೆ ಮಾಡುವುದರಲ್ಲಿಯೂ, ಹೃದಯಂಗಮ ವಾಗಿ ಉಪನ್ಯಾಸ ಕೊಡುವುದರಲ್ಲಿಯೂ, ಪಾಠ ಪ್ರವಚನಗಳಲ್ಲಿಯೂ ಸಮುಚಿತ ವಾದ ಶಕ್ತಿಯನ್ನುಂಟುಮಾಡಿಸಿ, ಅವರಿಂದ ಧರ್ಮಪ್ರಸಾರಣ ಕಾರ್ಯಗಳು ಸುಮುಖವಾಗಿ ಆಗಿಂದಾಗ ನಡೆಯುವಂತೆ ಮಾಡುವುದು.

"ಮೇಲೆ ಹೇಳಿದ ಶ್ರೀ ಸರಸ್ವತೀ ಪೀಠರಚನೆಗಾಗಿ ಇಪ್ಪತ್ತು ಲಕ್ಷ ರೂಪಾ ಯಿಗಳು ಸಲ್ಲಿಸಲ್ಪಡುವುವು. ಇದರ ಉಜ್ಜೀವನಾರ್ಥವಾಗಿ ಸ್ವರ್ಣಕುಮಾರಿಯು ಆವಾಗಲೂ ಬದ್ಧ ಕಂಕಣೆಯಾಗಿಯೇ ಇರಬೇಕು. ಜ್ಞಾನ ಸಂಪಾದನೆಯ ನ್ನುಂಟು ಮಾಡಿಕೊಡುವುದಕ್ಕಿಂತಲೂ ಬೇರೆಯ ಧರ್ಮವು ಆವುದೂ ಜಗತ್ತಿ ನಲ್ಲಿಲ್ಲವಾದುದರಿಂದ, ಈ ಧರ್ಮೋದ್ಧಾರಕ್ಕಾಗಿಯೇ ಸ್ವರ್ಣಕುಮಾರಿಯು ಭೂಲೋಕದಲ್ಲಿ ಅವತರಿಸಿರುವಳು."

ಕಮಲಾಕಾಂತರಾಯನು ಈ ರೀತಿಯಾಗಿ ತನ್ನ ಅಭಿಪ್ರಾಯವನ್ನು ವಕೀಲ ನಾದ ವಿಧುಭೂಷಣ ಮಹಾಶಯನಿಗೆ ತಿಳಿಯ ಹೇಳಿದನು. ಇಷ್ಟೇ ಅಲ್ಲದೆ ಇನ್ನೂ ಅನೇಕ ಸಂಗತಿಗಳನ್ನೂ ತಿಳಿಯ ಪಡಿಸಿದನು. ಬಳಿಕ ಇದರಂತೆಯೇ ಒಂದು ಮರಣಶಾಸನವನ್ನು ಬರೆಯಬೇಕೆಂದು ಕಮಲಾಕಾಂತನು ಹೇಳಿ ಒಂದು ಕಾಗದ ದಲ್ಲಿ ತನ್ನ ಆಸ್ತಿಯ ವಿನಿಯೋಗದ ಕ್ರಮವನ್ನು ಬರೆದು ಕೊಟ್ಟನು.

ಒಂದು ಕೋಟಿ ರೂಪಾಯಿಗಳ ಆಸ್ತಿಯ ವಿನಿಯೋಗ.

| | | | | |
|---|---|---|---|---|
| ವೀರಚಂದ್ರನ ಇಬ್ಬರು ಹೆಣ್ಣು ಮಕ್ಕಳಿಗೂ | .... | .... | ರೂ. | ೨೦,೦೦೦ |
| ಜಯಚಂದ್ರನ ಇಬ್ಬರು ಹೆಣ್ಣು ಮಕ್ಕಳಿಗೂ | .... | .... | | ೪೦,೦೦೦ |
| ಮಧುಸೂದನ ರಾಯರಿಗೆ .... | .... | .... | | ೧೦,೦೦೦ |
| ಗೋವಿಂದಚಂದ್ರ ಚೌಧುರಿ ಮಹಾಶಯರಿಗೆ | .... | .... | | ೧,೦೦,೦೦೦ |

| | | | | |
|---|---|---|---|---|
| ಉತ್ತರ ಕ್ರಿಯಾದಿಗಳಿಗೆ | .... | .... | .... | ೧೦,೦೦೦ |
| ಧರ್ಮಕಾರ್ಯಕ್ಕೆ | .... | .... | .... | ೨೦,೦೦,೦೦೦ |
| ಶ್ರೀ ಸ್ವರ್ಣಕುಮಾರಿಗೆ | .... | .... | .... | |
| ದೇವದುರ್ಗ ಮತ್ತು ಇತರ ಸ್ಥಿರಸ್ವತ್ತುಗಳು | | | .... | ೧೯,೨೦,೦೦೦ |
| ನಗನಟ್ಟುಗಳೂ ಮತ್ತು ಇತರ ಪದಾರ್ಥಗಳೂ | | | .... | ೧೦,೦೦,೦೦೦ |
| ನಗದು ರೂಪಾಯಿಗಳು | .... | .... | .... | ೫೦,೦೦,೦೦೦ |
| ಒಟ್ಟು ಒಂದು ಕೋಟಿ ರೂಪಾಯಿಗಳು | | | | ೧,೦೦,೦೦,೦೦೦ |

ವಕೀಲು ವಿಧುಭೂಷಣ ಮಹಾಶಯನು ಒಂದೆರಡು ದಿನಗಳೊಳಗಾಗಿ ಮರಣಶಾಸನವನ್ನು ಬರೆದು ಮುಗಿಸಿದನು. ಅದಕ್ಕೆ ಕೆಲವು ಜನ ದೊಡ್ಡ ಮನುಷ್ಯರು ಸಾಕ್ಷಿಗಳಾಗಿ ಸ್ವಹಸ್ತಾಕ್ಷರಗಳನ್ನರ್ಪಿಸಿದರು. ಬಳಿಕ ಕಮಲಾಕಾಂತರಾಯನು ಅತಿವಿನಯದಿಂದ ಎಲ್ಲರನ್ನೂ ಕುರಿತು ತಾನು ಸಾಯುವ ವರೆಗೂ ಮರಣಶಾಸನವು ಗೋಪ್ಯವಾಗಿಡಲ್ಪಟ್ಟಿರಬೇಕೆಂದು ಬೆಸಗೊಂಡನು. ಎಲ್ಲರೂ ಶಪಥಪೂರ್ವಕವಾಗಿ ಒಪ್ಪಿಕೊಂಡರು. ಈ ಮರಣಶಾಸನದ ವಿಚಾರವು ಕಮಲಾಕಾಂತ, ವಿಧುಭೂಷಣ ಮತ್ತು ಸಾಕ್ಷಿಯಾಗಿದ್ದ ದೊಡ್ಡ ಮನುಷ್ಯರು, ಇವರು ಹೊರತಾಗಿ ಮತ್ತಾರಿಗೂ ಗೊತ್ತಾಗುವುದಕ್ಕೆ ಆಸ್ಪದವೇ ಆಗಲಿಲ್ಲ.

ವಿಧುಭೂಷಣನು ತನ್ನ ಕೆಲಸವನ್ನು ಸಾಂಗವಾಗಿ ನೆರವೇರಿಸಿಕೊಂಡು ವಿದ್ಯಾನಗರಕ್ಕೆ ಹೊರಟು ಹೋದನು. ಮರುದಿನ ಕಮಲಾಕಾಂತನು ಮರಣಶಾಸನವನ್ನು ತೆಗೆದುಕೊಂಡು ಸರಕಾರವಾಡಿಗೆ ಬಂದನು. ಆಗ ಚೌಧುರಿಯು ತನ್ನ ಕೋಣೆಯಲ್ಲಿ ಕುಳಿತುಕೊಂಡು ತನ್ನ ಕೆಲಸ ಮಾಡಿಕೊಳ್ಳುತಿದ್ದನು. ಕಮಲಾಕಾಂತನು ಅಲ್ಲಿಗೆ ಬಂದು ಬಾಗಿಲನ್ನು ಭದ್ರಪಡಿಸಿ ಚೌಧುರಿಯ ಬಳಿಯಲ್ಲಿ ಕುಳಿತು, "ಮಹಾಶಯ, ನಾನು ನಿಮ್ಮೊಡನೆ ಮಾತನಾಡಬೇಕಾಗಿ ಬಂದಿರುವೆನು. ನೀವು ಇದೆಲ್ಲವನ್ನೂ ಗೋಪ್ಯವಾಗಿಟ್ಟಿರಬೇಕು," ಎಂದನು. "ವಿಷಯವೇನು? ಗುಟ್ಟಾಗಿಟ್ಟಿರಬೇಕೆಂದು ಕೇಳುವುದೇನು?" ಎಂಬುದರ ಮರ್ಮವನ್ನೇ ಅರಿಯದೆ ಚೌಧುರಿಯು ಅಚ್ಚರಿಯಿಂದ ಕೂಡಿದವನಾಗಿ ಆದರದಿಂದ ಕೇಳುವುದಕ್ಕೆ ಸಿದ್ಧನಾಗಿ ಕುಳಿತನು.

ಕಮಲಾಕಾಂತನು ಹೇಳತೊಡಗಿದನು :—" ಮಹಾಶಯ, ನನ್ನ ಈ ಮರಣೋನ್ಮುಖವಾದ ಅವಸ್ಥೆಯಲ್ಲಿ ಆವ ಕರ್ತವ್ಯವು ಮಾಡಬೇಕಾಗಿ ಉಳಿದಿದ್ದುದೋ ಅದೂ ಈಗ ಮಾಡಿ ಮುಗಿಸಿದಂತಾಯಿತು. ಮರಣಶಾಸನ ಬರೆವುದು ಮಟ್ಟಿಗೆ ನನ್ನ ಕರ್ತವ್ಯಶೇಷವಾಗಿದ್ದಿತು; ನಾನು ಅದನ್ನು ನಿನ್ನೆಯ ದಿನವೇ ಬರೆದು ಮುಗಿಸಿದಂತಾಯಿತು. ನನ್ನನಂತರದಲ್ಲಿ ತಮ್ಮನ್ನು ಆ ಮರಣಶಾಸನದ ಸರ್ವಕಾರ್ಯನಿರ್ವಾಹಕರನ್ನಾಗಿ ನಿಯಮಿಸಿರುವೆನು. ನೀವು ನನ್ನ ಮರಣಶಾಸನವನ್ನು ಸಾವಧಾನವಾಗಿ ಓದಿ ನೋಡಬಹುದು; ಆದರೆ ಅದರಲ್ಲಿರತಕ್ಕುದನ್ನು ಕುರಿತು ಪ್ರತಿವಾದ ಮಾಡುವುದಕ್ಕೆ ನಿಮಗೆ ಆವ ಅಧಿಕಾರವೂ ಇರಲಾರದು. ನೀವು ಪೂರ್ವಾಪರ ವಿವೇಚನೆಯಿಲ್ಲದೆಯೇ ಈ ಕಾರ್ಯಭಾರವನ್ನು ವಹಿಸಬೇಕು, ಹಾಗೂ ನನ್ನ ಇಷ್ಟದಂತೆಯೇ ನೀವು ನನ್ನ ಮರಣಾದೇಶವನ್ನು ನೆರವೇರಿಸಬೇಕು. ನೀವು ಈ ರೀತಿ ನಡೆವುದಾಗಿ ಭರವಸೆ ಕೊಡುವುದಾದರೆ, ನಾನು ಜೀವಿತಶೇಷವನ್ನು ಸುಖದಿಂದ ಕಳೆಯುವೆನು." ರಾಯ ಮಹಾಶಯನು ಹೀಗೆ ಹೇಳಿ ತನ್ನ ಮರಣಶಾಸನದ ಪತ್ರವನ್ನು ಚೌಧುರಿಯ ಕೈಗೆ ಕೊಟ್ಟು ಹೊರಗೆ ಬಂದನು.

ಚೌಧುರಿಯು ಮರಣಶಾಸನವನ್ನು ಓದಿ ಮುಗಿಸಿದನು. ಬಳಿಕ ರಾಯ ಮಹಾಶಯನು ಮತ್ತೆ ಕೋಣೆಯೊಳಗೆ ಬಂದು ಕುಳಿತನು. ಚೌಧುರಿಯು ಕಂಪಿತಸ್ವರದಿಂದ, "ಪೂಜ್ಯಮಹಾಶಯ, ನೀವು ಹೀಗೆ ನಿರ್ಣಯಿಸುವಿರೆಂದು ನಾನು ಸ್ವಪ್ನದಲ್ಲಿಯೂ ಭಾವಿಸಿರಲಿಲ್ಲ. ಆದರೆ—," ಎನ್ನುವುದರೊಳಗಾಗಿ,

ಕಮಲಾಕಾಂತನು, "ನೀವು ಪ್ರತಿಯಾಗಿ ಮಾತನಾಡಕೂಡದೆಂದು ನಾನು ಮೊದಲೇ ತಿಳಿಸಿಕೊಳ್ಳಲಿಲ್ಲವೇ? ನೀವು ಅಸಮ್ಮತಿಯನ್ನು ತೋರ್ಪಡಿಸಲಾಗದು," ಎಂದನು.

ಚೌಧುರಿ—(ಅಪ್ರತಿಭನಾಗಿ) ತಮ್ಮ ಇಷ್ಟವಿದ್ದಂತೆ ಆಗಬಹುದು. ನಾನು ನಿಮ್ಮ ಆಜ್ಞಾಧಾರಕನೇ ಹೊರತು ಬೇರೆಯಲ್ಲ.

ಕಮಲಾಕಾಂತ—ಇದನ್ನು ನೀವು ನಿಮ್ಮ ಹುಡುಗಿಗೂ ತಿಳಿಸಕೂಡದು. ಒಂದು ವೇಳೆ ತಿಳಿಸಬೇಕಾದುದು ಆವಶ್ಯಕವೆಂದು ತೋರಿಬಂದರೆ, ನಾನೇ ತಿಳಿಸುವೆನು. ನಾನು ಈ ಮರಣಶಾಸನ ಪತ್ರವನ್ನು ನಿಮ್ಮಲ್ಲಿ ಗುಟ್ಟಾಗಿಟ್ಟು ಹೋಗುವುದಕ್ಕಾಗಿ ಬಂದಿರುವೆನು. ಈ ಪತ್ರವು ನಿಮ್ಮಲ್ಲಿಟ್ಟಿರುವುದೆಂಬುದರ ವಾಸನೆಯು ಕೂಡ ಇತರರಿಗೆ ತಿಳಿಯ ಕೂಡದು.

ಚೌಧುರಿ—ಇನ್ನೊಂದು ಮಾತ ಕೇಳತಕ್ಕುದಿದೆ. ಮರಣಪತ್ರದಲ್ಲಿ ಆವಾವುವೋ ಹೊಸ ಸಂಗತಿಗಳು ಕಂಡುಬರುತ್ತಿವೆ. ಅವುಗಳಾದರೂ ಏನು?

ಕಮಲಾ—ನಿಮ್ಮ ಅಭಿಪ್ರಾಯವು ಗೊತ್ತಾಯಿತು. ಮಧುಸೂದನನು ನಿಜವಾಗಿಯೂ ಮದುವೆಯಾದವನು. ಅವನು ಅತಿನೀಚನು, ಹೃದಯ ಹೀನನು. ಸರಳಬಾಲೆಯಾದ ನಿಮ್ಮ ಮಗಳ ಮನಸ್ಸನ್ನು ಅಪಹರಿಸುವುಕ್ಕಾಗಿ ಬಗೆಬಗೆಯ ಸುಳ್ಳುಗಳನ್ನು ಬಗುಳಿರುವನು. ಅವನ ದುರಾಚಾರದ ವಿಷಯದಲ್ಲಿ ನಾನು ತಿಳಿದುಕೊಂಡಿರುವುದೊಂದೂ ಸುಳ್ಳಲ್ಲ. ನಾನು ಇದೆಲ್ಲವನ್ನೂ ಚೆನ್ನಾಗಿ ಪರೀಕ್ಷೆ ಮಾಡಿಯೇ, ಅವನನ್ನು ಕೈಬಿಟ್ಟಿರುವೆನು.

ಚೌಧುರಿ—ನಿಮಗೆ ಇಷ್ಟರಲ್ಲಿಯೇ ಎಲ್ಲಾ ಆತ್ಮೀಯರ ಸ್ವಭಾವವು ತಿಳಿದು ಬಂದುದು ಹೇಗೆ? ನನಗೇನೋ ಆಶ್ಚರ್ಯವಾಗಿಯೇ ಕಂಡುಬರುತ್ತಿರುವುದು.

ಕಮಲಾ—ವಿಚಾರಿಸಿ ನೋಡಿದರೆ ಎಲ್ಲವೂ ಗೊತ್ತಾದೀತು. ಸೂಕ್ಷ್ಮವಾಗಿ ಪರಿಶೀಲಿಸಿ ನೋಡುವುದಾದರೆ, ಈ ಕಾರ್ಯಕಾರಣ ಪ್ರಪಂಚದಲ್ಲಿ ಜನರ ಯೋಗ್ಯತೆಯನ್ನರಿವುದು ಕಷ್ಟದ ವಿಷಯವೇ ಅಲ್ಲ. ಬೆಳ್ಳಗಿರುವುದೆಲ್ಲಾ ಹಾಲೆಂದು ನಂಬತಕ್ಕವರಿಗೆ ಆವುದೂ ಗೊತ್ತಾಗಲಾರದು. ಕಣ್ಣು ತೆರೆದು ನೋಡಬೇಕು; ಸುಮ್ಮನಿದ್ದರೆ ಆವುದೂ ಗೊತ್ತಿಗೆ ಬರಲಾರದು. ಮನುಷ್ಯನು ಮನುಷ್ಯನನ್ನು ಮೊದಮೊದಲು ನಂಬಲೇ ಬೇಕಾಗುವುದು. ಆದರೆ ಆ ನಂಬುಗೆಯಿಂದಲೇ ಮೈಮರೆತಿರಬಾರದು. ಮನಸ್ಸಿಗೆ ತೃಪ್ತಿಯಾಗುವ ವರೆಗೂ ಮನುಷ್ಯನನ್ನು ಪರೀಕ್ಷಿಸಿ ನೋಡಿ ಯೋಗ್ಯನೆಂದು ಕಂಡುಬರುವುದಾದರೆ ಅಂತಹವನನ್ನು ಸಹವಾಸಿಯನ್ನಾಗಿ ಮಾಡಿಕೊಳ್ಳಬಹುದು, ಇಲ್ಲವಾದರೆ ಸಾಧ್ಯವಾದಷ್ಟು ಬೇಗನೆಯೇ ಅಯೋಗ್ಯನಾದವನನ್ನು ದೂರಮಾಡಿಬಿಡಬೇಕು. ಲೋಕದಲ್ಲಿ ಜನರು ಜನರ ಸ್ವಭಾವನ್ನರಿಯದೆಯೇ ಅನೇಕ ಕಷ್ಟಗಳಿಗೆ ಸಿಕ್ಕಿ ಸಂಕಟಪಟ್ಟಿರುವರು. ನಾನು ಆರನ್ನೂ ಸಾಮಾನ್ಯವಾಗಿ ನಂಬತಕ್ಕವನಲ್ಲ. ಕಂಡ ಕಂಡವರನ್ನು ಪರೀಕ್ಷಿಸಿ ನೋಡುವುದೇ ನನ್ನ ಜನ್ಮವ್ರತವಾಗಿ ಹೋಗಿರುವುದು. ನಾನು ಅನೇಕ ಸ್ಥಳಗಳಲ್ಲಿ ಮೋಸಹೋಗಿಯೇ ಈ ಪಾಠವನ್ನು ಗಟ್ಟಿಮಾಡಿಟ್ಟುಕೊಂಡಿರುವೆನು. ನಿಮಗೆ ಈ ಪಾಠ ಕಲಿಯುವುದಕ್ಕೆ ಇನ್ನೂ ಹೊತ್ತು ಬಂದಿಲ್ಲವೆಂದು ತೋರುವುದು. ಎಲ್ಲರೂ ಇದನ್ನು ಕಲಿತುಕೊಂಡೇ ಲೋಕದಲ್ಲಿ ತಮ್ಮ ತಮ್ಮ ಮನುಷ್ಯತ್ವವನ್ನು ಉಳಿಸಿಕೊಳ್ಳಬೇಕಾಗಿರುವುದು. ಇತರರು ಎಷ್ಟೇ ಹೇಳಿಕೊಟ್ಟರೂ, ಈ ಪಾಠವು ತಲೆಗೆ ಹತ್ತುವುದೇ ಇಲ್ಲ; ಇದನ್ನು ಸ್ವಾನುಭವದಿಂದ ತಿಳಿಯ

ಬೇಕೇ ಹೊರತು ಪರಾನುಭವದಿಂದಲ್ಲ. ಆದುದರಿಂದ ನೀವೂ ಈ ಪಾಠವನ್ನು ಇಷ್ಟರಲ್ಲಿಯೇ ಕಲಿಯುವವರಾಗಿರುವಿರಿ. ನಿಮ್ಮಂತಹ ಅಕೃತ್ರಿಮ ಸ್ವಭಾವದವರಿಗೆ ಇದು ಅವಶ್ಯವಾಗಿಯೂ ಅಭ್ಯಾಸಮಾಡುವುದಕ್ಕೆ ತಕ್ಕುದು.

ಚೌಧುರಿ—ನೀವು ಹೇಳಿದುದೆಲ್ಲವೂ ಯುಕ್ತವಾಗಿಯೇ ಇರುವುದು. ಆದರೆ ಪ್ರಮಾಣವಿದ್ದರೂ ಪ್ರತ್ಯಕ್ಷಿಸಿ ನೋಡಬೇಕೆಂದು ಗಾದೆಯುಂಟು.

ಕಮಲಾಕಾಂತ—ನಿಮ್ಮ ಗಾದೆಯು ನನಗೂ ಗೊತ್ತುಂಟು. ನಾನು ಪ್ರತ್ಯಕ್ಷಿಸಿಲ್ಲವೆಂದು ನೀವು ಹೇಗೆ ಊಹಿಸುವಿರಿ? ನಿಮಗೆ ಇದರ ಮರ್ಮವಾವುದೂ ತಿಳಿಯದು. ಅದನ್ನು ಕೊಂಚಕಾಲದಲ್ಲಿ ನಿಮಗೆ ತಿಳಿಯ ಹೇಳುವುದೂ ಸಾಧ್ಯವಲ್ಲ. ಆದುದರಿಂದ ಆ ವಿಚಾರವಾಗಿ ನಾನು ನಿಮ್ಮೊಡನೆ ಜಿಜ್ಞಾಸೆ ಮಾಡುವುದಕ್ಕೆ ಅವಕಾಶವೂ ಇಲ್ಲ, ಅದಕ್ಕಾಗಿ ನಾನು ಬಂದವನೂ ಅಲ್ಲ. ನೀಚ ವಿಚಾರಗಳನ್ನೆತ್ತಿ ಉಲ್ಲೇಖಿಸುವುದು ಪ್ರಯೋಜನಕಾರಿಯಾಗುವುದಿಲ್ಲವಾದರೂ ಕ್ಲೇಶಕಾರಿಯಾಗುವುದರಲ್ಲಿ ಆವ ಸಂಶಯವೂ ಇರಲಾರದು.

---

## ಹದಿನಾಲ್ಕನೆಯ ವಿಲಾಸ

### ರತ್ನಾಭರಣದ ಭರಣಿ

ಇನ್ನೂ ಕೆಲವು ತಿಂಗಳುಗಳು ಕಳೆದುಹೋದುವು. ಆದರೆ ತಿಂಗಳುಗಳು ಕಳೆದುವೇ ಹೊರತು ವಿಶೇಷ ಸಂಗತಿಗಳೇನೂ ನಡೆಯಲಿಲ್ಲ. ಹಬ್ಬದ ಸಾಲು. ಅವರವರು ಅವರವರ ಮನೆಗಳಲ್ಲಿ ಯೋಗ್ಯತೆಗೆ ತಕ್ಕಂತೆ ಭಕ್ಷ್ಯ ಭೋಜ್ಯಗಳನ್ನು ಸಿದ್ಧಪಡಿಸಿಕೊಂಡು ಭೂತತೃಪ್ತಿಯನ್ನು ಮಾಡುವರು. ಎಲ್ಲೆಲ್ಲಿಯೂ ಗುರುಭೋಜನದ ಆನಂದದ ಮೇಲೆ ಆನಂದ. ಬಡಬಗ್ಗರ ಸಡಗರವಂತೂ ಹೇಳಲೇ ಕೆಲಸವಿಲ್ಲ. ಅವರು ದುರಾಶೆಯ ಪ್ರಭಾವದಿಂದ ಒಂದೊಂದು ದಿನ ಎರಡು ಔತಣದ ಊಟವನ್ನು ಮಾಡಿ ಹೊಟ್ಟೆಯೊಡೆದು ಮನೆಯ ಜಗತಿಯ ಮೇಲೆ ಹೊರಳಾಡುವುದೂ ಉಂಟು. ಹಾಗೆ ನರಳುವುದು ಅವರಿಗೆ ಸುಖವೋ ದುಃಖವೋ ಬಲ್ಲವರೇ ಬಲ್ಲರು.

ಚೌಧುರಿಯ ಸರಕಾರವಾಡಿಯಲ್ಲಿಯೂ ಹಬ್ಬದ ಏರ್ಪಾಡು ನಡೆಯುವುದು. ಅಲ್ಲಿ ಊಟ ಉಪಚಾರಗಳಿಗೇನೂ ಅಭಾವವಿಲ್ಲ, ಆದರೂ ಅವನ ಮನೆಗೆ ಆರೂ ಭೋಜನಕ್ಕೆ ಬರುತ್ತಿರಲಿಲ್ಲ. ಇದಕ್ಕೆ ವಯಸ್ಸಾದ ಹುಡುಗಿಗೆ ಮದುವೆ ಮಾಡದಿದ್ದುದೇ ಕಾರಣವು. ಜನರಿಗೆ ಸರಕಾರವಾಡಿಯ ಭೋಜನವೆಂದರೆ ತುಂಬಾ

ಆಸೆ. ಮಾಡುವುದೇನು ? ಜನರು ಸಮಾಜದ ಅಪ್ಪಣೆಗೆ ಕಟ್ಟುಬಿದ್ದವರಾಗಿ ಚೌಧುರಿಯ ಮನೆಗೆ ಹೋಗಲಾರದವರಾಗಿದ್ದರು. ಜನರು ಬರುವುದಿಲ್ಲವೆಂದು ಮಾಡತಕ್ಕ ಹಬ್ಬಗಳನ್ನು ಬಿಡುವುದಕ್ಕಾದೀತೇ? ವ್ರತವನ್ನು ಪರಿಪಾಲನೆ ಮಾಡುವುದಕ್ಕಾಗಿಯಾದರೂ ದೇವಪೂಜಾವಿಧಿಯನ್ನು ಅವಲಂಬಿಸಲೇ ಬೇಕು. ಚೌಧುರಿಯು ವ್ರತಾನುಷ್ಠಾನಕ್ಕಾಗಿ ಹಬ್ಬಗಳನ್ನು ಮಾಡುವನು. ಮಾಡಿದ ಭಕ್ಷ್ಯ ಭೋಜ್ಯಗಳೆಲ್ಲವನ್ನೂ ಮನೆಯವರೇ ತಿಂದು ತೇಗಿಬಿಡುವರು. ಇದರಿಂದ ಮನೆಯ ವರಾರಿಗೂ ಸಂತೋಷವಿರುತ್ತಿರಲಿಲ್ಲ. ಇತರರು ಮನೆಗೆ ಬಂದು ಊಟಮಾಡಿ ತೃಪ್ತರಾಗಿ ಹೋದರೆ ಸಂತೋಷವೇ ಹೊರತು ಮನೆಯವರೇ ತಿನ್ನುವುದಾದರೆ ಅಷ್ಟು ಸಂತೋಷವುಂಟಾಗುವುದಿಲ್ಲವೆಂದು ತಿಳಿದುಕೊಳ್ಳುವ ಮಹನೀಯರಲ್ಲಿ ಚೌಧುರಿಯು ಮೊದಲನೆಯವನಾಗಿದ್ದನು. ಸಮಾಜದ ಕಟ್ಟಪ್ಪಣೆಯನ್ನು ಸಡಲಿಸ ಬಲ್ಲವರಾರು ?

ಹಬ್ಬಗಳೆಲ್ಲವೂ ಕ್ರಮಕ್ರಮವಾಗಿ ಮುಗಿಯುತ ಬಂದುವು. ಹೀಗಿರಲೊಂದು ದಿನ ಕಮಲಾಕಾಂತರಾಯನು ಕಾರಣಾಂತರವನ್ನು ನಿಮಿತ್ತಮಾಡಿಕೊಂಡು ಚೌಧುರಿಯನ್ನೂ ಸ್ವರ್ಣಕುಮಾರಿಯನ್ನೂ ತನ್ನ ಮನೆಗೆ ಬರಮಾಡಿಕೊಂಡನು.

ಲಕ್ಷ್ಮಿಯ ಕರುಣಾಕಟಾಕ್ಷವೀಕ್ಷಣವಾದೊಡನೆಯೇ ಬಂಧು ಬಾಂಧವರ ಸಮೂಹಕ್ಕೇನೇನೂ ಕಡಿಮೆಯಿರುವುದಿಲ್ಲ. ಸಂಬಂಧಿಗಳ ಮಾತು ಹಾಗಿರಲಿ; ಸಂಬಂಧವಿಲ್ಲದವರು ಕೂಡ ಕೇಳರಿಯದ ಸಂಬಂಧವನ್ನು ಕಲ್ಪಿಸಿಕೊಂಡು ಮನೆಗೆ ಬಂದು ಸೇರಿಕೊಳ್ಳುವರು. ಕಮಲಾಕಾಂತರಾಯನಿಗೆ ದೇಹಾನುಬಂಧಿಗಳು ಕಡಮೆಯಾಗಿದ್ದರೂ, ಅವನ ಅಂತಃಪುರದಲ್ಲಿ ಮುದುಕಿಯರೂ, ಮಧ್ಯವಯಸ್ಕರೂ ಯುವತಿಯರೂ, ಹುಡುಗರೂ, ಮಕ್ಕಳೂ ಕಿಕ್ಕಿರಿದು ಹೋಗಿದ್ದರು. ಸ್ವರ್ಣಕುಮಾರಿಯು ಮೊದಮೊದಲು ಈ ಗುಂಪನ್ನು ನೋಡಿ ನಾಚಿಕೊಳ್ಳುತ್ತಿದ್ದಳು. ಒಂದೆಡೆ ಯಲ್ಲಿರತಕ್ಕವರಲ್ಲಿ ನಾಚುಗೆಯು ಎಷ್ಟು ದಿನಗಳು ತಾನೇ ಏಕಾಧಿಪತ್ಯ ಮಾಡ ಲಾದೀತು? ದಿನಗಳು ಕಳೆದ ಹಾಗೆಲ್ಲಾ ಸ್ವರ್ಣಕುಮಾರಿಯು ತನ್ನ ಸಂಕೋಚ ವನ್ನು ಬಿಟ್ಟು ಎಲ್ಲರೊಡನೆಯೂ ಧಾರಾಳವಾಗಿ ಮಾತನಾಡಲಾರಂಭಮಾಡಿದಳು. ಹಬ್ಬಗಳೆಲ್ಲವೂ ನಿಶ್ಶೇಷವಾಗಿ ಕಳೆದುಹೋದಮೇಲೆ ಬಂದಿದ್ದವರೆಲ್ಲರೂ ಒಬ್ಬೊಬ್ಬ ರಾಗಿ ತಮ್ಮತಮ್ಮ ಮನೆಗಳಿಗೆ ಹೊರಟುಹೋದರು. ಕಡೆಯಲ್ಲಿ ಮೂರುನಾಲ್ಕು ಜನರು ಮಟ್ಟಿಗೆ ಮನೆಯಲ್ಲಿ ಉಳಿದುಕೊಂಡರು.

ಕಮಲಾಕಾಂತನು ಸಂದರ್ಭವೊದಗಿಬಂದಾಗಲೆಲ್ಲಾ ಸ್ವರ್ಣಕುಮಾರಿ ಯೊಡನೆ ಮಾತನಾಡುತ್ತಾ ವ್ಯಾಜಾಂತರದಿಂದ ಸ್ವರ್ಣಕುಮಾರಿಯೇ ತನ್ನ ಅತು ಲೈಶ್ವರ್ಯಕ್ಕೂ ಉತ್ತರಾಧಿಕಾರಿಣಿಯೆಂಬುದನ್ನು ತೋರ್ಪಡಿಸಲಾರಂಭಿಸಿದನು.

ಮಾತಿನ ಮಧ್ಯದಲ್ಲಿ ಜೋಯಿಸನ ವಿಷಯವೂ ಚರ್ಚೆಯಾಯಿತು. ಒಂದೊಂದು ವೇಳೆ ಸ್ವರ್ಣಕುಮಾರಿಯು ತನ್ನೊಳಗೆ ತಾನೇ "ನಾನು ಅಪರಿಮಿತವಾದ ಸಂಪತ್ತಿಗೆ ಅಧಿಕಾರಿಣಿಯಾಗುವೆನೇ! ಇಲ್ಲ, ಅದು ನನ್ನಂತಹ ಬಡಹುಡುಗಿಯ ಪಾಲಿಗೆ ಬರತಕ್ಕುದಲ್ಲ. ಭವಿಷ್ಯತ್ತನ್ನು ಕಂಡವರಾರು? ಒಂದು ವೇಳೆ ಲಕ್ಷ್ಮಿಯ ಕಟಾಕ್ಷದಿಂದ ಸಂಪತ್ತು ಒದಗಿ ಬರುವುದಾದರೆ ನಾನು ಮಾಡುವುದೇನು? ಅದರಿಂದ ಸುಖವೇ? ದುಃಖವೇ? ಕೆಲವರು ಸುಖವೆನ್ನುವರು; ಕೆಲವರು ದುಃಖವೆನ್ನುವರು. ನನಗಾದರೋ ಸಂಪತ್ತುಂಟಾಗುವುದೆಂಬುದು ಸುಖವೇ ಹೊರತು ಸಂಪತ್ತು ಬಂದಮೇಲೆ ದುಃಖವೇ ಉಂಟಾಗುವುದು ಎಂದು ನಂಬುಗೆ. ಕಷ್ಟವನ್ನು ಅನುಭವಿಸಬೇಕೆಂದು ಬ್ರಹ್ಮನು ಹಣೆಯಲ್ಲಿ ಬರೆದಿದ್ದರೆ ಸಂಪದ್ಯೋಗವುಂಟಾಗುವುದು. ಇದನ್ನು ತಪ್ಪಿಸಬಲ್ಲವರಾರು?" ಎಂದು ಮುಂತಾಗಿ ಚಿಂತಿಸಿ ಬೆಚ್ಚಿ ಬೆದರಿ ಬೀಳುವಳು. ಮನುಷ್ಯನಿಗೆ ಸಂಪತ್ತು ಬಂದರೂ ಚಿಂತೆ, ಬಾರದಿದ್ದರೂ ಚಿಂತೆ. ಆಶಾಪಾಶಪರವಶನಾದ ಮನುಷ್ಯನು ನಿಶ್ಚಿಂತನಾಗಿ ಬಾಳುವುದೆಂದಿಗೋ ದೇವರೊಬ್ಬನೇ ಬಲ್ಲನು.

ಸ್ವರ್ಣಕುಮಾರಿಯು ಸಂಪತ್ತು ಬರುವುದೆಂಬ ಚಿಂತೆಯಿಂದ ಸೊಕ್ಕಿಸೊರಗಿ ಹೋಗುತ್ತಿರುವಾಗ, ಇವಳ ಸಂಕಟವನ್ನು ನೋಡಿತೀರದೆಂದು ದಿನಗಳು ಬೇಗ ಬೇಗನೆ ಕಳೆದು ಹೋದುವು. ಫಾಲ್ಗುನ ಮಾಸವೂ ಬಂದಿತು. ಫಾಲ್ಗುನ ಬಹುಳದ ಒಂದಾನೊಂದುದಿನ ರಾಯುಮಹಾಶಯನು ಸ್ವರ್ಣಕುಮಾರಿಯನ್ನು ಹತ್ತಿರಕ್ಕೆ ಕರೆದು "ಇಂದು ಫಾಲ್ಗುನ ಬಹುಳ ಸಪ್ತಮಿ. ಈ ದಿನ ಹಿಂದೆ ಆವಾಗಲಾದರೂ ವಿಶೇಷಸಂಗತಿ ನಡೆದಿರುವುದೇನಾದರೂ ಜ್ಞಾಪಕವಿದೆಯೋ?" ಎಂದು ಕೇಳಿದನು.

ಸ್ವರ್ಣ—(ನಗುತ್ತಾ) ಜ್ಞಾಪಕವಿಲ್ಲದೆಯೇನು? ಇದೇ ದಿನ ನಿಮ್ಮೊಡನೆ ನನಗೆ ಪ್ರಥಮ ಪರಿಚಯವಾದುದು. ನಾನು ಆ ದಿನವನ್ನೆಂದಿಗೂ ಮರೆಯಲಾರೆನು.

ಕಮಲಾ—ಸ್ವರ್ಣ! ಒಂದು ವರ್ಷದಿಂದೀಚೆಗೆ ನಡೆದುದೆಲ್ಲವೂ ನಿನಗೆ ಜ್ಞಾಪಕವಿದೆಯಲ್ಲವೇ? ಹಾಗಾದರೆ ನೀನು ಈ ಪದಾರ್ಥವನ್ನು ಎಂದಾದರೂ ಕಣ್ಣಿನಿಂದ ನೋಡಿರುವುದನ್ನು ತಿಳಿಯಬಲ್ಲೆಯಾ?

ಕಮಲಾಕಾಂತನು ಹೀಗೆ ಹೇಳಿ ಒಂದು ರತ್ನಾಭರಣದ ಭರಣಿಯನ್ನು ಹೊರಗೆ ತೆಗೆದನು.

ಕುಮಾರಿಯು ಇದನ್ನು ನೋಡಿದ ಕೂಡಲೆ ನಾಚುಗೆಯಿಂದ ತಲೆವಾಗಿದವಳಾಗಿ, "ಇದು ಆಗ ತೋರಿಸಿದ ಭರಣಿಯಲ್ಲವೇ? ಇದನ್ನು ನಾನು ನೋಡಿರುವೆನು," ಎಂದಳು.

ಕಮಲಾ—ಏನಮ್ಮಾ! ಆ ದಿನವಂತೂ ನೀನು ಇದನ್ನು ಸ್ವೀಕರಿಸಲು ಒಪ್ಪಲಿಲ್ಲ. ಈಗ ಇದನ್ನು ನೀನು ತಿರಸ್ಕರಿಸಲಾರೆ. ಈ ದಿನವೇ ನೀನು ಇದನ್ನು ಧರಿಸಬೇಕಾಗಿ ವಿಧಾಯಕವಾಗಿರುವುದು. ಈ ಆಭರಣವನ್ನು ನೀನು ಅಂದೇ ತಿರಸ್ಕರಿಸದೇ ಸ್ವೀಕರಿಸಿದ್ದಿದ್ದರೆ, ಮುಂದಣ ಕೆಲಸಗಳೆಲ್ಲವೂ ಆವ ರೀತಿಯಲ್ಲಿ ನಡೆದು ಹೋಗುತಿದ್ದಿತೋ ಅದನ್ನು ಕುರಿತು ಈಗ ತಿಳಿಸಲು ಸಾಧ್ಯವಿಲ್ಲ. ಈಗ ನೀನು ಈ ಮಂಗಳಾಭರಣವನ್ನು ಧರಿಸುವುದರಿಂದ, ನನ್ನ ಜೀವಿತಾನಂತರದಲ್ಲಿ ನನ್ನ ಸರ್ವಸಂಪತ್ತಿಗೂ ನೀನೇ ಸರ್ವವಿಧದಿಂದಲೂ ಉತ್ತರಾಧಿಕಾರಿಣಿಯಾಗುವೆ. ಈ ವಿಷಯವನ್ನು ನಾನು ಮೊದಲೇ ಮರಣಶಾಸನದಲ್ಲಿ ಸಿದ್ಧಾಂತಪಡಿಸಿಟ್ಟಿರುವೆನು.

ಸ್ವರ್ಣ—(ಮೃದುಮಧುರಸ್ವರದಿಂದ) ಪೂಜ್ಯ ಮಹಾಶಯ! ಹೆಂಗುಸಾದ ನಾನು ಇಷ್ಟು ಉಪಕಾರಕ್ಕೆ ಅನರ್ಹಳು. ಈ ಅಪರಿಮಿತವಾದ ಸಂಪತ್ತನ್ನು ಪಡೆದುಕೊಂಡು ನಾನೇನ ಮಾಡಲಿ? ತಾವು ಹುಡುಗನೊಬ್ಬನನ್ನು ದತ್ತು ತೆಗೆದುಕೊಂಡು ತಮ್ಮ ಆಸ್ತಿಯೆಲ್ಲವನ್ನೂ ಅವನಿಗೆ ಕೊಡುವುದು ಯುಕ್ತವಾಗಿ ಕಾಣುವುದಲ್ಲವೇ? ನಿಮ್ಮ ಮಾತ ಕೇಳಿದಾಗಳಿಂದಲೂ ನನಗೆ ಸಂತೋಷಕ್ಕೆ ಪ್ರತಿಯಾಗಿ ಭಯವೇ ಉಂಟಾಗುತ್ತಿರುವುದು. ಕಾರಣವೇನೆಂದರೆ—ವಿಶೇಷ ಸಂಪತ್ತಿಗೆ ಅಧಿಕಾರಿಣಿಯಾಗುವುದರಿಂದ ದುಃಖವುಂಟೆಂದು ನನ್ನ ಭಾವನೆ.

ಕಮಲಾ—(ನಗುತ್ತಾ) ಐಶ್ವರ್ಯದಿಂದ ಮನುಷ್ಯನು ಸುಖಿಯಾಗಲಾರನೆ? ಹಣವನ್ನು ನ್ಯಾಯದಿಂದ ಸಂಪಾದಿಸಿ ಅದನ್ನು ಸದ್ವಿನಿಯೋಗ ಪಡಿಸುವುದಾದರೆ ಅದರಿಂದುಂಟಾಗತಕ್ಕ ಸುಖವೂ ಮನಶ್ಶಾಂತಿಯೂ ಮತ್ತಾವುದರಿಂದಲೂ ಆಗಲಾರದು. ಧನದಿಂದ ದರಿದ್ರರ ದಾರಿದ್ರ್ಯವನ್ನು ಹೋಗಲಾಡಿಸಬಹುದು. ರೋಗಿಗಳಿಗೆ ಆರೋಗ್ಯಲಾಭವನ್ನುಂಟುಮಾಡಿಕೊಡಬಹುದು. ಲೋಕದಲ್ಲಿ ಜ್ಞಾನದೀಪವನ್ನು ಬೆಳಗಿ ಅಜ್ಞಾನವೆಂಬ ಕತ್ತಲೆಯನ್ನು ದೂರಮಾಡಬಹುದು. ಅನ್ನ ವಸ್ತ್ರಾದಿಗಳನ್ನಿತ್ತು ಅನಾಥರನ್ನು ಕಾಪಿಡಬಹುದು. ಇವೆಲ್ಲವೂ ಧನಸಾಧ್ಯವಾದುದರಿಂದ, ಧನವಿಲ್ಲದೆ ಧರ್ಮಕರ್ಮಗಳನ್ನು ಮಾಡುವುದಕ್ಕಾಗಲಾರದು. ನೀನು ಆವಾಗಲೂ ಧನದಿಂದಾಗುವ ದೋಷಗಳನ್ನೇ ಎಣಿಸುತ್ತಾ ಕುಳಿತರೆ ಪಾರವೆಲ್ಲಿಯದು? ನಾವು ಆವಾಗಲೂ ಗುಣದ ಕಡೆಗೆ ದೃಷ್ಟಿಯಿಟ್ಟು ಕೆಲಸಮಾಡಬೇಕು. ಧನದಿಂದ ಗುಣಕ್ಕೇನೂ ಕಡಮೆಯಿಲ್ಲ.

ಸ್ವರ್ಣ—ದೊಡ್ಡಪ್ಪ! ತಾವು ಎಲ್ಲವನ್ನೂ ತಿಳಿದವರು. ನಾನು ತಮ್ಮ ಇಷ್ಟದಂತೆಯೇ ನಡೆದುಕೊಳ್ಳುವೆನು. ತಮ್ಮ ಮಾತಿಗೆ ವಿರೋಧವಾಗಿ ನಾನು ಆವುದನ್ನೂ ನಡೆಯಿಸಲಾರೆನು.

ಕಮಲಾ—ನೀನು ನನ್ನ ಮಾತಿಗೆ ಪ್ರತಿಯಾಗಿ ಹೇಳುವುದಿಲ್ಲವೆಂದು ನಾನು ಮೊದಲಿನಿಂದಲೂ ಬಲ್ಲೆನು. ನಾನು ನಿನಗೆ ಹಿತಚಿಂತಕನಾಗಿರುವ ಕಾರಣ, ನನ್ನ ಮಾತ ಕೇಳುವುದರಿಂದ ನಿನಗೆ ಆವಾಗಲೂ ಮಂಗಳವೇ ಆಗುವುದು.

ಸ್ವರ್ಣಕುಮಾರಿಯು ಈ ಮಾತನ್ನು ಕೇಳಿ ಏನೊಂದುತ್ತರವನ್ನೂ ಕೊಡಲಾರದವಳಾಗಿ ಸುಮ್ಮನೆ ನಿಂತಿರಲು, ಕಮಲಾಕಾಂತನು ಮೊಹರುಮಾಡಿದ ಒಂದು ಲಕೋಟೆಯನ್ನು ಹೊರಗೆ ತೆಗೆದು, "ಮಗು, ನನ್ನ ಮಾತಿಗೆ ಎಂದಿಗೂ ಪ್ರತಿಯಾಗಿ ನಡೆಯುವುದಿಲ್ಲವೆಂದು ಪ್ರತಿಜ್ಞೆಮಾಡಿ ಈ ಕಾಗದವನ್ನು ತೆಗೆದಿಟ್ಟುಕೊಳ್ಳು," ಎಂದು ಹೇಳಿ ಕೊಟ್ಟನು.

ಸ್ವರ್ಣ—ನಾನು ಆವಾಗಲೂ ನಿಮ್ಮ ಮಾತನ್ನು ತಿರಸ್ಕರಿಸಿದವಳಲ್ಲ. ನೀವು ಆವಾಗ ಆವ ಮಾತನ್ನು ಹೇಳಿರುವಿರೋ, ನಾನು ಆಗಾಗಳೇ ಅದನ್ನು ಸಂಶಯಪಡದೇ ನೆರವೇರಿಸಿರುವೆನು. ನೀವು ಅದನ್ನು ಚೆನ್ನಾಗಿಯೂ ತಿಳಿದಿರುವಿರಿ. ಈಗ ನೀವು ಹೇಳುವುದನ್ನೂ ನಾನು ಸರ್ವಪ್ರಯತ್ನದಿಂದಲೂ ನಡೆಯಿಸತಕ್ಕವಳಾಗಿಯೇ ಇರುವೆನು.

ಕಮಲಾ—ಈ ಲಕೋಟೆಯನ್ನು ನೀನು ಭದ್ರಪಡಿಸಿಟ್ಟುಕೊಳ್ಳು. ಈ ಕಾಗದದ ವಿಚಾರವು ನಿನ್ನ ತಂದೆಗೂ ತಿಳಿಯದಿರಲಿ. ನಿನಗೆ ಹದಿನಾರು ವರ್ಷ ತುಂಬಿದ ಮೇಲೆ, ನೀನು ಈ ಲಕೋಟೆಯನ್ನೊಡೆದು ಕಾಗದವನ್ನು ಓದಿಕೊಳ್ಳಬಹುದು. ಅದಕ್ಕೆ ಮುಂಚೆ ನೀನು ಆವ ಕಾರಣದಿಂದಲೂ ಇದನ್ನು ಓದಕೂಡದು. ಇದೇ ನನ್ನ ಕೊನೆಯ ಆದೇಶವು. ನೀನು ಮಟ್ಟಿಗೆ ಈ ಕಾಗದವನ್ನು ಕಳೆಯದಂತೆ ಆ ಕಾಲದವರೆಗೂ ಗೋಪ್ಯವಾಗಿ ರಕ್ಷಿಸಿಕೊಂಡು ಬರಬೇಕೆಂದು ನನ್ನ ಇಷ್ಟವು.

ಸ್ವರ್ಣಕುಮಾರಿಯು ಲಕೋಟೆಯನ್ನೂ ರತ್ನಾಭರಣದ ಭರಣಿಯನ್ನೂ ತೆಗೆದುಕೊಂಡು ಅಂತಃಪುರಕ್ಕೆ ಹೊರಟುಹೋದಳು. ಮರಣಶಾಸನವು ಬರೆದು ಇಂದಿಗೆ ಆರು ತಿಂಗಳಕಾಲವು ಸುಖವಾಗಿಯೇ ಕಳೆದುದು. ಈ ಕಾಲದಲ್ಲಿ ವಕೀಲ ವಿಧುಭೂಷಣನು ಕಮಲಾಕಾಂತನಿಗೆ ಬೇಕಾದ ಹಾಗೆ ಕಾಗದಗಳನ್ನು ಬರೆಯುತಿದ್ದನು. ಪ್ರತಿಯೊಂದು ಕಾಗದದಲ್ಲಿಯೂ ಮಧುಸೂದನನ ವಿಷಯದಲ್ಲಿ ಸಂತೋಷಸೂಚಕವಾದ ಮಾತುಗಳೇ ಕಂಡುಬರುತಿದ್ದುವು. ಇದನ್ನು ನೋಡಿ

ಕಮಲಾಕಾಂತರಾಯನು ಆ ಹುಡುಗನಿಗೆ ಇನ್ನೂ ಐದುಸಾವಿರ ರೂಪಾಯಿಗಳನ್ನು ಕೊಡುವ ಹಾಗೆ ಕಾಗದ ಬರೆದನು. ಕೆಲವು ದಿನಗಳ ತರುವಾಯ ವಿಧುಭೂಷಣರು ಉತ್ತರ ಬರೆದರು. ಅದರ ಸಾರಾಂಶ ಪೀರೀತಿಯಲ್ಲಿದ್ದಿತು :—

"ನಾನು ತಮ್ಮ ಅಪ್ಪಣೆಯ ಪ್ರಕಾರವಾಗಿ ಮಧುಸೂದನನಿಗೆ ಐದು ಸಾವಿರ ರೂಪಾಯಿಗಳನ್ನು ಕೊಡುವುದಕ್ಕೆ ಹೋಗಿದ್ದೆನು. ಆತನು ತಮ್ಮ ಉಪಕಾರಕ್ಕೆ ಬಹಳವಾಗಿ ಬಾಧ್ಯಪಟ್ಟಿರುವೆನೆಂದು ಕೃತಜ್ಞತಾಸೂಚಕವಾದ ಮಾತುಗಳನ್ನಾಡಿದನೇ ಹೊರತು ತಮ್ಮ ಹಣವನ್ನು ತೆಗೆದುಕೊಳ್ಳಲು ಇಷ್ಟಪಡಲಿಲ್ಲ. ನಾನು ಕೈಗೆ ಬಂದ ಹಣವನ್ನು ತಿರಸ್ಕಾರಮಾಡಬಾರದೆಂದು ತಿಳಿಸಿದೆನು. ಅದಕ್ಕೆ ಅವನು ಉತ್ತರ ಕೊಟ್ಟುದು :—"ನನ್ನ ವ್ಯಾಪಾರದಿಂದ ನನಗೆ ಕೈತುಂಬಾ ಹಣ ಸಂಪಾದನೆಯಾಗುತ್ತಿರುವುದು. ಈಗ ನನಗೆ ಆವ ಬಗೆಯಲ್ಲಿಯೂ ಹೆಚ್ಚಿನ ವೆಚ್ಚವಿಲ್ಲದಿರುವುದರಿಂದ, ಹಣದಲ್ಲಿ ದುರಾಶೆಯಿಲ್ಲ. ಹೆಚ್ಚಾಗಿ ಹಣವಿದ್ದರೆ ದುರ್ಮಾರ್ಗದಲ್ಲಿ ಪ್ರವೃತ್ತಿಯುಂಟಾಗುವುದು. ನಾನು ಇದೆಲ್ಲವನ್ನೂ ಕಂಡೂಕಂಡೂ ಮತ್ತೆ ಹಳ್ಳಕ್ಕೆ ಬೀಳಲೇ? ಶಿವಶಿವ! ಅನರ್ಥಕರವಾದ ಹಣವನ್ನು ಸುಡು." ನಾನು ಈ ಮಾತನ್ನು ಕೇಳಿ ಸಂತೋಷಪಟ್ಟುಕೊಂಡು ಏನೇನೋ ಉಪಾಯಮಾಡಿ ಹಣವನ್ನು ಅವನಿಗೊಪ್ಪಿಸಿ "ಮಧು ಮಹಾಶಯ, ಈ ಹಣದಿಂದ ವ್ಯಾಪಾರವನ್ನು ಇನ್ನೂ ಅಧಿಕವಾಗಿ ಬಲಪಡಿಸಿರಿ. ಕೆಲಕಾಲದೊಳಗಾಗಿ ನಿಮ್ಮ ಸಂಪತ್ತಿನಿಂದ ಲೋಕದಲ್ಲಿ ಒಳ್ಳೆಯ ಹೆಸರನ್ನು ಸಂಪಾದಿಸಿ ನಿಮ್ಮ ಪೂರ್ವಿಕರಿಗಿಂತಲೂ ಅತಿಶಯವಾಗಿ ಬಾಳಿರಿ," ಎಂದು ಹೇಳಿದುದನ್ನು ಕೇಳಿ ಆತನು ಒಪ್ಪಿಕೊಂಡನು. ಆತನು ತನ್ನ ಸಂತೋಷವನ್ನು ಸೂಚಿಸುವುದಕ್ಕಾಗಿ ತಮಗೊಂದು ಕಾಗದವನ್ನು ಬರೆಯುವುದಾಗಿ ಹೇಳಲು, ನಾನು ಅದನ್ನು ಅಡ್ಡಗಿಸಿ ತಮಗೆ ನಾನೇ ಕಾಗದ ಬರೆವುದಾಗಿ ಹೇಳಿದೆನು. ಅವನು ಅದಕ್ಕೂ ಸಮ್ಮತಿಸಿದನು. ಅವನ ಸ್ವಭಾವ ನೋಡಿ ನನಗೆ ತುಂಬಾ ಸಂತೋಷವಾಯಿತು."

ಕಮಲಾಕಾಂತನು ವಿಧುಭೂಷಣನ ಈ ಬಗೆಯ ಕಾಗದವನ್ನು ತನ್ನ ಪಡ್ಡಕನಾದ ಚೌಧುರಿ ಮಹಾಶಯನಿಗೆ ತೋರಿಸಿದನು. ಚೌಧುರಿಯು ಕಾಗದವೆಲ್ಲವನ್ನೂ ಓದಿನೋಡಿಕೊಂಡು, "ಅಣ್ಣಾ! ಈ ಆರು ತಿಂಗಳ ಕಾಲದಲ್ಲಿ ಒಂದು ದಿನವಾದರೂ ನಾನು ತಮ್ಮ ಮರಣಶಾಸನದ ವಿಚಾರವಾಗಿ ಮಾತನಾಡಿದವನಲ್ಲ. ಈಗ ತಮ್ಮ ತಮ್ಮನ ಮಗನು ಸದಾಚಾರಸಂಪನ್ನನಾಗುತ್ತಿರುವನೆಂದು ಕೇಳಿ ತಮ್ಮೊಡನೆ ಒಂದೆರಡು ಮಾತುಗಳನ್ನಾಡಬೇಕೆಂದಿರುವೆನು. ತಾವು ಬೇರೆಯಾಗಿ ತಿಳಿಯದಿದ್ದಲ್ಲಿ ನಾನು ಮಾತನಾಡುವೆನು. ತಾವೇ ನೋಡೋಣವಾಗಲಿ; ಮಧುಸೂದನನು ತಮ್ಮ ಇಷ್ಟಾನುಸಾರವಾಗಿಯೇ ನಡೆದುಕೊಳ್ಳುತ್ತಿರುವನು. ಇಂತಹವನ

ವಿಷಯದಲ್ಲಿ ತಾವು ಸದ್ವಿವೇಚನೆಯನ್ನು ಮಾಡುವುದು ಯುಕ್ತವಾಗಿ ನನಗೆ ತೋರುತ್ತಿರುವುದು. ತತ್ತ್ವಾರ್ಥವನ್ನು ಪರಿಶೀಲಿಸಿ ನೋಡಲಾಗಿ, ಮಧುಮಹಾಶಯನೇ ತಮ್ಮ ಆಸ್ತಿಯೆಲ್ಲಕ್ಕೂ ಶಾಸ್ತ್ರಸಮ್ಮತವಾಗಿ ಉತ್ತರಾಧಿಕಾರಿಯಾಗಿರುವನು. ಅವನೇ ತಮ್ಮಗಳ ಉತ್ತರಕ್ರಿಯಾದಿಗಳಿಗೂ ಬಾಧ್ಯನು. ಇಂತಹ ದೇಹ ಸಂಬಂಧವು ಮತ್ತಾರಿಗುಂಟು? ಆದುದರಿಂದ ತಾವು ಅವನನ್ನೇ ಉತ್ತರಾಧಿಕಾರಿಯನ್ನಾಗಿ ಮಾಡಿಕೊಳ್ಳುವುದು ಸರ್ವೋತ್ತಮವಾದುದು. ಇದು ತಮ್ಮ ಇಚ್ಛೆಗೆ ಬರದೇ ಹೋದರೆ, ಅವನಿಗೆ ಇಪ್ಪತ್ತು ಮೂವತ್ತು ಲಕ್ಷ ರೂಪಾಯಿಗಳನ್ನಾದರೂ ಕೊಡಬಾರದೇತಕೆ? ನನಗೂ ನನ್ನ ಮಗಳಿಗೂ ತಾವು ಸ್ವಲ್ಪವೇ ಕೊಟ್ಟರೂ ಸಾಕಾಗಿದೆ. ತಾವು ದೊಡ್ಡ ಮನಸ್ಸುಮಾಡಿ ಮಧುಸೂದನನಿಗೆ ಅಧಿಕಾಂಶದ ಪಾಲನ್ನು ಕೊಡೋಣವಾಗಲಿ. ಅವನಿನ್ನೂ ಹುಡುಗನು; ಅವನು ಮುಂದೆ ಬದುಕಬೇಕಾದ ವರ್ಷಗಳು ಅಪಾರವಾಗಿರುವುವು. ತಲೆ ತಗುಲಿದ ಮೇಲೆ ಎಲ್ಲರಿಗೂ ಬುದ್ಧಿ ಬಂದೇ ಬರುವುದು. ಆದುದರಿಂದ ಅವನು ಮುಂದೆ ಯೋಗ್ಯನೇ ಆಗುವನು. ಅಂತಹವನಿಗೆ ತಾವು ವಂಚಿಸತಕ್ಕುದಲ್ಲ," ಎಂದು ವಿನಯದಿಂದ ತಿಳಿಯ ಹೇಳಿದನು.

ಕಮಲಾ—ಚೌಧುರಿ ಮಹಾಶಯ! ಇನ್ನು ಎಷ್ಟು ಮಾತನಾಡಿದರೂ ಪ್ರಯೋಜನವಿಲ್ಲ. ನಾನು ಏನ ಮಾಡಬೇಕೋ ಅದೆಲ್ಲವನ್ನೂ ಸರಿಯಾಗಿಯೇ ಮಾಡಿಟ್ಟಿರುವೆನು. ಮಧುಸೂದನನ ಚಮತ್ಕಾರಗಳಿಗೆ ನಾನು ಬೆರಗಾಗತಕ್ಕವನಲ್ಲ. ಅವನು ಕಪಟನಾಟಕಸೂತ್ರಧಾರಿಯೆಂದು ನಾನು ಚೆನ್ನಾಗಿಯೂ ತಿಳಿದಿರುವೆನು. ಕಾರಣಾಂತರಕ್ಕೆ ಒಳಗಾಗಿ ನಾಲ್ಕಾರು ತಿಂಗಳು ಅವನು ಯೋಗ್ಯನಂತೆ ನಟನೆ ಮಾಡುವುದಾದರೆ, ನಾವು ಅದನ್ನೇ ನಂಬಿ ಅವನು ಆವಾಗಲೂ ಯೋಗ್ಯನೆಂದು ಹೇಳುವುದಕ್ಕಾದೀತೇ? ಅವನು ನನ್ನನ್ನು ಮೂರ್ಖನೆಂದೂ ದೂರದೃಷ್ಟಿಯಿಲ್ಲದವನೆಂದೂ ಎಮ್ಮೆಕೋಣನೆಂದೂ ತಿಳಿದಿರುವನು. ಇದರಿಂದಲೇ ಅವನು ನನ್ನ ಕಣ್ಣಿಗೆ ಮಣ್ಣೆರಚಿ ನನ್ನ ಆಸ್ತಿಯೆಲ್ಲವನ್ನೂ ಹೊತ್ತುಹಾಕಬೇಕೆಂದು ಸಂಕಲ್ಪಮಾಡಿಕೊಂಡು ತಾನು ಗುಣವಂತನೆಂಬುದನ್ನು ಹೊರಬೀಳಿಸುತ್ತಿರುವನು. ನಾನಾರೆಂಬುದನ್ನು ಅವನಿನ್ನೂ ಕಾಣನು. ನಾನಾದರೋ ಅನೇಕ ದೇಶಗಳನ್ನು ನೋಡಿರುವೆನು, ಅನೇಕ ಜನರ ಶೀಲಸ್ವಭಾವವನ್ನು ತೂಗಿ ನೋಡಿರುವೆನು, ನಾನು ಮುದುಕನಾದರೂ ಚತುರತೆಯಲ್ಲಿ ಅವನಿಗೇನೂ ಕಡಮೆಯಿಲ್ಲ. ಇಂತಹ ಬುದ್ಧಿಯಿಲ್ಲದ ಪೋಲಿ ಹುಡುಗರಿಗೆ ನಾನು ಸರಿಯಾಗಿ ಬುದ್ಧಿಗಲಿಸತಕ್ಕವನೇ ಆಗಿರುವೆನು. ಅವನು ಹಣಬರುವ ವರೆಗೂ ಯೋಗ್ಯನಂತಿದ್ದು ಬಳಿಕ ಹಣವು ಕೈಸೇರಿದ ಮೇಲೆ ಮನಬಂದಂತಿರಬಹುದೆಂದು ಆಲೋಚಿಸಿರುವುದು ನನಗೆ ತಿಳಿಯದೇ ಇಲ್ಲ.

ನೀವು ಇತರರ ಮೋಸಗೀಸ ತಿಳಿಯದವರು. ಆರಾದರೂ ನಿಮ್ಮ ದಿರಿನಲ್ಲಿ ಕುಳಿತು ಸುಳ್ಳಾಗಿ ಅತ್ತರೂ ನೀವು ಅದನ್ನು ನಿಜವೆಂದು ತಿಳಿದು ಅತ್ತುಬಿಡುವಿರಿ. ನಿಮಗೆ ಅಯೋಗ್ಯಪ್ರಪಂಚದ ಅನುಭವವೇ ಇಲ್ಲ. ಆದುದರಿಂದಲೇ ನೀವು ಕಳ್ಳನ ಪಕ್ಷವನ್ನು ವಹಿಸಿ ಮಾತನಾಡುವಿರಿ. ಸರಳಸ್ವಭಾವದವರ ಸಲಹೆಯಂತೆ ಕೆಲಸ ಮಾಡುವುದಾದರೆ, ಲೋಕವ್ಯಾಪಾರವು ಸುಮುಖವಾಗಿ ನಡೆಯಲಾರದೆಂದು ನನ್ನ ಭಾವನೆಯು. ಪ್ರಪಂಚಾನುಭವವಿಲ್ಲದವರ ಮಾತನ್ನು ಕೇಳಿ ನಾನು ಕೆಲಸಮಾಡ ತಕ್ಕವನಲ್ಲ. ನಾನು ಸರಿಯಾಗಿ ಆಲೋಚಿಸಿ ಕೆಲಸಮಾಡಿರುವೆನು. ಅದನ್ನು ನಾನು ಮೇಲೆ ಮೇಲೆ ಮಾರ್ಪಡಿಸುವುದಕ್ಕೆ ಇಷ್ಟ ಪಡಲಾರೆನು. ನೀವು ನನ್ನ ಮಾತಿಗೆ ವಿರೋಧವಾಗಿ ನಡೆಯುವುದಿಲ್ಲವೆಂದು ಮೊದಲೇ ಮಾತಕೊಟ್ಟಿರುವಿರಿ. ಆದುದರಿಂದ ನನ್ನ ಮರಣಶಾಸನದ ಒಂದಕ್ಷರವೂ ನಿಮ್ಮಿಂದ ವ್ಯತ್ಯಾಸವನ್ನು ಹೊದ್ದಲಾಗದು. ನಾನು ಮತ್ತೊಂದು ವಿಷಯವನ್ನು ತಮಗೆ ತಿಳಿಸುವವನಾಗಿರುವೆನು. ನಾನು ನಿಮಗೆ ಕೊಟ್ಟಿರುವ ಹಣದಲ್ಲಿ ಒಂದು ಕವಡೆಯನ್ನಾದರೂ ಮಧುಸೂದನನಿಗೆ ನೀವು ಕೊಡಕೂಡದು. ಆ ಅಧಮನು ನಿಜವಾಗಿಯೂ ಯೋಗ್ಯನಾಗಿ ಬಾಳುವನಾದರೆ, ಈಗ ನಾನು ಕೊಟ್ಟಿರುವುದೇ ಸಾಕಾಗಿದೆ. ಬುದ್ಧಿಯಿದ್ದರೆ ಆ ಹಣವನ್ನೇ ಬೇಕಾದಹಾಗೆ ವೃದ್ಧಿಮಾಡಿಕೊಳ್ಳಬಹುದು. ಬುದ್ಧಿಯಿಲ್ಲದವನಿಗೆ ಎಷ್ಟು ಹಣಕೊಟ್ಟರೂ ಪ್ರಯೋಜನವಿಲ್ಲ; ಅದರಿಂದ ಅವನಿಗೆ ಬಹುತರವಾಗಿ ಕೆಡಕೇ ಆಗುವುದು. ಆದುದರಿಂದ ನಾನೆಂದಿಗೂ ಇಂತಹ ಕೆಲಸವನ್ನು ಮಾಡ ತಕ್ಕವನೇ ಅಲ್ಲ.

ಗೋವಿಂದಚಂದ್ರ ಚೌಧುರಿಯು ಕಮಲಾಕಾಂತನ ಮಾತಿಗೆ ಪ್ರತ್ಯುತ್ತರವನ್ನು ಕೊಡದೆ ಸುಮ್ಮನಾಗಿಬಿಟ್ಟನು. ಈ ಸಂತರ್ಪಣೆಯಲ್ಲಿ ಮಧುಸೂದನನಿಗೆ ಒಂದು ತುತ್ತು ಅನ್ನವೂ ಸಿಕ್ಕದಿರುವುದಕ್ಕಾಗಿ ಚೌಧುರಿಯು ಅತಿಯಾಗಿ ವ್ಯಸನಪಡಲಾರಂಭಿಸಿದನು. ಆತನು ಕಮಲಾಕಾಂತನಿಗೆ ಪ್ರಮಾಣಮಾಡಿ ಕೊಟ್ಟಿರುವುದರಿಂದ, ಅದಕ್ಕೆ ವಿರೋಧವಾಗಿ ನಡೆಯುವುದು ಉಚಿತವಲ್ಲವೆಂದು ತಿಳಿದು ಮಧುಸೂದನನ ಯೋಗಕ್ಷೇಮವನ್ನು ಮರೆಯಲಾರಂಭಿಸಿದನು.

---

## ಹದಿನೈದನೆಯ ವಿಲಾಸ

### ಮೃತ್ಯುಶಯ್ಯೆ

ಚೌಧುರಿಯೂ ಸ್ವರ್ಣಕುಮಾರಿಯೂ ತಮ್ಮ ಗ್ರಾಮಕ್ಕೆ ಹಿಂದಿರುಗಿ ಬಂದು ಸರಕಾರವಾಡಿಯಲ್ಲಿ ಎಂದಿನಂತೆ ವಾಸಮಾಡಿಕೊಂಡಿರುತಿದ್ದರು. ಒಂದು ದಿನ

ಅರ್ಧರಾತ್ರದ ಸಮಯದಲ್ಲಿ ಮನೆಯ ಜನರೆಲ್ಲರೂ ನಿದ್ದೆಮಾಡುತ್ತಿದ್ದಾಗ, ಬೀದಿಯ ಬಾಗಿಲಿನಲ್ಲಿ ಆರೋ ಬಂದು ಗಟ್ಟಿಯಾಗಿ ಕೂಗಿದ ಹಾಗಾಯಿತು. ಚೌಧುರಿಯು ನಿದ್ದೆಯಿಂದೆದ್ದು ಕಿಟಕಿಯ ಬಳಿ ನಿಂತು ನೋಡಿದನು. ದೇವ ದುರ್ಗದ ಸೇವಕನೊಬ್ಬನು ಬಂದಿರುವುದು ಗೊತ್ತಾಯಿತು. ಆ ಕೂಡಲೆ ಚೌಧುರಿಯು ಬಾಗಿಲ ತೆರೆದು ಕಾರಣವನ್ನು ವಿಚಾರಿಸಿದನು. ಸೇವಕನು ಚೌಧುರಿಗೆ ಅಡ್ಡಬಿದ್ದು, "ಬುದ್ಧೀ! ನಮ್ಮೈನೋರು ಜರ ಬಂದು ಹಾಸಗೆ ಹಿಡಿದು ಮಲಗವ್ರೇ, ಪಂಡಿತರು ಬಂದು ಯಜಮಾನ್ರು ಈ ಸರ್ತಿ ಬದಕೋಕಿಲ್ಲ ಎಂತ ಹೇಳ್ತವ್ರೆ. ಬುದ್ದಿಯೋರು ಈಗಲೇ ಹೊಂಟು ಬರಬೇಕೆಂತ ಅಪ್ಪಣೆ ಮಾಡವ್ರೆ. ತಂಗೆ ಬರೋಕೆ ಒಂದು ದೋಣಿ ತಂದಿವ್ನಿ. ತಡಮಾಡಿದರೆ ಐನೋರ್ನ ನೋಡೋಕೆ ಆಗೋಕಿಲ್ಲ," ಎಂದು ಮೇಲುಸಿರಿನಿಂದ ಅರಿಕೆಮಾಡಿಕೊಂಡನು. ಚೌಧುರಿಯು ದಡಬಡನೆ ಬಟ್ಟೆಬರೆಗಳನ್ನು ಹಾಕಿಕೊಂಡು ಸಿದ್ಧನಾದನು. ಕುಮಾರಿಯು ಬಂದು "ನಾನೂ ಬರುವೆನು" ಎಂದಳು. ಚೌಧುರಿಯು, "ಈ ಸರಿಹೊತ್ತಿನಲ್ಲಿ ನೀನೆಲ್ಲಿಗೆ ಬರುವೆ? ಬೆಳಗ್ಗೆ ಜನರನ್ನು ಕಳುಹಿಸಿಕೊಡುವೆನು. ಆಗ ನೀನು ಬರಬಹುದು," ಎಂದನು.

"ಸೇವಕನು ಹೇಳಿದುದರಲ್ಲಿ, ತಡಮಾಡುವುದಾದರೆ ಯಜಮಾನನ ಮುಖ ದರ್ಶನವೇ ದುರ್ಲಭವಾಗುವುದು, ಎಂದು ತಿಳಿದು ಬಂದಿತು. ಹೀಗಿರುವಲ್ಲಿ ಅವರನ್ನು ನಾನು ಈ ಸಮಯದಲ್ಲಿಯೂ ನೋಡದಿರುವುದಕ್ಕೆ ಮನವೊಡಂಬಡುವುದಿಲ್ಲ. ನಾನೂ ನಿನ್ನೊಡನೆಯೇ ಹೊರಡತಕ್ಕವಳು," ಎಂದು ಸ್ವರ್ಣಕುಮಾರಿಯು ಹೇಳಿ ತಂದೆಯೊಡನೆ ದೋಣಿಯನ್ನೇರಿದಳು. ದೋಣಿಯು ಅಂಬಿನ ವೇಗದಿಂದ ಹೊರಟು ಹತ್ತು ನಿಮಿಷಗಳೊಳಗಾಗಿ ದೇವದುರ್ಗವನ್ನು ಸೇರಿತು. ದೇವದುರ್ಗದ ಮಂದಿರದಲ್ಲಿ ರಾಯಮಹಾಶಯನು ರೋಗದಿಂದ ಹಾಸುಗೆ ಹಿಡಿದು ಮಲಗಿರುವನು. ಇಬ್ಬರು ವೈದ್ಯ ಶಿಖಾಮಣಿಗಳು ರೋಗಿಯ ಇಕ್ಕಡೆಗಳಲ್ಲಿಯೂ ಕುಳಿತು ಚಿಕಿತ್ಸೆ ಮಾಡುತ್ತಿರುವರು. ಕಮಲಾಕಾಂತನಿಗೆ ಇಷ್ಟು ಪ್ರಬಲವಾದ ರೋಗವಿದ್ದರೂ ಅವನ ಬುದ್ಧಿ ಶಕ್ತಿಯಾಗಲಿ, ಮಾತಿನ ಶಕ್ತಿಯಾಗಲಿ ವಿಲೋಪಿಸಿರಲಿಲ್ಲ. ವೈದ್ಯರ ಸಾಹಸದಿಂದ ರೋಗಿಗೆ ತಾತ್ಕಾಲಿಕವಾದ ಗುಣ ಕಂಡು ಬರುತಿದ್ದಿತೇ ಹೊರತು ರೋಗಿಯು ಚಿರಕಾಲ ಬದುಕುವ ಸೂಚನೆಯು ಕಂಡು ಬರುತ್ತಿರಲಿಲ್ಲ. ಕಮಲಾಕಾಂತನು ಈ ಯವಸ್ಥೆಯಲ್ಲಿರುವಾಗ ಚೌಧುರಿ ಮತ್ತು ಕುಮಾರಿ ಇವರಿಬ್ಬರೂ ಆತನ ಬಳಿಯಲ್ಲಿ ಬಂದು ಕುಳಿತುಕೊಳ್ಳಲು, ಕಮಲಾಕಾಂತನು, "ನೀವಿಬ್ಬರೂ ಬಂದಿರಾ? ನೀವು ಬಂದುದು ಒಳ್ಳೆಯದಾಯಿತು. ನಾನು ಪರಲೋಕಕ್ಕೆ ತೆರಳುವ ಕಾಲವು ಸಮೀಪಿಸಿಕೊಂಡು ಬರುತ್ತಿರುವುದು," ಎಂದು ನುಡಿದನು.

ಕುಮಾರಿಯು ಈ ಮಾತನ್ನು ಕೇಳಿದೊಡನೆಯೇ ಅಳಲಾರಂಭಿಸಿದಳು. ಚೌಧುರಿಯ ಕಣ್ಣುಗಳಿಂದಲೂ ಕಂಬನಿಗಳು ಧಾರಾಕಾರವಾಗಿ ಹರಿಯಲಾರಂಭಿಸಿದುವು. ಆಗ ರಾಯಮಹಾಶಯನು ವೈದ್ಯರನ್ನು ನೋಡಿ, "ನಾನು ಇನ್ನೂ ಕೊಂಚಕಾಲ ಬದುಕುವ ಯೋಗವಿದೆಯೇ? ನೀವು ವಿವೇಚನೆ ಮಾಡಿ ತಿಳಿಸಿರಿ. ನಾನು ಸಾಯುವುದಕ್ಕೆ ಹೆದರುವುದಿಲ್ಲವಾದುದರಿಂದ, ನೀವು ಸುಳ್ಳನ್ನು ಹೇಳಿ ಕಾಲಹರಣಮಾಡಬೇಕಾದುದಿಲ್ಲ," ಎಂದು ಹೇಳಿದನು.

ಇದನ್ನು ಕೇಳಿದ ವೈದ್ಯಶಿಖಾಮಣಿಯೊಬ್ಬನು ಕೊಂಚ ಹೊತ್ತು ಚಿಂತಿಸಿದ ಬಳಿಕ, "ಮಹಾಶಯ, ತಮಗೆ ತಿಳಿಯದಿರುವುದಾವುದೂ ಇಲ್ಲ. ಈ ರೋಗದಿಂದ ಎಂದಾದರೊಂದುದಿನ ಸಾಯಲೇ ಬೇಕಾಗಿರುವುದು, ಒಂದು ವೇಳೆ ಜಗದೀಶ್ವರನ ಕೃಪಾವಿಶೇಷದಿಂದ ರೋಗವು ನಿವಾರಣೆಯಾಗಿ ಬದುಕಿದರೂ ಬದುಕಬಹುದು. ವೈದ್ಯನು ಮನುಷ್ಯಮಾತ್ರದವನೇ ಆಗಿರುವುದರಿಂದ, ಹೀಗೆಯೇ ಸರಿಯೆಂದು ಸಿದ್ಧಾಂತಮಾಡುವುದಕ್ಕೆ ಸಾಗದು. ದೇಹಮಾನವು ಅಸ್ಥಿರವಾದುದರಿಂದ, ಮಹಾಶಯ, ತಾವು ಇನ್ನೂ ಮಾಡಬೇಕಾದ ಕೆಲಸವು ಉಳಿದಿರುವುದಾದರೆ ಅದನ್ನು ಸಾಧ್ಯವಾದಷ್ಟು ಬೇಗನೆ ನೆರವೇರಿಸಿಬಿಡೋಣವಾಗಲಿ. ಅಲ್ಲಿಯ ವರೆಗೂ ನಾವು ಬೇರೊಂದೆಡೆಯಲ್ಲಿ ಕಾದಿರುವೆವು; ತಾವು ಬಯಸಿದ ಕೂಡಲೆ ಬಂದೂ ಬಿಡುವೆವು," ಎಂದು ಹೇಳಿ ಹೊರಗೆ ಹೊರಟು ಹೋದರು.

ರಾಯ ಮಹಾಶಯನು ಚೌಧುರಿ ಕುಮಾರಿಯರನ್ನು ರೆಪ್ಪೆಹಾಕದೆ ನೋಡಿ, "ನೀವು ನನಗಾಗಿ ಅಳಬೇಡಿರಿ. ನಾನು ಅಸಾರವಾದ ಇಹಸಂಸಾರವನ್ನು ಬಿಟ್ಟು ಶಾಶ್ವತವಾದ ಪರಲೋಕವನ್ನು ಕುರಿತು ತೆರಳುವವನಾಗಿರುವೆನು. ಎಂದಾದರೊಂದು ದಿನ ಆ ಸ್ಥಾನದಲ್ಲಿ ಎಲ್ಲರೂ ಸೇರತಕ್ಕವರಾಗಿಯೇ ಇರುವರು," ಎಂದು ಹೇಳಿದುದನ್ನು ಕೇಳಿ, ಚೌಧುರಿಯು, "ಅಣ್ಣ! ತಾವು ಈ ಲೋಕದಲ್ಲಿ ಮಾಡಿದ ಕೆಲಸವೆಲ್ಲವೂ ಸರಿಯಾದರೂ, ಒಂದು ವಿಷಯದಲ್ಲಿ ಮಟ್ಟಿಗೆ ವಿಚಾರಮಾಡದೆ ತೆರಳೋಣವಾಗಿದೆ. ಭಗವಂತನ ದಯೆಯಿಂದ ಅದನ್ನು ಸರಿಪಡಿಸುವುದಕ್ಕೆ ಇನ್ನೂ ಅವಕಾಶವಿರುವುದು. ನೀವು ಮಟ್ಟಿಗೆ ಮನಸ್ಸುಮಾಡಬೇಕು," ಎಂದನು.

"ನಾನು ವಿಚಾರಮಾಡಿಲ್ಲವೇ? ಮಹಾಶಯ," ಎಂದು ಕಮಲಾಕಾಂತನು ಹೇಳಿ ಸುಮ್ಮನಾದನು. ಕೂಡಲೆ ಅವನ ಮುಖವು ಬಾಡಿತು.

ಚೌಧುರಿ—ಅಣ್ಣ! ತಾವು ನಿಜವಾಗಿಯೂ ವಿಚಾರಮಾಡಿಲ್ಲ. ಈಗಲಾದರೂ ತಾವು ನನ್ನ ಮಾತನ್ನು ಕೇಳಲೇ ಬೇಕು. ಮಧುಸೂದನನು ತಮಗೆ ಯುಕ್ತರೂಪನಾದ ಉತ್ತರಾಧಿಕಾರಿ. ತಾವು ಆತನಿಗೆ ವಂಚನೆಮಾಡಿ ನಮಗೆ

ಸಂಪತ್ತನ್ನು ಕೊಟ್ಟಿರುವುದು ನೋಡಿದರೆ ತಾವು ಸರಿಯಾಗಿ ವಿಚಾರಮಾಡಿರುವಿರೆಂದು ಆರು ತಾನೇ ಹೇಳಬಲ್ಲರು? ಮಧುಸೂದನನು ದೋಷದುಷ್ಟನಾಗಿರಬಹುದು. ನಾನೂ ಅಪಲಾಪಮಾಡುವುದಿಲ್ಲ. ಅವನು ಎಷ್ಟೇ ಕೆಟ್ಟವನಾದರೂ ರಕ್ತದಿಂದ ನಿಮಗೆ ಸಂಬಂದಿಯಾಗಿಲ್ಲವೇ? ದೈವಸೃಷ್ಟಿಯಲ್ಲಿ ಅವನೂ ಒಂದು ಪ್ರಾಣಿಯಾಗಿರುವುದರಿಂದ, ಅವನನ್ನು ಕಾಪಿಡುವುದೂ ಭೂತದಯಾ ಪಶ್ಚಾತ್ತಾಪದಿಂದ ಮರುಗುವವನಿಗೆ ಒಂದು ಮುಖ್ಯವಾದ ಕರ್ತವ್ಯವೇ ಆಗಿರುವುದು. ಅಲ್ಲದೆಯೂ ಅವನು ತನ್ನ ತಪ್ಪುಗಳಿಗಾಗಿ ಅನುತಾಪಪಟ್ಟಿರುವನು. ಇಂತಹವನಿಗೆ ಯೋಗ್ಯತೆ ಮೀರಿ ಶಿಕ್ಷೆಮಾಡುವುದು ಉಚಿತವಲ್ಲ. ತಾವು ಮರಣಕಾದಲ್ಲಿ ಯಾದರೂ ಸುವಿಚಾರದಿಂದ ದಯೆಯನ್ನು ತೋರಿಸಬೇಕಲ್ಲವೆ? ತಾವು ಈ ಸಮಯದಲ್ಲಿಯೂ ವಿಚಾರಮಾಡದೇ ಹೋದಲ್ಲಿ, ತಮ್ಮ ಕೀರ್ತಿಯಲ್ಲಿ ಅನೊಂದು ಕಳಂಕವು ಶಾಶ್ವತವಾಗಿ ನಿಂತುಹೋಗುವುದು. ಲೋಕದಲ್ಲಿ ಒಳ್ಳೆಯ ಪ್ರಾಣಿಗಳೂ ಬದುಕುತ್ತವೆ. ಕೆಟ್ಟ ಪ್ರಾಣಿಗಳೂ ಬದುಕುತ್ತವೆ. ಮಧುಸೂದನನೆಂಬ ಪ್ರಾಣಿಯು ಒಳ್ಳೆಯವನೇ ಆಗಲಿ, ಕೆಟ್ಟವನೇ ಆಗಲಿ, ಅವನೂ ದೈವೇಚ್ಛೆಯಲ್ಲಿ ಬದುಕಬೇಕು. ತಾವು ಅವನನ್ನು ಬದುಕಿಸುವುದಾದರೆ ತಮಗೆ ಪುಣ್ಯಬರುವುದೂ ಅಲ್ಲದೆ ಭಗವಂತನೂ ಮೆಚ್ಚುವನು. ಶಿಷ್ಟನನ್ನು ಆರಾದರೂ ಕಾಪಿಡುವರು; ದುಷ್ಟನನ್ನು ಎಲ್ಲರೂ ದೂರಮಾಡುತ್ತ ಬಂದರೆ ಅವನ ಗತಿಯೆನು? ತಾವು ನಿಷ್ಠುರತೆಯಿಂದ ಹಠ ಹಿಡಿದು ಅವನಿಗೆ ವಂಚನೆ ಮಾಡಬಹುದು; ನಾನು ಎಂದಿಗೂ ಹಾಗೆ ಮಾಡಲಾರೆನು. ಅವನನ್ನು ತಿರಸ್ಕರಿಸುವುದು ಮಾನವನ ಧರ್ಮವೂ ಅಲ್ಲ. ತಾವು ವಿಚಾರಮಾಡೋಣವಾಗಲಿ.

ಸ್ವರ್ಣಕುಮಾರಿ—ದೊಡ್ಡಪ್ಪ! ಎಲ್ಲರೂ ಆತನ ವಿಷಯದಲ್ಲಿ ದಯೆ ತೋರಿಸುತ್ತಿರುವಲ್ಲಿ, ತಾವು ಮಟ್ಟಿಗೆ ಏತಕೆ ನಿರ್ದಯರಾಗಿರಬೇಕು? ತಾವು ಈ ಮರಣಕಾಲದಲ್ಲಿ ದ್ವೇಷಾಸೂಯೆಗಳೆಗೆಡೆಗುಡದೆ ಆತನನ್ನು ಕ್ಷಮಿಸೋಣವಾಗಲಿ. ತಾವು ಎಂದೂ ಅನ್ಯಾಯದಲ್ಲಿ ಪ್ರವರ್ತನೆಮಾಡಿದವರಲ್ಲ. ಆದುದರಿಂದ ತಾವು ನ್ಯಾಯದೃಷ್ಟಿಯಿಂದ ಇದನ್ನು ಸರಿಪಡಿಸಿ ಶಾಂತಿಯಿಂದ ತೆರಳೋಣವಾಗಲಿ. ತಾವು ಕೆಲಸವನ್ನು ನೆರವೇರಿಸದೇ ತೆರಳುವುದಾದರೆ, ತಮ್ಮ ಆಸ್ತಿಯೆಷ್ಟಿದ್ದರೂ ಅದರಿಂದ ನನಗೆ ಕೊಂಚವೂ ಸುಖವುಂಟಾಗುವುದಿಲ್ಲ. ತಮ್ಮ ಈ ಅವಿಚಾರದಿಂದ ನಾನು ಬದುಕಿರುವ ವರೆಗೂ ದುಃಖದಿಂದ ನರಕಯಾತನೆಯನ್ನೇ ಅನುಭವಿಸಬೇಕಾದೀತು!

ಕಮಲಾಕಾಂತನು ಇವರಿಬ್ಬರ ಮಾತುಗಳನ್ನೂ ಕೇಳಿದನು. ಅವನಿಗೆ ಮರಣಸಂಕಟದ ಜತೆಗೆ ಈ ಹೊಸಸಂಕಟವೂ ಸೇರಿದಂತಾಗಿ ದಿಕ್ಕೇ ತೋರಲಿಲ್ಲ.

ಅವನ ಕಣ್ಣುಗಳಿಂದ ಮಟ್ಟಿಗೆ ನೀರು ದರದರನೆ ಹರಿಯಲಾರಂಭವಾಯಿತು. ಇದನ್ನು ನೋಡಿ ಎಲ್ಲರೂ ಬಲು ಹೊತ್ತು ನೀರವವಾಗಿದ್ದು ಬಿಟ್ಟರು. ಬಳಿಕ ಚೌಧುರಿಯು, "ಅಣ್ಣ! ದೇವರ ದಯೆಯಿಂದ ನಿಮ್ಮ ಹೃದಯದಲ್ಲಿ ದಯಾ ಸಂಚಾರವಾಗುತ್ತಿರುವುದು. ಇದಕ್ಕಾಗಿ ನಾನು ಭಗವಂತನಿಗೆ ವಂದಿಸುವೆನು. ಇಷ್ಟು ದಿನಗಳು ನಾನು ನಿಮಗೆ ಏನನ್ನೂ ಹೇಳಿದವನಲ್ಲ. ಈಗ ನನ್ನ ಮನೋ ಗತವನ್ನು ತಮ್ಮಲ್ಲಿ ತಿಳಿಸಿಬಿಡುವೆನು. ನನ್ನ ಕುಮಾರಿಯು ನಿಮ್ಮ ಇಷ್ಟು ಅಪರಿ ಮಿತವಾದ ಸಂಪತ್ತಿನ ಮೇಲೆ ಅಧಿಕಾರಮಾಡಲು ಇಷ್ಟವುಳ್ಳವಳಾಗಿಲ್ಲ," ಎಂದು ಹೇಳಿಬಿಟ್ಟನು.

ಸ್ವರ್ಣ—ತಂದೆಯು ನಿಜವಾಗಿಯೇ ಮಾತನಾಡಿರುವನು. ನಾನು ಈ ಸಂಪತ್ತಿಗೆ ಅಧಿಕಾರಿಣಿಯಾಗುವೆನೆಂಬುದನ್ನು ಸ್ಮರಣೆ ಮಾಡಿದೊಡನೆಯೇ ನನ್ನ ಹೃದಯವು ಗಡಗಡನೆ ನಡುಗುವುದು. ಈ ದೊಡ್ಡಮನೆಯಲ್ಲಿ ವಾಸಮಾಡುವುದು ನನಗೆ ಭಯಜನಕವಾಗಿರುವುದು, ನನ್ನಂತಹವಳಿಗೆ ಸಣ್ಣ ಕುಟೀರವೇ ಎಷ್ಟೋ ಸುಖಕರವು. ನನಗೆ ಅಭಾವವೆಂಬುದು ಅಲ್ಪ; ಅಲ್ಪದಿಂದಲೇ ನನಗೆ ತುಂಬಾ ಸಂತೋಷ. ಆರಿಗೆ ಹಣದ ಮೇಲೆ ಆಸೆಯಿರುವುದೋ ಅವರು ಹಣದಿಂದ ಸುಖಿಗಳಾಗಿರಲಿ. ನಾನು ದಾರಿದ್ರ್ಯದಲ್ಲಿಯೇ ಸುಖಯೋಗವನ್ನು ಪಡೆಯಲಾಪೆನು. ಮನಸ್ಸಿಗೆ ಸಂತೋಷವು ಐಶ್ವರ್ಯವೇ ಹೊರತು ಧನಧಾನ್ಯ ಮಣಿಕನಕಗಳಲ್ಲ. ಇವುಗಳೆಲ್ಲವೂ ಅನರ್ಥಪರಂಪರೆಗೆ ತೌರೂರಾಗಿರುವುವು.

ಕಮಲಾಕಾಂತನು ತಾನು ಸಾಯುವ ಕಾಲದಲ್ಲಿ ಹಠಹಿಡಿದು ಇತರರ ಮನ ಸ್ಸನ್ನು ನೋಯಿಸುವುದು ಸರಿಯಲ್ಲವೆಂದು ಭಾವಿಸಿದವನಾಗಿ, "ಚೌಧುರಿ ಮಹಾ ಶಯ, ಈಗ ತಮ್ಮ ಅಭಿಪ್ರಾಯವೇನು? ಅದನ್ನು ತಿಳಿಸಿದಲ್ಲಿ ನಾನು ಅದರಂ ತೆಯೇ ನಡೆಯಿಸುವೆನು," ಎಂದನು.

ಚೌಧುರಿ—ಅಣ್ಣ! ತಾವು ಈಗಳೇ ಹಿಂದಣ ತಮ್ಮ ಮರಣಶಾಸನ ವನ್ನು ಮಾರ್ಪಡಿಸಬೇಕು. ನನ್ನ ಕುಮಾರಿಗೆ ತಾವು ಕೊಟ್ಟಿರುವುದೆಲ್ಲವೂ ಮಧು ಸೂದನನಿಗೆ ಸಲ್ಲಬೇಕು. ತಾವು ದಯೆಯಿಟ್ಟು ನನಗೆ ಕೊಟ್ಟಿರುವುದೇ ನಮ್ಮಿ ಬ್ಬರಿಗೂ ಸಾಕು. ನಮಗೆ ಹೆಚ್ಚಿನ ದುರಾಶೆಯಿಲ್ಲ.

ಕಮಲಾ—ನಾನು ಕುಮಾರಿಗೆ ಕೊಟ್ಟಿರುವುದರಲ್ಲಿ ಕೆಲವನ್ನು ತೆಗೆದು ಮಧುಸೂದನನಿಗೆ ಕೊಡಲೇ? ಇಲ್ಲವೆ, ಕುಮಾರಿಗೆ ಏನೂ ಕೊಡಬೇಡವೇ?

ಸ್ವರ್ಣ—ತಾವು ನನಗೆ ಏನೂ ಕೊಡಕೂಡದೆಂದೇ ನನ್ನ ಪ್ರಾರ್ಥನೆ. ನಾನು ಸಂತೋಷದಿಂದ ಎಲ್ಲವನ್ನೂ ತ್ಯಾಗಮಾಡುವವಳಾಗಿರುವೆನು.

ಕಮಲಾ—ಚೌಧುರಿ ಮಹಾಶಯ, ನಾನು ತಮಗೆ ಕೊಟ್ಟಿರುವುದು ನಿಮ್ಮಿಬ್ಬರಿಗೂ ಆಗುವುದೇನೋ ನಿಜ; ಆದರೆ ಅದರಿಂದ ಕುಮಾರಿಗೆ ಸರಿಯಾದ ಪುರಸ್ಕಾರಮಾಡಿದಂತಾಗುವುದಿಲ್ಲ.

ಚೌಧುರಿ—ತಮಗೆ ತೋರಿದಂತೆ ಮಾಡಬಹುದು. ಮಧುಸೂದನನಿಗೆ ಜೀವನೋಪಾಯಕ್ಕೆ ತೊಂದರೆಯಿಲ್ಲದ ಹಾಗೆ ಏನಾದರೂ ಕೊಡಬೇಕೆಂದೇ ನನ್ನ ಆಶಯವು. ಅವನಿಂದಲೇ ನಿಮ್ಮ ಉತ್ತರಕ್ರಿಯಾದಿಗಳೂ ನಡೆಯಬೇಕು, ಅವನಿಂದಲೇ ನಿಮ್ಮ ಕುಲವೂ ವೃದ್ಧಿಯಾಗಬೇಕು. ಇದಕ್ಕಾಗಿಯಾದರೂ ಅವನಿಗೆ ಪಾಲುಕೊಡಬೇಕು.

ಕಮಲಾಕಾಂತನು ಹಾಗೆಯೇ ಆಗಲೆಂದು ಮಾತ ಕೊಟ್ಟು ಹೊರಗಿದ್ದ ವೈದ್ಯರಿಬ್ಬರನ್ನೂ ಒಳಗೆ ಬರಮಾಡಿಕೊಂಡನು. ಚೌಧುರಿಯು ಮಸಿಯ ಕುಡಿಕೆ, ಕಾಗದ, ಲೇಖನಿಗಳನ್ನು ತಂದು ಮುಂದಿಟ್ಟನು. ಚಿಕ್ಕ ವೈದ್ಯನು ಮರಣಶಾಸನವನ್ನು ಬರೆಯುವುದಕ್ಕೆ ಕುಳಿತನು. ರಾಯಮಹಾಶಯನು ಹೇಳ ತೊಡಗಿದನು:—

"ನನ್ನ ಷಡ್ಡಕನಾದ ಗೋವಿಂದಚಂದ್ರ ಚೌಧುರಿ ಮಹಾಶಯನು ನನ್ನ ಸಂಪತ್ತಿಗೆ ಕಾರ್ಯನಿರ್ವಾಹಕನಾಗಿರತಕ್ಕುದು. ಇವರಿಗೆ ಒಂದು ಲಕ್ಷ ರೂಪಾಯಿಗಳು ಸಲ್ಲತಕ್ಕುವು. ವೀರಚಂದ್ರನ ಒಬ್ಬೊಬ್ಬ ಹೆಣ್ಣು ಮಗಳಿಗೂ ಹತ್ತು ಸಾವಿರ ರೂಪಾಯಿಗಳಂತೆಯೂ, ಜಯಚಂದ್ರನ ಒಬ್ಬೊಬ್ಬ ಹೆಣ್ಣು ಮಗಳಿಗೂ ಇಪ್ಪತ್ತುಸಾವಿರ ರೂಪಾಯಿಗಳಂತೆಯೂ ಸಂದಾಯವಾಗತಕ್ಕುದು. ನನ್ನ ಉತ್ತರಕ್ರಿಯಾದಿಗಳಿಗೆ ಹತ್ತುಸಾವಿರ ರೂಪಾಯಿಗಳ ವರೆಗೂ ವಿನಿಯೋಗಿಸಲ್ಪಡಬಹುದು. ಇಪ್ಪತ್ತು ಲಕ್ಷರೂಪಾಯಿಗಳನ್ನು ಸಿದ್ಧಸಾರಸ್ವತಾಶ್ರಮದ ಶ್ರೀ ಸರಸ್ವತೀ ಪೀಠದಲ್ಲಿ ಸಮರ್ಪಿಸತಕ್ಕುದು. ಉಳಿವ ಎಲ್ಲಾ ಚರಸ್ಥಿರ ಸಂಪತ್ತಿಗೂ ನನ್ನ ತಮ್ಮನ ಮಗನಾದ ಮಧುಸೂದನನು ಉತ್ತರಾಧಿಕಾರಿಯಾಗಿರತಕ್ಕುದು."

"ಇನ್ನೇನಾದರೂ ಇದ್ದರೆ ತಿಳಿಸೋಣವಾಗಲಿ" ಎಂದು ಚಿಕ್ಕ ವೈದ್ಯನು ಕೇಳಲಾಗಿ, ಕಮಲಾಕಾಂತನು ಹೇಳಿದುದೇನೆಂದರೆ :—"ಮಧುಸೂದನನು ಪ್ರಾಚೀನಕರ್ಮಶೇಷದಿಂದ ದುಶ್ಚರಿತ್ರನು. 'ಹುಟ್ಟಿದ ಸುಳಿ ಬೋಳಿಸಿದರೆ ಹೋದೀತೇ' ಎಂಬ ಗಾದೆಯಂತೆ ಅವನು ಎಂದಿಗೂ ಯೋಗ್ಯನಾಗುವುದಿಲ್ಲ ; ಅಲ್ಲದೆಯೂ ಅಧಮನ ಕೈಯಲ್ಲಿ ಅರ್ಪಿಸಿದ ನನ್ನ ಸಂಪತ್ತು ಬಹುಕಾಲ ಉಳಿವುದೂ ಇಲ್ಲ. ಇದಕ್ಕಾಗಿ ನಾನು ಈಗ ವ್ಯಸನಪಟ್ಟರೂ ಪ್ರಯೋಜನವಿಲ್ಲ. ನಾನು ನ್ಯಾಯಮಾರ್ಗದಲ್ಲಿ ಈ ಸಂಪತ್ತನ್ನು ಗಳಿಸಿಟ್ಟದ್ದ ಪಕ್ಷದಲ್ಲಿ ಇದು ಚಿರಕಾಲ ನಿಂತು ಹತ್ತು ಜನಕ್ಕೆ ಉಪಕಾರಕವಾಗಲಿ, ಇಲ್ಲವೇ ನಾಳೆಯೇ ಹಾಳಾಗಿ ಹೋಗಲಿ. ನಾನು ಇದರ ಅಭಿಮಾನವನ್ನು ತ್ಯಾಗಮಾಡಿರುವೆನು," ಎಂದು ನುಡಿದನು.

ವೈದ್ಯ—ಮತ್ತೇನಾದರೂ ಉಂಟೋ ?

ಕಮಲಾ—ಇನ್ನೇನೂ ಇಲ್ಲ. ಅದಕ್ಕೆ ನಾನು ಸ್ವಹಸ್ತಾಕ್ಷರವನ್ನು ಬರೆಯಬೇಕು. ಪತ್ರ ಕೊಡೋಣವಾಗಲಿ.

ವೈದ್ಯರಿಬ್ಬರೂ ಕಮಲಾಕಾಂತನನ್ನು ಹಿಡಿದು ಕೂಡಿಸಲು, ಆತನು ಅತಿ ಪ್ರಯಾಸದಿಂದ ಕೈಬರೆಹವನ್ನು ಹಾಕಿದನು. ಚೌಧುರಿಯೂ ವೈದ್ಯರಿಬ್ಬರೂ ಅದಕ್ಕೆ ಸಾಕ್ಷಿ ಹಾಕಿದರು. ಬಳಿಕ ರೋಗಿಯ ಇಷ್ಟಾನುಸಾರವಾಗಿ ಮತ್ತೆ ವೈದ್ಯರಿಬ್ಬರೂ ಹೊರಗೆ ಹೊರಟುಹೋದರು. ರಾಯಮಹಾಶಯನು ಚೌಧುರಿಯನ್ನು ಕುರಿತು, "ಮಹಾಶಯ ! ಎಲ್ಲವೂ ನಿನ್ನ ಇಷ್ಟದಂತೆಯೇ ನಡೆದಿರುವುದು. ಈಗ ನೀವು ಶಾಂತರಾಗಿರಬಹುದಲ್ಲವೇ ? ನಿಮ್ಮಂತಹ ಸ್ವಾರ್ಥತ್ಯಾಗಿಗಳು ಲೋಕದಲ್ಲಿ ಅತಿವಿರಳರು. ನೀವೊಬ್ಬರೇ ಲೋಕ ವಿಲಕ್ಷಣವಾದ ಸ್ವಭಾವವುಳ್ಳವರು. ದೇವರು ನಿಮಗೆ ಮಂಗಳ ಪರಂಪರೆಯನ್ನುಂಟು ಮಾಡಲಿ," ಎಂದನು.

ಚೌಧುರಿ ಮಹಾಶಯನು ಪರಮಾನಂದಭರಿತನಾಗಿ ರಾಯಮಹಾಶಯನನ್ನು ಆಲಿಂಗನೆಮಾಡಿಕೊಂಡನು. ಸ್ವರ್ಣಕುಮಾರಿಯು ಕಮಲಾಕಾಂತನ ಪಾದಗಳಿಗೆರಗಿದಳು. ರಾಯಮಹಾಶಯನು ಆಕೆಗೆ ಶುದ್ಧಾಂತಃಕರಣ ಪರಿಪೂತವಾದ ಸತ್ಯಾಶೀರ್ವಾದವನ್ನು ಮಾಡಿ ಶಾಂತನಾಗಿ ಹಾಸುಗೆಯಲ್ಲಿ ಮಲಗಿದನು. ಚೌಧುರಿಯು ಪಕ್ಕದಲ್ಲಿಯೇ ಕುಳಿತುಕೊಂಡು ರೋಗಿಯ ಯೋಗಕ್ಷೇಮವನ್ನು ನೋಡಿಕೊಳ್ಳುತಿದ್ದನು. ವೈದ್ಯರಿಬ್ಬರೂ ಮತ್ತೆ ರೋಗಿಯ ಪಕ್ಕದಲ್ಲಿ ಬಂದು ಕುಳಿತರು. ಕಮಲಾಕಾಂತನು ಎಲ್ಲರನ್ನೂ ಒಂದು ತಡವೆ ನೋಡಿದವನಾಗಿ, "ನನಗೆ ಕಾಲವು ಒದಗಿಬರುತ್ತಿದೆ. ನನ್ನನ್ನು ಗಂಗಾತೀರಕ್ಕೆ ತೆಗೆದುಕೊಂಡು ಹೋಗಿರಿ," ಎಂದನು.

ಚೌಧುರಿ—ತಾವು ಗಂಗಾಗರ್ಭದಲ್ಲಿಯೇ ಇರೋಣವಾಗಿದೆ. ತಾವು ಗಂಗಾತೀರಕ್ಕೆ ಹೋಗಿ ಮಾಡುವುದೇನು ?

ವೈದ್ಯರು—ನಿಮ್ಮನ್ನು ಕದಲಿಸುವುದಕ್ಕೆ ಇದು ಕಾಲವಲ್ಲ.

ಕಮಲಾ—ಹಾಗಾದರೆ ನನಗೆ ಗಂಗಾತೀರ್ಥವನ್ನು ಕೊಟ್ಟು ಕಿವಿಯಲ್ಲಿ ನಾರಾಯಣ ಮಂತ್ರವನ್ನು ಜಪಿಸಿರಿ. ನಾನು ಇನ್ನು ಹೆಚ್ಚುಕಾಲ ಉಳಿಯುವ ಹಾಗಿಲ್ಲ. ಅನಂತರದಲ್ಲಿ ನನ್ನ ದೇಹದ ಸತ್ಕಾರಕ್ಕೆ ಮಧುಸೂದನನ ಆಗಮನವನ್ನು ನಿರೀಕ್ಷಿಸಬೇಕಾದುದಿಲ್ಲ.

ರಾಯಮಹಾಶಯನ ಅಭಿಪ್ರಾಯಾನುಸಾರವಾಗಿ ಆತನ ಬಾಯಲ್ಲಿ ತೀರ್ಥವು ಹಾಕಲ್ಪಟ್ಟಿತು. ಕಿವಿಯಲ್ಲಿ ನಾರಾಯಣ ಮಂತ್ರ ಜಪವೂ ಜಪಿಸಿದುದಾಯಿತು. ಇದನ್ನು ನೋಡಿದ ಕೂಡಲೆ ಸ್ವರ್ಣಕುಮಾರಿಯು ಮುಖವನ್ನು ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳುವುದಕ್ಕೆ ಮೊದಲು ಮಾಡಿದಳು. ಚೌಧುರಿಯ ಕಣ್ಣುಗಳಲ್ಲಿಯೂ ನೀರು ತುಂಬಿಕೊಂಡಿತು. ಕ್ರಮಕ್ರಮವಾಗಿ ರಾತ್ರಿಯು ಬೆಳಗಾಗುತ ಬಂದಿತು. ಮಂದ ಮಾರುತವು ಹೊರಗಿನಿಂದ ಮನೆಯೊಳಗೆ ಮೆಲ್ಲಮೆಲ್ಲನೆ ಬರಲಾರಂಭವಾಯಿತು. ಇದನ್ನು ನೋಡಿ ಹೆದರಿತೋ ಎಂಬಂತೆ ಕಮಲಾಕಾಂತನ ಪ್ರಾಣವಾಯುವು ಒಳಗಿನಿಂದ ಹೊರಗೆ ಹೊರಡಲು ಸಿದ್ಧವಾಗುತ ಬಂದಿತು. ರಾಯನ ಬಾಯಿಂದ ಇಷ್ಟದೇವತೆಯ ನಾಮೋಚ್ಚಾರಣೆಯೂ ನಿಂತುಹೋಯಿತು. ಮುಖದಲ್ಲಿ ಕಂಡುಬರುತಿದ್ದ ಜೀವದ್ದಶೆಯ ಕಾಂತಿವಿಶೇಷವು ಬೆಳಗಿನ ಚಂದ್ರದಂತೆ ಪ್ರಭಾರಹಿತವಾಯಿತು. ಸ್ವರ್ಣಕುಮಾರಿಯ ರೋದನಧ್ವನಿಯು ಹೆಚ್ಚುತ ಬಂದು ಎಲ್ಲೆಲ್ಲಿಯೂ ಪ್ರತಿಧ್ವನಿಯಾಗಲು ಮನೆಯ ಗೋಡೆಗಳೆಲ್ಲಾ ಅಳುವುವೋ ಎಂಬಂತೆ ತೋರಿಬರುತಿದ್ದಿತು. ಚೌಧುರಿ ಮಹಾಶಯನು ಹಣದ ಕೋಣೆಗೆ ಬೀಗಹಾಕಿ ಮೃತಿಪತ್ರವನ್ನು ಒಂದೆಡೆಯಲ್ಲಿ ಭದ್ರಪಡಿಸಿಟ್ಟನು.

ಮೂರುದಿನಗಳು ಕಳೆದ ಹೋದ ಬಳಿಕ ಮಧುಸೂದನನು ದೇವದುರ್ಗಕ್ಕೆ ಬಂದನು. ಅವನು ಬರುವುದರೊಳಗಾಗಿಯೇ ರಾಯಮಹಾಶಯನ ದೇಹಸಂಸ್ಕಾರವು ಮುಗಿದುಹೋಗಿದ್ದಿತು. ಮಧುಸೂದನನು ದೊಡ್ಡಪ್ಪನ ಮುಖವನ್ನು ಸಾಯುವ ಕಾಲದಲ್ಲಿಯಾದರೂ ನೋಡುವುದಕ್ಕಿಲ್ಲದೇ ಹೋಯಿತಲ್ಲಾ ಎಂದು ಸಂಕಟಪಡುತ್ತಾ ಕಂಡಕಂಡವರ ಇದಿರಿಗೆಲ್ಲಾ ಗಳಗಳನೆ ಅಳಲಾರಂಭಿಸಿದನು. ಚೌಧುರಿಯು ಎಷ್ಟೋ ಬಗೆಯಲ್ಲಿ ಸಮಾಧಾನಪಡಿಸುವನು ; ಸಮಾಧಾನ ಪಡಿಸಿದ ಹಾಗೆಲ್ಲಾ ಮಧುಸೂದನನ ಅಳುವು ತಲೆಮಿಾರಿ ಹೋಗುತಲಿದ್ದಿತು. ಮಧುಸೂದನನು ತನ್ನ ದೊಡ್ಡಪ್ಪನ ವಿಷಯವಾಗಿ ಏನೇನೋ ಕೇಳಿನೋಡಿದನು. ಚೌಧುರಿಯು ಮೃತಿಪತ್ರದ ವಿಷಯವನ್ನು ಮಟ್ಟಿಗೆ ತಿಳಿಸಲಿಲ್ಲ. ಕೆಲವು ದಿನಗಳಾದ ಮೇಲೆ ವೀರಚಂದ್ರ ಜಯಚಂದ್ರರಿಬ್ಬರೂ, ತಮ್ಮ ತಮ್ಮ ಹುಡುಗಿಯರನ್ನು ಕರೆದುಕೊಂಡು ಬಂದು ಸೇರಿದರು. ಕಾಲಕ್ರಮದಲ್ಲಿ ವಕೀಲು ವಿಧುಭೂಷಣ ಮಹಾಶಯನೂ ಬಂದನು. ಆತನು ಬಂದ ಕೂಡಲೇ ಚೌಧುರಿಯು ಆತನೊಡನೆ ಮಾತನಾಡುವುದಕ್ಕಾಗಿ ಒಂದು ಕೋಣೆಗೆ ಆತನನ್ನು ಕರೆದುಕೊಂಡುಹೋದನು. ಕೋಣೆಯ ಬಾಗಿಲು ಸಂಪೂರ್ಣವಾಗಿ ಮುಚ್ಚಲ್ಪಡಲಿಲ್ಲ. ಮಧುಸೂದನನು ಇವರಿವರ ಮಾತುಗಳಲ್ಲಿ ಏನಾದರೂ ಗುಟ್ಟು ರಟ್ಟಾಗಬಹುದೆಂದು ತಿಳಿದು ಕೋಣೆಯ ಬಳಿಯಲ್ಲಿ ಬಂದು ನಿಂತನು. ಚೌಧುರಿಯು ಪಿಸುಮಾತಿನಲ್ಲಿ ಮಾತನಾಡುತಿದ್ದುದರಿಂದ, ಮಧುಸೂದನನಿಗೆ ಅದರ ಭಾವವೇ ಗೊತ್ತಾಗಲಿಲ್ಲ. ಮಾತೆಲ್ಲವೂ ಮುಗಿದ ಮೇಲೆ ವಕೀ

ಲನು ಚೌಧುರಿಯನ್ನು ಕುರಿತು, "ಮಹಾಶಯ, ಮರಣಶಾಸನದ ಸಾರವು ಗೊತ್ತಾದಹಾಗಾಯಿತು. ಆಸ್ತಿಯು ಆವ ರೀತಿಯಲ್ಲಿ ಪಾಲುಮಾಡಲ್ಪಟ್ಟಿರುವುದು ಎಂಬುದನ್ನು ತಿಳಿಸೋಣವಾಗಲಿ, ನಾನು ಅದನ್ನು ನನ್ನ ಪ್ರಯೋಜನಕ್ಕಾಗಿ ಗುರುತುಮಾಡಿಟ್ಟುಕೊಳ್ಳುವೆನು. ನಾನು ಅದನ್ನು ಆರಲ್ಲಿಯೂ ಪ್ರಕಾಶಪಡಿಸುವುದಿಲ್ಲ," ಎಂದು ತನ್ನ ಸಹಜವಾದ ಧ್ವನಿಯಿಂದ ಮಾತನಾಡಿದನು.

ಚೌಧುರಿಯು ತಿಳಿಸಿದ ಮೃತಿಪತ್ರದ ವಿವರವಿದು :—

| | |
|---|---|
| ವೀರಚಂದ್ರನ ಹೆಣ್ಣುಹುಡುಗಿಯರಿಬ್ಬರಿಗೂ .... .... | ೨೦,೦೦೦. |
| ಜಯಚಂದ್ರನ ಹೆಣ್ಣುಹುಡುಗಿಯರಿಬ್ಬರಿಗೂ .... .... | ೪೦,೦೦೦. |
| ಗೋವಿಂದಚಂದ್ರ ಚೌಧುರಿಗೆ .... .... .... .... | ೧,೦೦,೦೦೦. |
| ರಾಯರ ಉತ್ತರ ಕ್ರಿಯಾದಿಗಳಿಗೆ .... .... .... | ೧೦,೦೦೦. |
| ಸರಸ್ವತೀ ಪೀಠಕ್ಕೆ .... .... .... .... .... | ೨೦,೦೦.೦೦೦. |
| ಮಧುಸೂದನನಿಗೆ | |
| ಸ್ಥಿರಸ್ವತ್ತು .... .... .... .... .... .... | ೧೮,೩೦,೦೦೦. |
| ಒಡವೆಗಳು ಮತ್ತು ಇತರ ಸಾಮಾಗ್ರಿಗಳು .... | ೧೦,೦೦,೦೦೦. |
| ನಗದು .... .... .... .... .... .... .... | ೫೦,೦೦,೦೦೦. |
| ಒಟ್ಟು ಒಂದುಕೋಟಿ ರೂಪಾಯಿಗಳು | ೧,೦೦,೦೦,೦೦೦. |

ವಕೀಲನು ದ್ರವ್ಯವಿಭಾಗದ ಕ್ರಮವನ್ನು ಬರೆದುಕೊಂಡ ಬಳಿಕ "ಇದರಲ್ಲಿ ನಿಮ್ಮೊಬ್ಬರ ಹೆಸರೇ ಇರುವದು," ಎಂದನು.

ಚೌಧುರಿ—ಅಹುದು, ನನ್ನ ಹೆಸರಿನಲ್ಲಿರುವುದೇ ಇಬ್ಬರಿಗೂ ಸಾಕು.

ವಕೀಲ—ಮೃತಿ ಪತ್ರವನ್ನು ಭದ್ರಪಡಿಸಿಟ್ಟಿರುವಿರಷ್ಟೆ? ಎಲ್ಲಿಟ್ಟಿರುವಿರಿ?

ಚೌಧುರಿ—ರಾಯಮಹಾಶಯನು ಆವ ಕೋಣೆಯಲ್ಲಿ ಮರಣವನ್ನಯ್ದಿದನೋ, ಅದೇ ಕೋಣೆಯಲ್ಲಿಯೇ ಒಂದು ದೊಡ್ಡ ಪೆಟ್ಟಿಗೆಯಲ್ಲಿ ಭದ್ರಪಡಿಸಿಟ್ಟಿರುವೆನು. ಅದರ ಬೀಗದಕೈ ಆವಾಗಲೂ ನನ್ನ ಜೇಬಿನಲ್ಲಿಯೇ ಇರುತ್ತಿರುವುದು. ಆದಕ್ಕಾಗಿ ಭಯಪಡಬೇಕಾದುದೇನೂ ಇರುವುದಿಲ್ಲ.

ಮಧುಸೂದನನು ಈ ಮಾತನ್ನು ಕೇಳಿ ತನ್ನ ಉದ್ದೇಶವು ನೆರವೇರಿತೆಂದೆಂದುಕೊಂಡು ಬೇರೆಯ ಕಡೆಗೆ ಹೊರಟುಹೋದನು. ಅವನ ಆನಂದಕ್ಕೆ ಪಾರವೆಲ್ಲಿಯದು? ಕಮಲಾಕಾಂತನು ಆಸ್ತಿಯೆಲ್ಲವನ್ನೂ ತನಗೆ ಕೊಟ್ಟುಬಿಡುವನೆಂದು ಮಧುಸೂದನನು ಸ್ವಪ್ನದಲ್ಲಿಯೂ ತಿಳಿದಿರಲಿಲ್ಲ. ಲಕ್ಷ್ಮಿಯು ತಾನಾಗಿಯೇ ಬಂದು ವರಿಸುವುದಾಗಿ ಬಯಸಿದಲ್ಲಿ ಆರು ತಾನೇ ಬೇಡವೆನ್ನುವರು! ಹಣವನ್ನು ತೃಣವಾಗಿ ಎಣಿಸುವ ಸ್ವರ್ಣಕುಮಾರಿಯಂತಹ ಒಬ್ಬಿಬ್ಬರು ಲೋಕದಲ್ಲಿ ಇದ್ದರೂ ಇರಬಹುದು. ಅವರು ದೇವತಾಸ್ವರೂಪಿಗಳೇ ಆಗಿರುವರು. ಅವರ ಮಾತು ಹಾಗಿರಲಿ. ಮಧುಸೂದನನು ತಾನೇ ಜಹಗೀರುದಾರನೆಂದು ತಿಳಿದು ಹಿಗ್ಗಿಹೋದನು. ಅವನ ಸಂತೋಷವು ಎಲ್ಲಿಯೂ ಅಡಗಿರುದು. ಒಂದೇ ತಡವೆಗೆ ಎಂಬತ್ತು ಲಕ್ಷ ರೂಪಾಯಿಗಳು ಕೈಸೇರುವಲ್ಲಿ ಆರು ತಾನೇ ಆನಂದದಿಂದ ಮೆಯ್ಯುಬ್ಬದಿರರು? ಅನೇಕದರಿದ್ರರು ತಮಗೆ ಹಠಾತ್ತಾಗಿ ಬಂದ ಐಶ್ವರ್ಯದ ಸುದ್ದಿಯನ್ನು ಕೇಳಿಯೇ ಪ್ರಾಣಬಿಟ್ಟಿರುವರು. ಅವರು ಪ್ರಾಣಬಿಟ್ಟಮಾತು ಹಾಗಿರಲಿ. ಇದು ಸಂತೋಷದ ಆಧಿಕ್ಯವನ್ನು ಸೂಚಿಸುವುದು. ಎಲೌ ಕ್ಷೀರಸಾಗರ ಕನ್ಯಕೆ! ನಿನ್ನ ಮಹಿಮೆಯನ್ನು ಆದ್ಯೋಪಾಂತವಾಗಿ ಬಲ್ಲವರಾರು? ನಿನ್ನ ಚಾಂಚಲ್ಯ ಸ್ವಭಾವದಿಂದ ಇಂದು ದರಿದ್ರರಾದವರನ್ನು ನಾಳೆ ಐಶ್ವರ್ಯವಂತರನ್ನಾಗಿಯೂ, ಇಂದು ಐಶ್ವರ್ಯವಂತರಾದ ಲಕ್ಷಾಧಿಪತಿಗಳನ್ನು ನಾಳೆ ಭಿಕ್ಷಾಧಿಪತಿಗಳನ್ನಾಗಿಯೂ ಮಾಡುತಲಿರುವೆ. ಇದರಿಂದ ನಿನಗೆ ಆವ ಪ್ರಯೋಜನವೋ ಗೊತ್ತಿಲ್ಲ. ನಿನಗೆ ಗುಣವಂತನನ್ನು ಕಂಡರಾಗದು; ವಿದ್ಯಾವಂತನನ್ನು ಕಂಡರಂತೂ ಮೆಯ್ಯುರಿದುಹೋಗುವುದು. ನೀನು ಕುರೂಪಿಯನ್ನು ಮೋಹಿಸುವೆ, ಜಿಪುಣನಲ್ಲಿ ವಾಸಿಸುವೆ. ನಿನ್ನ ವ್ಯಾಪಾರವಾದರೋ ಸಾಮಾನ್ಯರ ಬುದ್ಧಿಗೆ ಗೋಚರಿಸುವುದೇ ಇಲ್ಲ. ಜನರು ನಿನ್ನ ಸ್ವಭಾವವನ್ನು ತಿಳಿತಿಳಿದೂ ನಿನ್ನನ್ನೇ ಬಯಸುವರು. ಲೋಕದ ಜನರ ಸ್ವಭಾವವನ್ನು ಕುರಿತು ಏನೆಂದು ವರ್ಣಿಸುವ!

ಮಧುಸೂದನನು ತನ್ನ ಕೆಲವು ದಿನಗಳ ಚಾತುರ್ಯದಿಂದ ಅಪರಿಮಿತವಾದ ಲಾಭಸಂಪಾದನೆಯಾದುದಕ್ಕಾಗಿ ತನ್ನಲ್ಲಿ ತಾನೇ ಹಿಗ್ಗಿಹೋದನು. ಮಧುಸೂದನನು ಚೌಧುರಿಯ ಏಕಾಂತದ ಸಾರವನ್ನು ತಿಳಿದುಕೊಂಡ ಬಳಿಕ ಮನೆಯಲ್ಲಿದ್ದರೆ ಆರಾದರೂ ಸಂಶಯಪಟ್ಟಾರೆಂಬ ಭಯದಿಂದ ತೋಟಕ್ಕೆ ಹೋದನು. ಅವನು ತೋಟದ ಒಂದೆಡೆಯಲ್ಲಿ ಕುಳಿತುಕೊಂಡು ಸುತ್ತಲೂ ನೋಡಿ ತಾನು ದೇವದುರ್ಗದ ಪ್ರದೇಶಕ್ಕೆಲ್ಲಾ ಕ್ಷಣಮಾತ್ರದಲ್ಲಿಯೇ ಉತ್ತರಾಧಿಕಾರಿಯಾದುದಕ್ಕಾಗಿ ಭಗವಂತನನ್ನು ಪರಿಪರಿಯಾಗಿ ಕೊಂಡಾಡಿದನು.

ಮಧುಸೂದನನು ತನ್ನ ಅದೃಷ್ಟದ ಪರಿಪಾಟಿಯನ್ನು ಕೊಂಡಾಡಿಕೊಂಡ ಬಳಿಕ ಪ್ರಕೃತ ಕಾರ್ಯವನ್ನು ಕುರಿತು ಚಿಂತಿಸಲಾರಂಭಿಸಿದನು :—

"ಕಮಲಾಕಾಂತನು ಒಂದು ಕೋಟಿಗೆ ಅಧೀಶ್ವರನೆಂದು ಗೊತ್ತಾಯಿತು. ಮರಣಶಾಸನದ ಒಕ್ಕಣೆಯನ್ನು ಕೇಳಲಾಗಿ ಇಪ್ಪತ್ತು ಇಪ್ಪತ್ತೆರಡು ಲಕ್ಷ ರೂಪಾಯಿಗಳ ವರೆಗೂ ಅಪವ್ಯಯಮಾಡಿರುದಾಗಿ ತಿಳಿದುಬರುವುದು. ದೇಶಭಾಷಾಭಿವೃದ್ಧಿಗೆಂದು ಸರಸ್ವತೀ ಪೀಠಕ್ಕೆ ಇಪ್ಪತ್ತು ಲಕ್ಷ ರೂಪಾಯಿಗಳನ್ನು ಕೊಡುವುದೆಂದರೇನು ? ದೇಶಭಾಷೆಯು ವೃದ್ಧಿಯಾದರೆಷ್ಟು ! ಹಾಳಾಗಿಹೋದರೆಷ್ಟು ! ಭಾಷೆಯನ್ನು ಉದ್ಧಾರಮಾಡುವುದಕ್ಕಾಗಿಯೇ ಕಮಲಾಕಾಂತನು ಅವತರಿಸಿರುವನೇನು ? ಭಾಷೆಯನ್ನು ಮಾತನಾಡತಕ್ಕ ಇತರರು ಬದುಕಿರುವರೋ, ಇಲ್ಲವೆ ಸತ್ತಿರುವರೋ ? ಎಲ್ಲರಿಗೂ ಸಮಾನಾಭಿಮಾನವಿರತಕ್ಕ ಕೆಲಸಗಳಲ್ಲಿ ಒಬ್ಬನೇ ಹೊಣೆಗಾರನೇನು ! ನಾನು ಇದಕ್ಕಾಗಿ ಒಂದು ಕಾಸನ್ನೂ ಕೊಡತಕ್ಕವನಲ್ಲ. ಶ್ರಾದ್ಧದಲ್ಲಿ ಜನರು ಬಂದು ತಿಂದುತೇಗಿ ಹೋಗುವುದಕ್ಕಾಗಿ ಹತ್ತು ಸಾವಿರರೂಪಾಯಿಗಳನ್ನು ವ್ಯಯಮಾಡುವುದು ಯುಕ್ತವಾದುದೆಂದು ಆರು ಹೇಳಬಲ್ಲರು ? ಸತ್ತವನಿಗೆ ಎಳ್ಳು ನೀರು ಬಿಟ್ಟರೆಸಾಕು. ಎಳ್ಳಿನೊಡನೆ ರೂಪಾಯಿಗಳನ್ನು ಸೇರಿಸಿ ಆರಾದರೂ ತರ್ಪಣ ಕೊಡುವುದುಂಟೇನು ? ಹಾಗಾದರೆ ಇಷ್ಟು ವ್ಯಯಮಾಡಲೇಕೆ ? ಸತ್ತವನು ಸತ್ತೇ ಹೋಗಿರುವನು; ಜನರಿಗೆ ಅನ್ನ ಹಾಕಿದರೆ ಅವರು ತಿಂದೇ ಹೋಗುವರು. ಸರಿಯಾಗಿ ದಕ್ಷಿಣೆ ಕೊಡದಿದ್ದರೆ ಬೈದುಕೊಂಡೇ ಹೋಗುವರು. ನಾನು ಹೊಟ್ಟೆಗಿಲ್ಲದ ಜನರಿಂದ ಬೈಸಿಕೊಳ್ಳುವುದಕ್ಕಾಗಿ ಅನ್ನ ಹಾಕಬೇಕು. ಇಂತಹ ಕೆಲಸವನ್ನು ಆರಾದರೂ ಬುದ್ಧಿಯಿಲ್ಲದವರು ಮಾಡಬೇಕೇ ಹೊರತು, ಬುದ್ಧಿಮಂತನಾದ ನನ್ನಂತಹವನೆಂದಿಗೂ ಮಾಡಲಿಕ್ಕಿಲ್ಲ. ನಾನಾದರೋ ಶ್ರಾದ್ಧಕ್ಕಾಗಿ ಏನನ್ನೂ ವ್ಯಯಮಾಡಲಾರೆನು. ಆ ಅಪಸ್ಮಾರದ ಹುಡುಗಿಯರಿಗೂ ರಾಯನಿಗೂ ಏನು ಸಂಬಂಧ ? ಹುಡುಗಿಯರಿಗೆ ಕೊಡುವುದು ಅರವತ್ತುಸಾವಿರವೇ ! ಅವರನ್ನು ನಾನು ಹೊಡದೇ ಅಟ್ಟಿಬಿಡುವೆನು. ಪಶುಪ್ರಾಣಿಯಾದ ಚೌಧುರಿಗೆ ಒಂದು ಲಕ್ಷವೇತಕೆ ? ಅವನ ಕೈಯಲ್ಲೇನಾದರೂ ಕೊಂಚವಿಟ್ಟರೆ ಸಾಕು. ಅವನು ಅಷ್ಟಕ್ಕೇ ತೃಪ್ತನಾಗುವನು. ನಾನಾರೆಂದು ತಿಳಿದಿರುವಿರಿ ? ನಾನೇ ಮಧುಸೂದನಮಹಾಶಯ. ಈಗ ಒಬ್ಬ ಕೊಬ್ಬಿದ ಜಹಗೀರುದಾರನಾಗಿರುವೆನು. ನನ್ನನ್ನು ಅಲ್ಲಾಡಿಸುವುದಕ್ಕೆ ಆರಿಗೆ ತಾನೇ ಅಧಿಕಾರವುಂಟು ? ನನ್ನ ಮಾತಿಗೆ ಆರು ತಾನೇ ಪ್ರತಿಯಾಗಿ ಹೇಳಬಲ್ಲರು ? ನಾನು ಆರಿಗೂ ಹೆದರತಕ್ಕ ಪಿಂಡವಲ್ಲ. ಇತರರ ಗೊಡ್ಡು ಬೆದರಿಕೆಗೆ ಥರಥರನೆ ನಡುಗಿ ಓಡಿಹೋಗತಕ್ಕ ಹೆಂಗುಸು ಮೊದಲೇ ಅಲ್ಲ. ಈಗ ನನ್ನ ಅಧಿಕಾರಕ್ಕೆ ಅಡ್ಡವಾಗಿ ಬರತಕ್ಕವರಾರೇ ಆಗಲಿ ಅಂತಹವರು ನನ್ನ ಪ್ರತಾಪದ ಮಹಿಮೆಯನ್ನಾದರೂ ನೋಡದೇ ಇರರು. ನನ್ನನ್ನು ನೀವು ಮೂರ್ಖನೆಂದು ಭಾವಿಸಿರುವಿರಾ ? ನೀವು ಮೂರ್ಖರೋ ನಾನೇ ಮೂರ್ಖನೋ ಇಷ್ಟರಲ್ಲಿಯೇ ತೋರಿಸಿಬಿಡುವೆನು."

ಮಧುಸೂದನನು ಸಂತೋಷಕ್ಕೆ ಪರವಶನಾಗಿ ಮನಬಂದಂತೆ ಚಿಂತಿಸುತ್ತಾ ಕಾಲವನ್ನು ಕಳೆದನು.

---

## ಹದಿನಾರನೆಯ ವಿಲಾಸ

### ನಿದ್ರಾಭಂಗ

ರಾತ್ರಿಯಾಯಿತು. ಎಲ್ಲರೂ ಅವರವರ ಸ್ಥಳಗಳಿಗೆ ಹೋಗಿ ಮಲಗಿದರು. ಚೌಧುರಿಯೂ ಕೆಲಸವೆಲ್ಲವನ್ನೂ ತೀರಿಸಿಕೊಂಡು ತನ್ನ ಕೋಣೆಗೆ ಹೋಗಿ ಮಲಗಿದನು. ಅವನಿಗೆ ಹಿಂದಣ ಘಟನಾವಳಿಗಳೆಲ್ಲವೂ ಒಂದೊಂದಾಗಿ ಜ್ಞಾಪಕಕ್ಕೆ ಬಂದುದರಿಂದ, ಮಲಗಿದೊಡನೆಯೇ ಅವನ ಕಣ್ಣಿಗೆ ನಿದ್ದೆ ಹತ್ತಲಿಲ್ಲ. ಅವನು ನಿದ್ರಾದೇವಿಯನ್ನು ಬಹಳವಾಗಿ ಪ್ರಾರ್ಥಿಸಿಕೊಂಡ ಬಳಿಕ, ಆಕೆಯು ಕನಿಕರದಿಂದ ಚೌಧುರಿಯನ್ನು ಆಶ್ರಯಿಸಿದಳು. ಕೂಡಲೆ ಚೌಧುರಿಯು ಗೊರಕೆ ಹೊಡೆಯುತ್ತಾ ಮಲಗೇ ಬಿಟ್ಟನು. ಅವನ ಕಣ್ಣಿಗೆ ನಿದ್ದೆ ಹತ್ತಿದಾಗ ನಾಯಿಗಳು ಅಲ್ಲಲ್ಲಿ ಬಗುಳುತಿದ್ದುವು. ಅದು ಹೊರತಾಗಿ ಗ್ರಾಮದಲ್ಲಿ ಮತ್ತಾವ ಶಬ್ದವೂ ಕೇಳಿಬರುತ್ತಿರಲಿಲ್ಲ

ಚೌಧುರಿಯು ಕಂಡಕಂಡದೇವರಿಗೆಲ್ಲಾ ಕೈ ಮುಗಿದು ಅತಿ ಪ್ರಯಾಸದಿಂದ ನಿದ್ರಾವರವನ್ನು ಪಡೆದುಕೊಂಡು ಮಲಗಿದ ಕೊಂಚಕಾಲದೊಳಗಾಗಿ ಮನೆಯೊಳಗೆ ಏನೋ ಶಬ್ದವಾಯಿತು. ಚೌಧುರಿಯ ಅತಿಭೀರುವಾದ ಆ ನಿದ್ರಾಂಗನೆಯು ಅಷ್ಟು ಶಬ್ದಕ್ಕೇ ಹೆದರಿ ಮಾಯವಾಗಿಬಿಟ್ಟಳು. ನಿದ್ರಾಭಂಗವಾದ ಕೂಡಲೆ, ಚೌಧುರಿಯು ಎದ್ದು ನೋಡಿದನು. ಉರಿಯುತ್ತಿದ್ದ ದೀಪವು ಅಷ್ಟು ಹೊತ್ತಿಗೆ ಆರಿಹೋಗಿದ್ದಿತು. ಚೌಧುರಿಯು ಕತ್ತಲೆಯಲ್ಲಿಯೇ ದೃಷ್ಟಿಸಿ ನೋಡಿದನು. ಆರೋ ನಿಂತಿದ್ದ ಹಾಗೆ ಅವನಿಗೆ ತಿಳಿದುಬಂದಿತು. ಅವನು ಭೂತಪ್ರೇತ ಪಿಶಾಚಗಳಿಗೆ ಅಂಜತಕ್ಕವನಾಗಿರಲಿಲ್ಲ. ಆದರೂ ಭೂತವೋ, ಪ್ರೇತವೋ, ಪಿಶಾಚವೋ ಎಂದು ಕೊಂಚ ಹೆದರಿದವನಾಗಿ ಕಣ್ಣುಗಳನ್ನು ಉಜ್ಜಿಕೊಂಡು ಮತ್ತೆ ಕತ್ತಲಲ್ಲಿಯೇ ಸುತ್ತಲೂ ನೋಡಿದನು· ಕಣ್ಣಿಗೆ ಆವ ಆಕಾರವೂ ಕಾಣಿಸಲಿಲ್ಲ. ಮತ್ತೆ ಮಲಗಿದನು, ನಿದ್ರೆಯೂ ಬಂದುಬಿಟ್ಟಿತು. ಮತ್ತೊಂದು ಕ್ಷಣಕಾಲವಾದ ಮೇಲೆ ಮತ್ತೊಂದು ಶಬ್ದವಾಯಿತು. ಈ ಶಬ್ದದಿಂದ ಚೌಧುರಿಯು ಹೊಡೆದು ಎಬ್ಬಿಸಿದವನಂತೆ ಎದ್ದು ಕುಳಿತನು. ಚಿಂತೆಯು ಕೂಡಗೊಡಿಸದೇ ಹೋದುದರಿಂದ, ಚೌಧುರಿಯು ಕೋಣೆಯ ಬಾಗಿಲನ್ನು ತೆರೆದುಕೊಂಡು ಹೊರಗೆ ಬಂದನು. ಅಲ್ಲೊಂದು ದೀಪವು ಉರಿಯುತ್ತಿದ್ದುದರಿಂದ, ಅದನ್ನು ತೆಗೆದುಕೊಂಡು ರಾಯನ ಕೋಣೆಗೆ ಬಂದನು. ಅಲ್ಲಿ ರಾಯನು ಮೃತನಾಗಿದ್ದ ಸ್ಥಳದಲ್ಲಿ ಆವನೋ ಒಬ್ಬನು

ಮೊಣಕಾಲೂರಿ ತಲೆಯನ್ನು ಬಗ್ಗಿಸಿಕೊಂಡು ಕುಳಿತಿದ್ದನು. ಚೌಧುರಿಯು ಇದನ್ನು ನೋಡಿ, "ಆರು?" ಎಂದನು.

ಗದ್ಗದ ಸ್ವರದಿಂದ "ನಾನು-ಮಧುಸೂದನ" ಎಂದು ಉತ್ತರ ಬಂದಿತು.

ಚೌಧುರಿ—ಮಧು! ಈ ಸರಿಹೊತ್ತಿನಲ್ಲಿ ಇಲ್ಲೇನ ಮಾಡುತ್ತ ಕುಳಿತಿರುವೆ?

ಮಧು—ಮಹಾಶಯ! ನಾನು ದೊಡ್ಡಪ್ಪನಿಗೆ ಎಷ್ಟೋ ಅಪರಾಧ ಮಾಡಿರುವೆನು. ನನ್ನಿಂದ ಅವರಿಗೆ ಎಷ್ಟೋ ಕೆಟ್ಟಹೆಸರು ಬಂದಿತು. ಅವರು ಸಾಯುವ ಕಾಲದಲ್ಲಿಯಾದರೂ ಅವರನ್ನು ಕಂಡು ಬೇಡಿಕೊಳ್ಳಬೇಕೆಂದು ಬಹು ತರವಾಗಿ ಚಿಂತಿಸಿದ್ದೆನು. ದುರದೃಷ್ಟದಿಂದ ಆ ಸುಯೋಗವು ನನ್ನ ಹಣೆಯಲ್ಲಿ ಬರೆಯಲಿಲ್ಲ. ಈ ದಾರುಣವಾದ ವ್ಯಸನವು ನನ್ನನ್ನು ಸುಟ್ಟು ಬೂದಿಮಾಡುತ್ತಿರುವುದು. ಊಟಕ್ಕೆ ಕುಳಿತರೆ ಅನ್ನ ಸೇರುವುದಿಲ್ಲ, ಮಲಗಿದರೆ ನಿದ್ರೆ ಬರುವುದಿಲ್ಲ ನನಗೆ ಈ ದಿನ ಸ್ವರ್ಗದಲ್ಲಿ ನರಕ ಯಾತನೆಯುಂಟಾಗಲು, ಯಜಮಾನರು ಆವ ಸ್ಥಳದಲ್ಲಿ ಮೃತರಾದರೋ ಅಲ್ಲಿಗಾದರೂ ಹೋಗಿ ಕ್ಷಮೆಯನ್ನು ಬೇಡುವುದಾಗಿ ಬಂದಿರುವೆನು.

ಕಪಟವನ್ನರಿಯದ ಚೌಧುರಿಯು ಮಧುಸೂದನನ ಮಾತನ್ನು ನಿಜವೆಂದೇ. ನಂಬಿದವನಾಗಿ ಇಂತೆಂದನು:—

"ಮಧುಸೂದನ! ಹೇಳುವೆನು ಕೇಳು. ರಾಯಮಹಾಶಯನು ಸಾಯುವ ಕಾಲದಲ್ಲಿ ಆತನ ಹೃದಯದೊಳಗೆ ಆವ ವಿಧವಾದ ವಿರಾಗವೂ ಇರಲಿಲ್ಲ. ನೀನು ಕೆಲವು ತಿಂಗಳಿಂದ ಯೋಗ್ಯನಾಗಿ ಜೀವನ ಮಾಡಿಕೊಂಡಿರುವುದನ್ನು ಕೇಳಿ, ಆತನು ತುಂಬಾ ಸಂತೋಷಪಟ್ಟುಕೊಂಡನು. ನೀನು ವ್ಯರ್ಥವಾಗಿ ಚಿಂತಿಸಬೇಕಾದ ಕೆಲಸವಿಲ್ಲ. ನಾನು ನಿನಗಾಗಿ ಕ್ಷಮೆಯನ್ನು ಬೇಡಿರುವೆನು. ರಾಯ ಮಹಾಶಯನು ತನ್ನ ಸರಳವಾದ ಸ್ವಭಾವಕ್ಕನುಗುಣವಾಗಿ ನನ್ನ ಪ್ರಾರ್ಥನೆಯನ್ನೂ ನೆರವೇರಿಸಿಕೊಟ್ಟಿರುವನು. ಬಾ, ಹೋಗಿ ಮಲಗುವ. ಈ ರೀತಿಯಾಗಿ ಸಂಕಟ ಪಡುವುದರಿಂದ ನಿನಗೆ ಆವ ಪ್ರಯೋಜನವೂ ಆಗುವುದಿಲ್ಲ."

ಮಧು—ನೀವು ಇಷ್ಟು ಹೊತ್ತಿನಲ್ಲಿ ಎದ್ದು ಬಂದುದು ಹೇಗೆ? ನಿಮಗೂ ನಿದ್ರೆ ಬರಲಿಲ್ಲವೆಂದು ತೋರುವುದು.

ಚೌಧುರಿ— ನನ್ನ ಕೋಣೆಯ ಬಾಗಿಲಲ್ಲಿ ಏನೋ ಶಬ್ದವಾದಂತಾಯಿತು. ಅದೇನಿರಬಹುದೆಂದು ನೋಡುವುದಕ್ಕಾಗಿ ಎದ್ದು ಬಂದೆನು.

ಮಧು—ನಾನು ಇಲ್ಲಿಗೆ ಬರುವಾಗ ನನ್ನ ಕೈ ನಿಮ್ಮ ಕೋಣೆಯ ಬಾಗಿಲಿಗೆ ತಗುಲಿದ್ದರೂ ತಗುಲಿರಬಹುದು. ಅದೇ ನಿಮ್ಮ ನಿದ್ರಾಭಂಗಕ್ಕೆ ಕಾರಣವಾಗಿರಬಹುದೆಂದು ನಾನು ಊಹಿಸುವೆನು.

ಚೌಧುರಿಯು ಹಾಗಾಗಿದ್ದರೂ ಆಗಿರಬಹುದೆಂದು ತಿಳಿದು ಸುಮ್ಮನಾದನು. ತರುವಾಯ ಚೌಧುರಿಯು ತನ್ನ ಕೋಣೆಗೆ ಹೊರಟನು, ಮಧುಸೂದನನೂ ಅವನ ಹಿಂದೆ ಹಿಂದೆಯೇ ಹೊರಟನು. ಹೊತ್ತು ಬಹಳವಾಗಿದ್ದುದರಿಂದ ಚೌಧುರಿಯು ತನ್ನ ಹಾಸುಗೆಯ ಮೇಲೆ ಮಲಗಿದನು. ಮಧುಸೂದನನು ಆತನ ಬಳಿಯಲ್ಲಿ ಕುಳಿತುಕೊಂಡು ಆಳತೊಡಗಿದನು. ಚೌಧುರಿಯು ಮಧುಸೂದನನ ಒಳ್ಳೆಯ ನಡೆಯನ್ನು ನೋಡಿನೋಡಿ ತನ್ನ ಮನದಲ್ಲಿ ಸಂತೋಷಪಡುತಿದ್ದ ಹಾಗೆಯೇ ಮಲಗಿ ನಿದ್ರಿಸಿಬಿಟ್ಟನು. ಮಧುಸೂದನನು ಅರ್ಧಘಂಟೆಯ ಕಾಲದ ವರೆಗೂ ಅಲ್ಲಿಯೇ ಇದ್ದು ಬಳಿಕ ತನ್ನ ಕೋಣೆಗೆ ಹೊರಟುಬಂದನು.

ಮರುದಿನ ಚೌಧುರಿ ಮಹಾಶಯನು ರಾತ್ರಿಯಲ್ಲಿ ನಡೆದ ಸಂಗತಿಯನ್ನು ಆರಿಗೂ ತಿಳಿಸಲೇ ಇಲ್ಲ. ಕಾರಣವೇನೆಂದರೆ:—ಮಧುಸೂದನನ ವ್ಯವಹಾರದಲ್ಲಿ ಆತನಿಗೆ ಲೇಶಮಾತ್ರವಾದರೂ ಸಂಶಯ ಕಂಡುಬರಲಿಲ್ಲ; ಅಲ್ಲದೆಯೂ ಸಾಧಾರಣವಾದ ಶಬ್ದಕ್ಕೆ ತಾನು ಹೆದರಿದೆನೆಂದು ಇತರರಿಗೆ ತಿಳಿಸಿಕೊಳ್ಳುವುದು ನಾಚುಗೆ ಕೇಡೆಂದೂ ತಿಳಿದುಕೊಂಡನು.

ಕೆಲವು ದಿನಗಳೊಳಗಾಗಿ ಕಮಲಾಕಾಂತನ ಉತ್ತರ ಕ್ರಿಯಾದಿಗಳು ನೆರವೇರಿಹೋದುವು. ಉತ್ತರಕ್ರಿಯಾ ಕಲಾಪಗಳನ್ನು ವರ್ಣಿಸಿ ನಮ್ಮ ಪಾಠಕ ಮಹಾಶಯರಿಗೆ ಬೇಸರವನ್ನುಂಟುಮಾಡುವುದು ನಮ್ಮ ತಾತ್ಪರ್ಯವಲ್ಲ, ಆದರೂ ಕೆಲವು ಸಂಗತಿಗಳನ್ನು ತಿಳಿಸದೇ ಹೋದಲ್ಲಿ ನಮ್ಮ ಅನುಸ್ಯೂತವಾದ ಕಥಾ ಸಂದರ್ಭಕ್ಕೆ ಭಂಗವುಂಟಾಗುವುದಾದುದರಿಂದ, ಈ ಸಂದರ್ಭದಲ್ಲಿ ಕೊಂಚವಾಗಿಯೇ ವಿಷಯವನ್ನು ಉಲ್ಲೇಖಿಸುವೆವು. ಇತರ ಪುರೋಹಿತರು ಬಂದಲ್ಲಿ ಏನೇನೋ ಕಾರಣವನ್ನು ಕಲ್ಪಿಸಿಕೊಂಡು ಹಣಕಾಸುಗಳನ್ನು ಸುಲಿದುಬಿಡುವರೆಂದು ತಿಳಿದು ದೇವದುರ್ಗದ ಸಭಾಪಂಡಿತನಾದ ಭಟ್ಟಾಚಾರ್ಯ ಮಹಾಶಯನು ಫಲವಿಲ್ಲದ ವೆಚ್ಚಕ್ಕೆ ಆಸ್ಪದವಿಲ್ಲದ ಹಾಗೆಯೂ ಹೇಳಬೇಕಾದ ಮಂತ್ರಗಳೂ ಮಾಡಬೇಕಾದ ತಂತ್ರಗಳೂ ಆವ ಪ್ರಕಾರದಲ್ಲಿಯೂ ಲೋಪವಾಗದ ಹಾಗೆಯೂ ಶ್ರಾದ್ಧ ವಿಧಿಯನ್ನು ಪೂರ್ಣಗೊಳಿಸಿದನು. ಅವಶ್ಯವಾಗಿ ಮಾಡಬೇಕಾಗಿದ್ದ ದಾನಧರ್ಮಗಳು ಯಥಾವಿಧಿಯಾಗಿ ನೆರವೇರಿದುವು. ಅನ್ನಶಾಂತಿಗಾಗಿ ಸಾವಿರಾರು ಜನರಿಗೆ ಭೋಜನ ಮಾಡಿಸಿದುದಾಯಿತು. ಈಗಣ ಕಾಲದಂತೆ ಪದಾರ್ಥಗಳು ತುಟ್ಟಿಯಾಗಿದ್ದಲ್ಲಿ ಸಾವಿರಾರು ಜನರಿಗೆ ಭೋಜನ ಮಾಡಿಸುವುದು ಗೊತ್ತಾಗುತ್ತಿತ್ತು.

ಪೂರ್ವಕಾಲದಲ್ಲಿ ಆವುದಕ್ಕೆ ಲೋಪವಿದ್ದರೂ ಊಟಕ್ಕೆ ತೊಂದರೆಯಿರುತ್ತಿರಲಿಲ್ಲ. ಆವ ಪ್ರಾಣಿಗೂ ಊಟವೇ ಮೊದಲನೆಯ ವ್ಯಾಪಾರವಾಗಿರುವುದು. ಇದು ಭಗವಂತನ ಉದ್ದೇಶವು. ಇದಕ್ಕಾಗಿಯೇ ಭಗವಂತನು ಆಹಾರ ಸಾಮಗ್ರಿಗಳೆಲ್ಲವನ್ನೂ ಬೆಲೆಯಿಲ್ಲದಂತೆಯೇ ಸಜ್ಜುಗೊಳಿಸಿರುವನು. ಹೊಟ್ಟೆಯ ವ್ಯಾಪಾರವು ನಿರುಪಾಧಿಕವಾಗಿ ನಡೆಯುವುದಾದರೆ, ಉಳಿದ ಕೆಲಸಗಳೆಲ್ಲವೂ ಸವುರಸದಿಂದ ನಡೆದು ಸುಖಶಾಂತಿಗಳುಂಟಾಗುವುವು. ನಾವು ನಮ್ಮ ಬುದ್ಧಿಯ ದೋಷದಿಂದ ತಿನ್ನುವ ಅನ್ನಕ್ಕೆ ತಲೆಮೀರಿದ ಬೆಲೆಯನ್ನು ಕಟ್ಟಿಕೊಂಡು ಹೊಟ್ಟೆಗೆ ಸಾಲದೆ ಸಾಯುವುದಾದರೆ, ಇದರಲ್ಲಿ ಪರಮಾತ್ಮನ ದೋಷವೇನಿರುವುದು? ದೇವರು ತನ್ನ ಪಂಚಭೂತಗಳನ್ನೂ ಮನುಷ್ಯನ ಸುಖಕ್ಕಾಗಿ ಬಿಟ್ಟುಕೊಟ್ಟಿರುವನು. ಅಲ್ಪ ಮತಿಗಳಾದ ಮನುಷ್ಯರು ಅವುಗಳನ್ನು ಅಂಗಡಿಗಳಲ್ಲಿಟ್ಟು, ಕೊಳ್ಳುವವರು ಕೊಳ್ಳಲೆಂದು ಬೆಲೆಗೆ ಮಾರುತ್ತಿರುವರು. ಈ ಕೆಲಸವನ್ನು ದೇವರು ಮಾಡಬಾರದಾಗಿದ್ದಿತೇನು? ದಯಾಮಯನಾದ ದೇವರು ನಿರ್ದಯನಂತೆ ಈ ಕೆಲಸವನ್ನು ಮಾಡುವುದಾಗಿದ್ದಿದ್ದರೆ ಆವ ಪ್ರಾಣಿ ತಾನೇ ಬದುಕುತಿದ್ದಿತು? ಮನುಷ್ಯನಂತೆಯೇ ಇತರ ಪ್ರಾಣಿಗಳಿಗೂ ದೇವರು ಅನ್ನವನ್ನು ಕಲ್ಪನೆಮಾಡಿರುವನು. ಅವುಗಳು ಮನುಷ್ಯನಂತೆಯೇ ಇನ್ನೂ ಕೆಟ್ಟಿಲ್ಲವಾದುದರಿಂದ, ತಿನ್ನುವ ಅನ್ನಕ್ಕೆ ಮಣ್ಣು ತೂರಿಕೊಂಡಿಲ್ಲ. ತಿನ್ನುವ ಅನ್ನವನ್ನು ಬೆಲ್ಲವನ್ನಾಗಿ ಮಾಡಿಕೊಂಡು ಕಳ್ಳತನ, ಸುಳ್ಳುತನ, ದರೋಡೆ, ಜೂಜು, ದಗಾಖೋರತನ, ಕೊಲೆಗಾರಿಕೆ, ಮುಂತಾದ ದೋಷಗಳಿಗೆ ತೌರುಮನೆಯಾಗಿ ಬಾಳುವ ಮನುಷ್ಯಜಾತಿಯನ್ನು ಎಲ್ಲ ಪ್ರಾಣಿಗಳಿಗಿಂತಲೂ ಹೆಚ್ಚಿನ ಬುದ್ಧಿಯುಳ್ಳುದೆಂದು ನಾವು ಒಪ್ಪಿಕೊಳ್ಳಬೇಕಾಗಿದೆ. ಇಲ್ಲವಾದರೆ ನಮ್ಮ ಬಾಳು ಸುಖವಾಗಿ ಪರಿಣಮಿಸಲಾರದು. ಇಂದು ಅನ್ನಕ್ಕೇನುಗತಿ? ನಾಳೆ ಅನ್ನಕೇನುಗತಿ? ಎಂದು ಹಗಲಿರುಳೂ ಅನ್ನಕ್ಕಾಗಿಯೇ ಅಲೆದಾಡುತ್ತಿರುವುದು ಮನುಷ್ಯಕಲ್ಪಿತವಾದ ಮನುಷ್ಯಲಕ್ಷಣವೆಂದು ಆರುತಾನೆ ತಿಳಿಯದಿರಲಾರರು? ತತ್ತ್ವವನ್ನು ಪರಿಶೀಲಿಸಿ ನೋಡುವಲ್ಲಿ ಎಲ್ಲಿ ಅನ್ನಕ್ಕೆ ಅತ್ಯಂತವಾದ ಅಭಾವವಿರುವುದೋ ಅದು ಏಳಿಗೆಯ ಲಕ್ಷಣವೆನಿಸಲಿಕ್ಕಿಲ್ಲ. ನಾವು ಬೇಕಾದ ಹಾಗೆ ಕೃಷಿ, ವಾಣಿಜ್ಯ, ಕೈಗಾರಿಕೆ ಕೆಲಸಗಳನ್ನು ಮಾಡಿದರೂ, ಅದು ಅಷ್ಟಾಗಿ ಫಲಕಾರಿಯಾವುಗುದೆಂದು ಹೇಳುವುದಕ್ಕಾಗಲಾರದು. ಮಿತವಾದಿಗಳು ನಮ್ಮೊಡನೆ ಅಮಿತವಾಗಿ ವಾದಾನುವಾದ ಮಾಡಬಹುದು. ನಾವು ಅವರೊಡನೆ ವಿವಾದಕ್ಕೆ ನಿಲ್ಲುವುದಿಲ್ಲ. ಒಂದು ವೇಳೆ ನಾವು ನಿಂತರೂ ಪ್ರಯೋಜನವಿಲ್ಲ. ಮನುಷ್ಯನ ಹಣೆಯಲ್ಲಿ ಕ್ಲೇಶಪಡುವುದು ಉಲ್ಲೇಖಿತವಾಗಿರುವಲ್ಲಿ, ನಾವು ವಿವೇಕವಿಲ್ಲದೆ ಹೋರಾಡಿದರೆ ಬಂದ ಭಾಗ್ಯವೇನು? ಈಗಣ ಕಾಲದಲ್ಲಿ ಮನುಷ್ಯನು ಅನ್ನಕ್ಕಾಗಿ ಭೂಮ್ಯಾಕಾಶಗಳನ್ನು ಭೇದಿಸುತ್ತಿರುವನು. ಏನು ಮಾಡಿದರೂ

ಒಂದು ಚೋಟುದ್ದದ ಹೊಟ್ಟೆಯು ತುಂಬುವಂತಿಲ್ಲ. ಹಿಂದಣ ಕಾಲದಲ್ಲಿ ಈಬಗೆಯ ಅನರ್ಥವಿರಲಿಲ್ಲ. ಎಲ್ಲರಿಗೂ ಹೇಗಾದರೂ ಊಟವು ಕಳೆದುಹೋಗುತಿದ್ದಿತು. ದೇವ ದುರ್ಗದ ಭೂರಿಭೋಜನದ ದಿನದಲ್ಲಿ ಅನೇಕಾನೇಕರಾದ ಬಡಬಗ್ಗರಿಗೆ ಸಂತುಷ್ಟಿ ಯಾಗಿ ಭೋಜನವು ನೆರವೇರಿತು. ಆ ಭೋಜನದಲ್ಲಿ ಆರೂ ಅರೆಹೊಟ್ಟೆ ಊಟಮಾಡಿದವರೇ ಇಲ್ಲ. ಸಾಮಾನ್ಯವಾಗಿ ಎಲ್ಲರೂ ಎರಡುದಿನಗಳ ಭೋಜನವನ್ನು ಒಪ್ಪೊತ್ತಿನಲ್ಲಿಯೇ ಮಾಡಿದರೆಂದು ಹೇಳಿದರೂ ಅತ್ಯುಕ್ತಿಯಾಗಲಾರದು. ಭೋಜನಕ್ಕೆ ಬಂದಿದ್ದವರೆಲ್ಲರೂ ಚೌಧುರಿಯ ಆದರಾತಿಶಯದಿಂದ ಮರ್ಯಾದೆ ಗೊಂಡವರಾಗಿ ಹೊರಟುಹೋದರು. ರಾಯಮಹಾಶಯನ ಉತ್ತರಕ್ರಿಯಾ ಕಲಾಪವು ಒಂದು ಬಗೆಯಾಗಿ ನೆರವೇರಿದಂತಾಯಿತು.

ಶ್ರಾದ್ಧನಿಯಮವು ಶಾಸ್ತ್ರಕ್ಕನುಸಾರವಾಗಿ ನೆರವೇರಿದ ಬಳಿಕ, ಶುಭಸ್ವೀಕಾರ ವಾಯಿತು. ಅಂದು ರಾಯಮಹಾಶಯನ ಮರಣಶಾಸನವು ಎಲ್ಲರಿದಿರಿಗೂ ಓದತಕ್ಕು ದಾಗಿದ್ದಿತು. ಆ ಸಮಯದಲ್ಲಿ ವಕೀಲನು ಚೌಧುರಿಯನ್ನು ಬೇರೊಂದೆಡೆಗೆ ಕರೆದು ಕೊಂಡುಹೋಗಿ ಇಂತೆಂದನು:-"ಎರಡನೆಯ ಮರಣಪತ್ರವು ಅತಿಸಂಕ್ಷೇಪವಾಗಿ ಬರೆಯಲ್ಪಟ್ಟಿರುವುದೆಂದು ನೀವು ಹೇಳಿದ್ದಿರಲ್ಲವೇ? ಈಗ ಅದನ್ನು ಹೊರಗೆ ತೆಗೆದು ಓದುವುದರಿಂದ, ಕಡಿಮೆಯಾದ ಪಾಲನ್ನು ಪಡೆದಿರುವವರು ಅಸಮಾಧಾನದಿಂದ ಗದ್ದಲ ಮಾಡಿದರೂ ಮಾಡಬಹುದು. ಇದನ್ನು ನಿವಾರಣೆಮಾಡುವುದಕ್ಕಾಗಿ ನೀವು ಮೊದಲಿನ ಮರಣಶಾಸನವನ್ನು ಹತ್ತಿರನಿಟ್ಟುಕೊಂಡಿರುವುದು ಸೂಕ್ತವಾಗಿ ಕಂಡುಬರುವುದು. ನಾನು ನೋಡಿರುವುದರಲ್ಲಿ, ಇಲ್ಲಿಗೆ ಬಂದಿರತಕ್ಕವರಾರೂ ಸುಲಭಸಾಧ್ಯರಾಗಿ ಕಂಡುಬರುತ್ತಿಲ್ಲ. ಇಂದು ಒಂದು ಘೋರವಾದ ಯುದ್ಧವೇ ನಡೆಯಬೇಕಾಗಿರುವುದು. ನೀವು ನಿಷ್ಪ್ರಯೋಜನವಾಗಿ ಯುದ್ಧದ ಮಧ್ಯದಲ್ಲಿ ಸಿಕ್ಕಿನರಳುವುದು ನನಗೆಂದಿಗೂ ಸಮ್ಮತವಾಗಿ ತೋರುವುದಿಲ್ಲ. ಕಡಮೆ ಪಾಲಿನವರು ಮರಣಶಾಸನವನ್ನು ನೀವೇ ಹೇಳಿ ಬರೆಯಿಸಿದಿರೆಂದು ತಿಳಿದು ನಿಮ್ಮ ಮೇಲೆ ನಾಯಿಯಂತೆ ಬೀಳುವರು. ಆದುದರಿಂದ ಸದ್ಯದ ಸ್ಥಿತಿಯಲ್ಲಿ ಮರಣಶಾಸನದ ಎಷ್ಟಂಶದಿಂದ ಪ್ರಯೋಜನವುಂಟೋ ಅಷ್ಟೇ ಅಂಶವನ್ನು ತಿಳಿಯಪಡಿಸೋ ಣವಾಗಲಿ."

ಚೌಧುರಿ—ಮಹಾಶಯ! ಮರಣಶಾಸನದ ಮೇಲೆ ಆರು ಕೈಮಾಡ ಲಾದೀತು? ಮರಣಶಾಸನವನ್ನು ಮಾರ್ಪಡಿಸುವುದಕ್ಕೆ ಹರಿಹರಬ್ರಹ್ಮಾದಿ ಗಳಿಗೂ ಶಕ್ತಿಸಾಲದು.

ವಕೀಲ—ಮಹಾಶಯ! ತಾವು ಹೇಳುವುದು ಸುಳ್ಳಲ್ಲ. ಮರಣಪತ್ರ ದಲ್ಲಿ ವೀರಚಂದ್ರ ಜಯಚಂದ್ರರಿಗೆ ಆವ ಪಾಲೂ ಕೊಟ್ಟಂತೆ ಕಾಣಿಸಿಲ್ಲ.

ಅಲ್ಲದೆಯೂ ಅವರ ಮಕ್ಕಳಿಗೆ ಹೆಚ್ಚಿನಪಾಲೂ ಕೊಟ್ಟಿಲ್ಲ. ಇವೆರಡರಿಂದ ಅವರ ಸಂಕಟವು ಎಷ್ಟರ ಮಟ್ಟಿಗೆ ಇರಬಹುದೆಂಬುದನ್ನು ನೀವೇ ಊಹಿಸೋಣವಾಗಲಿ. ಇಂತಹ ಸಮಾರಾಧನೆಯಲ್ಲಿ ಅವರಿಗೇನೂ ದೊರೆಯಲಿಲ್ಲವೆಂದ ಮೇಲೆ, ಅವರು ಮೆಟ್ಟಿದ ನಾಗರ ಹಾವಿನಂತೆ ಮೇಲೆ ಬೀಳದೇ ಇದ್ದಾರೆ? ಬಳಿಕ ಅವರ ಹಾವಳಿಯನ್ನು ನೀವೇನು ತಡೆದೀರಿ? ಇದನ್ನು ತಡೆಯುವುದಕ್ಕಾಗಿಯೇ ಮೊದಲನೆಯ ಮರಣಶಾಸನವು ಹತ್ತಿರದಲ್ಲಿಟ್ಟಿರಬೇಕೆಂದು ನಾನು ಹೇಳುವುದು. ಅದರಲ್ಲಿ ಅವರ ದೋಷಗಳೆಲ್ಲವೂ ವಿಸ್ತಾರವಾಗಿ ವರ್ಣಿತವಾಗಿರುವುವು. ಅದನ್ನು ಕೇಳಿದೊಡನೆಯೇ ಅವರಿಗೆ ಗರುಡಪಚ್ಚೆ ತೋರಿಸಿದ ಹಾಗಾಗುವುದು. ತಾವು ವಿಲಂಬ ಮಾಡದೆ ಮೊದಲನೆಯದನ್ನೂ ತರಿಸಿ ಹತ್ತಿರದಲ್ಲಿಟ್ಟು ಕೊಂಡಿರೋಣವಾಗಲಿ. ಸಮಯವೊದಗಿ ಬಂದಲ್ಲಿ ಅದನ್ನು ಉಪಯೋಗಿಸಿಕೊಳ್ಳಬಹುದು.

ಚೌಧುರಿ—ವಕೀಲರೆ! ತಮ್ಮ ಅಪ್ಪಣೆಯಂತೆಯೇ ಅದನ್ನು ತರಿಸಿಟ್ಟು ಕೊಳ್ಳುವೆನು; ಆದರೆ ವಿಶೇಷವಾದ ಪ್ರಯೋಜನವೊದಗದೇ ಅದನ್ನು ಹೊರಗೆ ತೆಗೆಯಲಾರೆನು.

ವಕೀಲ—ಹಾಗೆಯೇ ಆಗಬಹುದು.

ಈ ಪರಸ್ಪರ ಸಂಭಾಷಣೆಯು ನಡೆದ ಬಳಿಕ ಚೌಧುರಿಯು ಒಂದು ಕುದುರೆಯನ್ನೇರಿ ರಾಯಪೇಟೆಗೆ ಬಂದು ತನ್ನ ಬಳಿಯಲ್ಲಿದ್ದ ಮೊದಲನೆಯ ಮರಣಶಾಸನವನ್ನು ತೆಗೆದುಕೊಂಡು ದೇವದುರ್ಗಕ್ಕೆ ಬಂದು ಸೇರಿದನು. ಇದು ಆರಿಗೂ ಗೊತ್ತಾಗಲಿಲ್ಲ. ರಂಧ್ರಾನ್ವೇಷಿಯಾದ ಮಧುಸೂದನನಿಗೂ ಗೊತ್ತಾಗದೇ ಹೋಯಿತು.

ಮಧ್ಯಾಹ್ನದ ಭೋಜನವಾದ ಬಳಿಕ ಎಲ್ಲರೂ ಮರಣಶಾಸನವನ್ನು ಕೇಳುವುದಕ್ಕಾಗಿ ಹಜಾರದಲ್ಲಿ ಬಂದು ಕುಳಿತಿರುವರು. ಆ ಗ್ರಾಮದ ಇತರೇತರ ಜನರೆಲ್ಲರೂ ರಾಯಮಹಾಶಯನ ಸಂಪತ್ತಿನ ವಿಭಾಗವನ್ನು ಕೇಳಿ ತಿಳಿದುಕೊಳ್ಳುವುದಕ್ಕಾಗಿ ಒಬ್ಬೊಬ್ಬರಾಗಿ ಬರಲಾರಂಭಿಸಿದರು. ಕೊಂಚಕಾಲವೆನ್ನುವುದರೊಳಗಾಗಿಯೇ ಹಜಾರವು ಜನರಿಂದ ತುಂಬಿಹೋಯಿತು. ವೀರಚಂದ್ರ ಜಯಚಂದ್ರರು ಒಂದೆಡೆಯಲ್ಲಿ ಕುಳಿತುಕೊಂಡು ತಮ್ಮಿಷ್ಟದಂತೆಯೇ ಕಮಲಾಕಾಂತನು ಮರಣಶಾಸನವನ್ನು ಬರೆದಿರುವನೆಂದು ತಿಳಿದು ಹಿಗ್ಗುತಿದ್ದರು. ತಮ್ಮಿಬ್ಬರಿಗೆ ಸಂಪತ್ತೆಲ್ಲವೂ ವಿಭಾಗಮಾಡಲ್ಪಟ್ಟಿರುವುದೆಂದು ತಿಳಿದು ಸಂತಸಪಡುತಿದ್ದರು. ಮಧುಸೂದನನಾದರೋ ಏನೂ ಅರಿಯದವನಂತೆ ಒಂದೆಡೆಯಲ್ಲಿ ಸುಮ್ಮನೆ ಕುಳಿತಿದ್ದನು. ಅವನ ಮೇಲೆ ಆರಿಗೂ ಗಮನವಿರಲಿಲ್ಲ, ಅವನಿಗೂ ಆವುದರ

ಮೇಲೂ ಗಮನವಿರಲಿಲ್ಲ. ಕಾರಣವೇನೆಂದರೆ—ಅವನು ತನ್ನ ದೊಡ್ಡಪ್ಪನ ಮರಣದಲ್ಲಿ ಬಹಳ ಕಾತರನಾಗಿ ಸಂಕಟಪಡುತಿದ್ದನು. ಆ ಸಮಯದಲ್ಲಿ ವಕೀಲ ವಿಧುಭೂಷಣನು ಸಭೆಯವರನ್ನುದ್ದೇಶಿಸಿ "ಸಭೆಯವರಲ್ಲಿ ವಿಜ್ಞಾಪನೆಗಳು. ಶ್ರೀಮಂತ ಕಮಲಾಕಾಂತರಾಯರು ಆವ ಕೋಣೆಯಲ್ಲಿ ಮರಣಶಾಸನವನ್ನು ಬರೆದು ಅನಂತಧಾಮದಲ್ಲಿ ಲೀನವಾಗಿ ಹೋದರೋ, ಅದೇ ಕೋಣೆಯಲ್ಲಿಯೇ ಮರಣ ಶಾಸನವು ಒಂದು ಬಲವಾದ ಪೆಟ್ಟಿಗೆಯಲ್ಲಿ ಭದ್ರಪಡಿಸಲ್ಪಟ್ಟಿರುವುದು. ಮಹಾ ಜನರ ಇದಿರಿನಲ್ಲಿಯೇ ಅದನ್ನು ಹೊರಗೆ ತೆಗೆಯಬೇಕೆಂದು ಬಯಸುವೆನು. ಇಷ್ಟವಿರತಕ್ಕವರೆಲ್ಲರೂ ನನ್ನ ಜತೆಯಲ್ಲಿ ಬರಬಹುದು" ಎಂದನು.

ಆರೂ ಸ್ಥಳಬಿಟ್ಟು ಕದಲಲೇ ಇಲ್ಲ ; ಜಯಚಂದ್ರನೊಬ್ಬನೇ ವಕೀಲನ ಹಿಂದೆ ಹೋಗಲು ಇಷ್ಟಪಟ್ಟನು. ವಕೀಲನು ಜಯಚಂದ್ರನನ್ನು ಜತೆಯಲ್ಲಿ ಕರೆದುಕೊಂಡು ಬಂದು ಪೆಟ್ಟಿಗೆಯನ್ನು ತೆರೆದು ನೋಡಿದನು. ಆದರಲ್ಲಿ ಮರಣ ಶಾಸನವಿರಲಿಲ್ಲ. ಎಷ್ಟು ಹುಡುಕಿ ನೋಡಿದರೂ ಮರಣಶಾಸನದ ಸುಳಿವೇ ಇಲ್ಲ. ಚೌಧುರಿಯ ಮುಖವು ಕಪ್ಪಾಗಿ ಹೋಯಿತು. ಅವನು ತನ್ನ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತೆ ಭಾವಿಸಿದವನಾಗಿ ಅಲ್ಲಿಯೇ ಕುಳಿತುಬಿಟ್ಟನು. ಜಯ ಚಂದ್ರನು ಇದನ್ನು ನೋಡಿ "ಮರಣಶಾಸನವೆಲ್ಲಿ, ಮಹಾಶಯ?" ಎಂದು ಕೇಳಿದನು.

"ಪೆಟ್ಟಿಗೆಯೊಳಗೆ ಮರಣಶಾಸನವೇನೋ ಇಲ್ಲ" ಎಂದು ಚೌಧುರಿಯು ಕಂಪಿತಸ್ವರದಿಂದ ಉತ್ತರ ಕೊಟ್ಟನು.

"ಮರಣಶಾಸನವಿಲ್ಲ ! ಇದೆಂತಹ ಮಾತು?" ಎಂದು ವಕೀಲನು ಹೇಳಿ ಭ್ರಾಂತನಾಗಿ ಸುಮ್ಮನೆ ನಿಂತುಬಿಟ್ಟನು.

ಚೌಧುರಿಯು ಆ ದಿನದ ರಾತ್ರಿಯಲ್ಲಿ ನಡೆದ ಘಟನಾವಳಿಯನ್ನು ಜ್ಞಾಪ ಕಕ್ಕೆ ತಂದು "ಇದೆಲ್ಲವೂ ನರಾಧಮನಾದ ಮಧುಸೂದನನ ಕೆಲಸವೇ ಆಗಿರ ಬೇಕು" ಎಂದುಕೊಂಡು ಹಜಾರಕ್ಕೆ ಬಂದನು. ಅವನ ಹಿಂದೆ ಹಿಂದೆಯೇ ವಕೀಲನೂ ಜಯಚಂದ್ರನೂ ಬಂದು "ಪೆಟ್ಟಿಗೆಯೊಳಗೆ ಮರಣಶಾಸನವು ಇರಲಿಲ್ಲ" ಎಂದು ಸಭೆಗೆ ತಿಳಿಸಿದರು.

"ಮರಣಶಾಸನವು ಕಳವಾಯಿತೆ!" ಎಂದು ಹೇಳಿ ವೀರಚಂದ್ರನು ಭಯ ದಿಂದ ಬಿದ್ದುಬಿಟ್ಟನು. ಉಳಿದವರೆಲ್ಲರೂ "ಇದ್ದವರು ಮೂರುಜನ ಕದ್ದವ ರಾರು ?" ಎನ್ನುವಂತೆ ಈ ಮನೆಯಲ್ಲಿ ಮರಣಶಾಸನವು ಕಳವಾಗುವುದೆಂದರೇನು ? ಇದಾರು ಆಡುವ ಮಾತು ? ಇದರಲ್ಲೇನೋ ಮೋಸವು ನಡೆಯುತ್ತಿರಬೇಕು,"

ಎಂದು ಹೇಳಿ ಎದ್ದು ನಿಂತರು. ಆಗ ಹಜಾರದಲ್ಲಿ ಉಂಟಾದ ಗದ್ದಲವನ್ನು ವರ್ಣಿಸುವುದು ಅಸಾಧ್ಯವು. ಎಲ್ಲರೂ ಎದ್ದು ನಿಂತರು; ಆದರೆ ಮಧುಸೂದನನು ಮಟ್ಟಿಗೆ ತಾನು ಕುಳಿತಿದ್ದ ಸ್ಥಳದಲ್ಲಿಯೇ ಕುಳಿತುಕೊಂಡು ಏನೋ ಚಿಂತಿಸುತ್ತಿದ್ದನು. ಚೌಧುರಿಯು ದಡಬಡನೆ ಆತನ ಬಳಿಗೈತಂದು "ನರಾಧಮ! ಇದೆಲ್ಲವೂ ನಿನ್ನ ಕೆಲಸವೇ," ಎಂದು ಅರಚಿದನು.

ವೀರಚಂದ್ರ—ಇದು ಮಧುಸೂದನನ ಕೆಲಸವೇ ಅಹುದು. ಇದರಲ್ಲಿ ತಿಲಾಂಶವೂ ಸುಳ್ಳಿಲ್ಲ.

ಜಯಚಂದ್ರ—(ಕಟಕಟನೆ ಹಲ್ಲುಗಳನ್ನು ಕಡಿಯುತ್ತಾ) ಕಳ್ಳ ಭಡವಾ! ನಿನ್ನ ಯೋಗ್ಯತೆ ಆರುಕಾಣರು? ನೀನಿದ್ದ ಕಡೆಯಲ್ಲಿ ಬೆಂಕಿಯೇಕೆ?

ಚೌಧುರಿಯು, ಎದ್ದ ಗದ್ದಲವನ್ನು ಕೊಂಚ ಮಟ್ಟಿಗೆ ಸಮಾಧಾನಪಡಿಸಿ, ಮಧುಸೂದನನ್ನು ನೋಡಿ, "ನೀಚ, ಅಧಮ, ದಗಾಖೋರ! ಈ ಕೆಲಸವು ನಿನ್ನದೇ ಆಗಿರುವುದು. ಒಳ್ಳೆಯ ಮಾತಿನಿಂದ ಮರಣಶಾಸನವನ್ನು ಹೊರಗೆ ತೆಗೆ, ಇಲ್ಲವಾದರೇ ನಿನ್ನ ಪರಿಣಾಮವು ಬಹು ಶೋಚನೀಯವಾದೀತು" ಎಂದು ಕಣ್ಣುಗಳಿಂದ ಕಿಡಿಗಳನ್ನು ಸುರಿಸುತ್ತಾ ಮಾತನಾಡಿದನು.

ಮಧುಸೂದನ—ಬಾಯಿಯು ಕುಲವನ್ನು ಹೇಳುವುದು. ನಿಮ್ಮ ಬಾಯಲ್ಲಿ ಯೋಗ್ಯತೆಗೆ ತಕ್ಕ ಮಾತೇ ಹೊರಟಿರುವುದು. ನೀವು ದೊಡ್ಡವರೆಂದು ನಾನು ತಿಳಿದುದೇ ತಪ್ಪಾಯಿತು. ನಿಮ್ಮ ಮರಣಶಾಸನವನ್ನು ಕದ್ದವನು ನಾನೇ? ಹೀಗೆ ಅಪಮಾನಪಡಿಸಬೇಕೆಂದು ಎಷ್ಟು ದಿನಗಳಿಂದ ಆಲೋಚಿಸದ್ದಿರಿ? ಇನ್ನಾದರೂ ಸರಿ. ಬಾಯನ್ನು ಬಿಗಿ ಹಿಡಿದು ಮಾತನಾಡೋಣವಾಗಲಿ. ಎಚ್ಚರಿಕೆ!

ಚೌಧುರಿ—(ಶಾಂತನಾಗಿ) ಮಧು ಮಹಾಶಯ, ನಿನಗೆ ಒಳ್ಳೆಯದಾಗಬೇಕೆಂದು ತಿಳಿದಿದ್ದರೆ ಶಾಸನವನ್ನು ಹೊರಗೆ ತೆಗೆದುಕೊಡು. ಅದನ್ನು ಕದ್ದಿರುವುದು ನನಗೆ ಚೆನ್ನಾಗಿಯೂ ಗೊತ್ತುಂಟು. ನೀವು ಅಪಲಾಪಮಾಡಿದರೆ ಆರುತಾನೇ ನಂಬಬಲ್ಲರು?.

ಮಧು—ಸುಳ್ಳನ್ನು ಏತಕ್ಕೆ ಬಗುಳುವಿರಿ? ಏನೋ ದುರಭಿಪ್ರಾಯದಿಂದ ನೀವೇ ಅದನ್ನು ಮರೆಮಾಡಿ ಆದೋಷವನ್ನು ನನ್ನ ಮೇಲೆ ಒರಗಿಸುವಿರಾ? ನಿಮಗೆ ವಯಸ್ಸಾದುದೂ ಕತ್ತೆಗೆ ವಯಸ್ಸಾದುದೂ ಒಂದೇ ಆಗಿರುವುದು.

ಚೌಧುರಿ—ಮರಣಶಾಸನವು ಮಾಯವಾದುದರಿಂದ ನಿನಗೆ ನಷ್ಟವೇ ಹೊರತು ನನಗೇನೂ ನಷ್ಟವಲ್ಲ. ಮರಣಶಾಸನವನ್ನು ಕದ್ದಿಟ್ಟುಕೊಂಡರೆ ತುಂಬಾ

ಪ್ರಯೋಜನವಾಗಬಹುದೆಂದು ತಿಳಿದು ಈ ಕೆಲಸವನ್ನು ಮಾಡಿರುವೆ. ಅದರಿಂದ ನಿನಗೇನೂ ಪ್ರಯೋಜನವಾಗಲಾರದು. ಒಳ್ಳೆಯ ಮಾತಿನಿಂದ ಅದನ್ನು ಕೊಟ್ಟು ಬಿಡು. ಹೋದಷ್ಟು ದಿನಗಳೂ ದುರ್ಬುದ್ಧಿಯಿಂದ ಏತಕ್ಕೆ ಹೊಸಹೊಸ ಸಂಕಟಗಳಗೀಡಾಗುವೆ? ನೀನು ಒಂದೇ ಹಠ ಹಿಡಿದು ನಿಲ್ಲುವುದಾದರೆ ಆ ರಾತ್ರಿ ನಡೆದ ಸಂಗತಿಯನ್ನು ಬಹಿರಂಗಪಡಿಸಬೇಕಾಗುವುದು.

ಮಧು—ನಿಮ್ಮ ಗೊಡ್ಡು ಬೆದರಿಕೆಗೆ ನಾನು ಹೆದರುವೆನೆಂದು ತಿಳಿದಿರಾ? ಹೆಂಗುಸರು ಹೆದರಿಸುವ ಹಾಗೆ ಹೆದರಿಸುವಿರಲ್ಲಾ!

ಚೌಧುರಿ—(ಸಭೆಯನ್ನು ನೋಡಿ) ಒಂದು ವಾರದ ಹಿಂದೆ ಒಂದು ರಾತ್ರಿಯ ಸರಿಹೊತ್ತಿನಲ್ಲಿ ನಾನು ನನ್ನ ಕೋಣೆಯಲ್ಲಿ ಮಲಗಿದ್ದೆನು. ಆಗ ಈ ದರೋಡೆಗಳ್ಳನು ನಿಶ್ಶಬ್ದವಾಗಿ ನನ್ನ ಕೋಣೆಗೆ ಬಂದು ನನ್ನ ಜೇಪಿನಲ್ಲಿದ್ದ ಬೀಗದ ಕೈಯನ್ನು ಕದ್ದುಕೊಂಡು ಕೋಣೆಯಿಂದ ಹೊರಹೊರಟನು. ಆಗ ಬಾಗಿಲು ಸರಿದಹಾಗಾಯಿತು. ಆಗ ನಾನು ಎಚ್ಚತ್ತು ಬಾಗಿಲು ಶಬ್ದವಾಗಲು ಕಾರಣವೇನೆಂದು ಹುಡುಕುತ್ತಾ ಕಮಲಾಕಾಂತರಾಯನ ಕೋಣೆಗೆ ಬಂದೆನು. ಮರಣಶಾಸನವು ಆ ಕೋಣೆಯಲ್ಲಿಯೇ ಭದ್ರವಾಗಿಡಲ್ಪಟ್ಟಿದ್ದಿತು. ಅಲ್ಲಿಗೆ ಹೋಗಿ ನೋಡುವಲ್ಲಿ ಈ ಮಧುಸೂದನನು ರಾಯಮಹಾಶಯನ ಮರಣಶಯ್ಯಾ ಸ್ಥಳದಲ್ಲಿ ಕುಳಿತಿದ್ದನು. ನಾನು ಇದರ ಕಾರಣವೇನೆಂದು ಕೇಳಿದೆನು. ಆಗ ಈತನು ನನಗೆ ಏನೇನೋ ಸುಳ್ಳನ್ನು ಬಗುಳಿದನು. ನಾನು ಅವನ ಮಾತನ್ನು ನಂಬಿದೆನು. ಈ ಮೋಸದ ಕೃತ್ಯವು ಆಗ ನನಗೆ ತಿಳಿಯಲಿಲ್ಲ. ಆಮೇಲೆ ನಾನು ಮಲಗುವುದಕ್ಕಾಗಿ ನನ್ನ ಕೋಣೆಗೆ ಬಂದೆನು. ಈತನೂ ನನ್ನ ಹಿಂದೆಹಿಂದೆಯೇ ಬಂದು ಹಾಸುಗೆಯ ಬಳಿಯಲ್ಲಿ ಕುಳಿತನು. ಕೊಂಚಹೊತ್ತಿನ ಮೇಲೆ ನನಗೆ ನಿದ್ದೆ ಹತ್ತಿತು. ಈತನು ಆವಾಗ ತನ್ನ ಕೋಣೆಗೆ ಹೊರಟುಹೋದನೋ ನನಗೆ ತಿಳಿಯದು. ಈತನು ಬೀಗದಕೈಯನ್ನು ಮತ್ತೆ ನನ್ನ ಜೇಪಿನಲ್ಲಿಡುವುದಕ್ಕಾಗಿಯೇ ನನ್ನ ಹಿಂದೆ ಬಂದಿರಬೇಕೆಂದು ಈಗ ನಾನು ಊಹಿಸುವೆನು. ಈ ಅನುಮಾನದಿಂದ ಮಧುಸೂದನನೇ ಕಳ್ಳನೆಂದು ನಾನು ದೃಢವಾಗಿಯೂ ಸಿದ್ಧಾಂತಪಡಿಸುವೆನು.

ಈ ಮಾತನ್ನು ಕೇಳಿ ಎಲ್ಲರೂ ಸ್ತಬ್ಧರಾಗಿ ಕುಳಿತರು. ವಿಧುಭೂಷಣ ವಕೀಲನು "ನಿಶ್ಚಯವಾಗಿಯೂ ಈ ಮನೆಹಾಳ ಕೆಲಸವನ್ನು ಮಧುಸೂದನನೇ ಮಾಡಿರುವನು," ಎಂದು ಕೂಗಿ ಹೇಳಿದನು.

ಮಧು—ಆರೇ ಆಗಲಿ, ಎಚ್ಚರಿಕೆಯಿಂದ ಮಾತನಾಡುವುದು ಒಳ್ಳೆಯದು. ಹಿಂದೆ ಮಾತನಾಡಿದವರು ಸ್ವಜನರೆಂದು ಅವರನ್ನು ಕ್ಷಮಿಸಿದೆನು.

ನಿಮ್ಮನ್ನು ಹಾಗೆ ಕ್ಷಮಿಸುವುದಕ್ಕಾಗುವುದಿಲ್ಲ. ನಾನು ಈ ಮನೆಗೆ ಯಜಮಾನ. ನೀವು ಮರಣಶಾಸನವನ್ನು ಹೊರಗೆ ತೆಗೆದು ಓದದೇ ಹೋದಲ್ಲಿ, ನಿಮ್ಮನ್ನು ಮನೆಯಿಂದ ಹೊರಗೆ ಹೊಡೆದಟ್ಟುವೆನು. ನನ್ನನ್ನು ಆರೆಂದು ತಿಳಿದು ಮಾತನಾಡುವಿರಿ ?

ಚೌಧುರಿ ಮಹಾಶಯನು ಈ ನೀಚ ಜನೋಚಿತವಾದ ಮಾತನ್ನು ಕೇಳಿ ಸಂಕಟದಿಂದ ಕಂಬನಿಗರೆಯುತ್ತಾ ತನ್ನ ಬಳಿಯಲ್ಲಿದ್ದ ಮೊದಲನೆಯ ಮರಣ ಶಾಸನವನ್ನು ಹೊರಗೆ ತೆಗೆದು ಅದನ್ನು ವಿಧುಭೂಷಣ ಮಹಾಶಯನ ಕೈಯಲ್ಲಿ ಕೊಟ್ಟು "ಮಹಾಶಯ, ದೋಷಿಯಾದವನಿಗೆ ಶಿಕ್ಷೆಮಾಡತಕ್ಕವನು ಈಶ್ವರನೇ ಹೊರತು ಮನುಷ್ಯನಲ್ಲ. ಎರಡನೆಯ ಮರಣಶಾಸನದ ಅಭಾವದಲ್ಲಿ ಮೊದಲನೆಯದೇ ಗ್ರಾಹ್ಯವಾದುದು. ತಾವು ಇದನ್ನು ಎಲ್ಲರಿಗೂ ತಿಳಿಯುವಂತೆ ಓದೋಣವಾಗಲಿ. ನನ್ನ ಮಗಳಾದ ಸ್ವರ್ಣಕುಮಾರಿಯೇ ಸಮಸ್ತ ಸಂಪತ್ತಿಗೂ ಉತ್ತರಾಧಿಕಾರಿಣಿ," ಎಂದನು.

ಮಧುಸೂದನನು ಮರಣಶಾಸನದ ಪತ್ರವನ್ನು ನೋಡಿದ ಕೂಡಲೆ ವಿಕಟವಾದ ಚೀತ್ಕಾರವನ್ನು ಮಾಡುತ್ತಾ ಚಿಣ್ಣನೆ ಹಾರಿ ವಿಧುಭೂಷಣನ ಕೈಯಿಂದ ಆ ಪತ್ರವನ್ನು ಕಸರಿಕೊಳ್ಳುವುದಕ್ಕೆ ಯತ್ನಮಾಡಿದನು. ವಿಧುಭೂಷಣನು ಮೊದಲಿನಿಂದಲೂ ಜಾಗರೂಕನಾಗಿದ್ದುದರಿಂದ ಇದು ಸಾಗದೇ ಹೋಯಿತು. ಮಧುಸೂದನನಿಗೆ ಮೊದಲನೆಯ ಮರಣಶಾಸನದ ವಿಚಾರವೇ ಗೊತ್ತಿರಲಿಲ್ಲ. ಈ ಶಾಸನದ ಪ್ರಕಾರವಾಗಿ ಸ್ವರ್ಣಕುಮಾರಿಯು ರಾಯಮಹಾಶಯನ ಅತುಲವಾದ ಸಂಪತ್ತಿಗೂ ಉತ್ತರಾಧಿಕಾರಿಣಿ. ಇದನ್ನು ಕೇಳಿದೊಡನೆಯೇ ಮಧುಸೂದನನು ಹುಚ್ಚಾಗಿ ಹೋದನು. ವೀರಚಂದ್ರ ಜಯಚಂದ್ರರಿಬ್ಬರೂ ಒಬ್ಬರ ಮುಖವನೊಬ್ಬರು ನೋಡಿಯೇ ನೋಡಿದರು. ಇವರ ಇಷ್ಟದಂತೆ ಏನೂ ನಡೆಯಲಿಲ್ಲ. ಅವರ ಸಂಕಟವು ದೇವರಿಗೆ ಗೊತ್ತು. ಕಮಲಾಕಾಂತನು ಸತ್ತ ಮೊದಲ್ಗೊಂಡು ಅವನ ಸುದ್ದಿಯೇ ಇಲ್ಲ. ಅವನ ಹಣಕ್ಕಾಗಿ ದಾಯಾದರೆಲ್ಲರೂ ನಾಯಿಗಳ ಹಾಗೆ ಕಚ್ಚಾಡ ತೊಡಗಿದರು. ಕಮಲಾಕಾಂತನು ಸತ್ತ ಒಂದು ತಿಂಗಳೊಳಗಾಗಿಯೇ ಹೀಗಾಗುವುದೆಂದು ಚೌಧುರಿಯು ಸ್ವಪ್ನದಲ್ಲಿಯೂ ತಿಳಿದುಕೊಂಡಿರಲಿಲ್ಲ.

ಹಣವಿದ್ದೆಡೆಗಳಲ್ಲೆಲ್ಲಾ ಹೀಗೆಯೇ ಸರಿ.

---

## ಹದಿನೇಳನೆಯ ವಿಲಾಸ

### ಮರಣಶಾಸನದ ಪಠನ

ವಕೀಲು ವಿಧುಭೂಷಣನು ಮರಣಶಾಸನವನ್ನು ಓದುವುದಕ್ಕಾಗಿ ಸಿದ್ಧನಾದನು. ಮಧುಸೂದನನು ದಿಕ್ಕೆಟ್ಟವನಾಗಿ ಕೆಳಗೆ ಕುಳಿತುಬಿಟ್ಟನು. ಅವನ ಕಣ್ಣಿಗೆ ಮನೆಯೆಲ್ಲವೂ ಗಿರಗಿರನೆ ಸುತ್ತುವ ಹಾಗೆ ಕಾಣಲಾರಂಭವಾಯಿತು. ಮುಖವು ಒಂದೇ ತಡವೆಗೆ ಜೋಲು ಬಿದ್ದು ಹೋಯಿತು. ಅಂಟಿಕೊಂಡಿದ್ದ ಅಲ್ಪಸ್ವಲ್ಪವಾದ ಆಶೆಯೂ ನಿರಾಶೆಯಾಗಿ ಹೋಯಿತು. ಇದರ ಕಾರಣವನ್ನು ಅವನು ಚೆನ್ನಾಗಿಯೂ ಅರಿತವನಾಗಿದ್ದನು. ನಿರ್ಭಾಗ್ಯನಾದ ಮಧುಸೂದನನು ಎರಡನೆಯ ಮರಣಶಾಸನವನ್ನು ಕದ್ದಿಟ್ಟುಕೊಂಡಿದ್ದವನು ಬಲವತ್ತರವಾದ ಭಯವನ್ನು ಆಶಂಕಿಸಿ ಅದನ್ನು ಸುಟ್ಟು ಬೂದಿಮಾಡಿದನು. ಇತರರಿಗೆ ಒಂದು ಕಾಸೂ ಕೊಡಕೂಡದೆಂದು ಅವನ ಅಭಿಪ್ರಾಯವಿದ್ದುದರಿಂದ, ಅವನು ಮರಣಶಾಸನವನ್ನು ಅಗ್ನಿಗೆ ಆಹುತಿಯಾಗಿ ಮಾಡಿದನು. ತಾನೇ ಕಮಲಾಕಾಂತನ ಸಮಸ್ತ ಸಂಪತ್ತಿಗೂ ಶಾಸ್ತ್ರಸಮ್ಮತನಾದ ಉತ್ತರಾಧಿಕಾರಿಯೆಂದೂ, ಮರಣಶಾಸನದಿಂದ ತನಗೆ ಉತ್ತರಾಧಿಕಾರಪದವಿಯು ಸಲ್ಲಬೇಕಾದ ಆವಶ್ಯಕತೆಯೇನೂ ಇರುವುದಿಲ್ಲವೆಂದೂ ಮಧುಸೂದನನು ತಿಳಿದುಕೊಂಡಿದ್ದನು. ಗ್ರಹಗಳು ದುರ್ಬಲರಾಗಿರುವಾಗ ಬುದ್ಧಿಯಲ್ಲಿ ಈ ರೀತಿಯಾದ ಪರಿವರ್ತನೆ ಯಾಗುವುದೂ ಉಂಟು. ಆರಿಗಾದರೂ ಅನುಭವಿಸುವ ಯೋಗವಿರಬೇಕು. ಲಕ್ಷ್ಮಿಯನ್ನು ಬಲಾತ್ಕಾರದಿಂದ ಒಲಿಸಿಕೊಳ್ಳಬಹುದು, ಅನುಭವಿಸುವ ಯೋಗವಿರತಕ್ಕವನೇ ಸುಖವನ್ನು ಪಡೆವನು. ಇತರರಿಗೆ ಅದು ಲಭ್ಯವಾಗಲಿಕ್ಕಿಲ್ಲ. ಮಧುಸೂದನನಿಗೆ ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ. ಇದರಿಂದ ಅವನು ದುರ್ಜಾತಕನೆಂದು ಹೇಳಿದರೂ ಹೇಳಬಹುದು.

ವಿಧುಭೂಷಣನು ಮರಣಶಾಸನವನ್ನು ಓದುವುದಕ್ಕೆ ಮೊದಲು, ಚೌಧುರಿ ಮಹಾಶಯನು ಎದ್ದುನಿಂತು ಪರಲೋಕವಾಸಿಯಾದ ಶ್ರೀಮಂತ ಕಮಲಾಕಾಂತರಾಯನನ್ನು ಉದ್ದೇಶಿಸಿ “ಪೂಜ್ಯ ಮಹಾಶಯ! ತಾವು ಸತ್ತು ಸ್ವರ್ಗದಲ್ಲಿರೋಣವಾಗಿದೆ. ನಾವಾದರೋ ನರಕದ ಹುಳುಗಳಂತೆ ನಿಮ್ಮ ಸಂಪತ್ತಿಗಾಗಿ ಕಾಲ ಕೆರದು ಕಾದಾಡುವೆವು. ಈ ನಮ್ಮ ಮಹಾಪರಾಧವನ್ನು ಕ್ಷಮಿಸೋಣವಾಗಲಿ,” ಎಂದು ಪ್ರಾರ್ಥನೆ ಮಾಡಿದನು.

ವಿಧುಭೂಷಣ—ಚೌಧುರಿ ಮಹಾಶಯ! ನೀವು ದುಃಖಪಡಬೇಕಾದ ಕಾರಣವಿಲ್ಲ. ಇದರಲ್ಲಿ ನಿಮ್ಮ ತಪ್ಪೇನೂ ಇರುವುದಿಲ್ಲ. ಅವುದು ಹೇಗೆ ನಡೆಯಬೇಕೋ ಅದು ಹಾಗೆಯೇ ನಡೆದುಹೋಗುವುದು. ಇದು ದೈವ ಮಾಯೆ.

ಮಧುಸೂಧನ—(ಭಯಂಕರಸ್ವರದಿಂದ) ಇದು ಕೃತ್ರಿಮವಾದ ಮರಣ ಶಾಸನವು. ಇದನ್ನು ನಾನು ನಂಬತಕ್ಕವನಲ್ಲ. ನಾನೇ ನ್ಯಾಯದಿಂದ ಉತ್ತ ರಾಧಿಕಾರಿಯಾಗಿರುವುದರಿಂದ ಈ ಸಮಸ್ತ ಸಂಪತ್ತನ್ನೂ ಸ್ವಾಧೀನ ಪಡಿಸಿ ಕೊಳ್ಳುವೆನು.

ವಿಧುಭೂಷಣ ವಕೀಲನು ಧೀರವಾಗಿಯೂ ಗಂಭೀರವಾಗಿಯೂ ಇರುವ ಸ್ವರದಿಂದ, "ಮಧುಸೂದನ, ಜಾಗರೂಕನಾಗಿ ಮಾತನಾಡು. ಬಾಯಿಗೆ ಬಂದಂತೆ ಹರಟಬೇಡ, ಕಂಡೆಯಾ? ನೀನು ಎಲ್ಲೆ ಮೀರಿ ಕೆಲಸಮಾಡುವುದಾದರೆ, ಪೋಲೀಸಿಗೆ ತಿಳಿಸಬೇಕಾಗುವುದು. ಇಲ್ಲಿ ನಿನಗೇನೂ ಸಂಬಂಧವಿರುವುದಿಲ್ಲ," ಎಂದು ಉತ್ತರಕೊಟ್ಟನು.

ಮಧು—ಗೌಡರನ್ನು ಹೆದರಿಸುವಂತೆ ನನ್ನನ್ನೂ ಹೆದರಿಸುವಿರಾ? ನಾನು ಕಂಬಳಿಯನ್ನು ಬಿಸುಟು ಇಲ್ಲಿಗೆ ಬಂದಿಲ್ಲ. ನಿಮ್ಮ ಕೂಗು ನಿಲ್ಲಿಸಿರಿ. ನನ್ನ ದೊಡ್ಡಪ್ಪನ ಆಸ್ತಿಯು ಹೇಗೆ ವಿಭಾಗವಾಗಿದೆಯೋ ಅದೆಲ್ಲವನ್ನೂ ನಾನೂ ಬಲ್ಲೆನು. ನೀವು ಅದೆಲ್ಲವನ್ನೂ ಗುರುತು ಮಾಡಿಟ್ಟುಕೊಂಡಿರುವಿರಿ. ನೀವು ಅದರಂತೆಯೇ ಇಲ್ಲಿ ಕೆಲಸವನ್ನು ನಡೆಯಿಸಬೇಕು.

ವಿಧು—ಚೌಧುರಿ ಮಹಾಶಯರು ಹೇಳಿದುದನ್ನು ನಾನು ಬರೆದಿಟ್ಟು ಕೊಂಡಿರುವುದು ಸುಳ್ಳಲ್ಲ. ಅದರ ಮೂಲಪ್ರತಿಯಾದ ಎರಡನೆಯ ಮರಣಶಾಸನ ವನ್ನು ಹೊರಗೆ ತೆಗೆಯೋಣವಾಗಲಿ. ನಾನು ಅದರಂತೆಯೇ ಕೆಲಸವನ್ನು ನಡೆಯಿಸುವೆನು. ನೀವು ಅದನ್ನು ಹೊರಪಡಿಸದಿದ್ದರೆ, ನಾನು ಮೊದಲನೆಯದ ರಂತೆಯೇ ಕೆಲಸಮಾಡಲುಳ್ಳವನು. ಗೊತ್ತಾಯಿತೇ, ಮಹಾಶಯ?

ಈ ಮಧ್ಯದಲ್ಲಿ ಜಯಚಂದ್ರನು ಏನೋ ಮಾತನಾಡಬೇಕೆಂದಿದ್ದನು. ವೀರನು ಅವನನ್ನು ಅಡ್ಡಗಿಸಿ, "ಅಯ್ಯಾ! ಮೊದಲು ಮೊದಲನೆಯ ಮರಣಶಾಸನದ ಪಠನವಾಗಲಿ. ಬಳಿಕ ಎರಡನೆಯ ಮರಣಶಾಸನದ ಮರ್ಮವನ್ನು ವಿಧುಭೂ ಷಣನ ಬಾಯಿಂದಲೇ ಕೇಳುವ. ಇವೆರಡನ್ನೂ ಕೇಳಿದ ಮೇಲೆ ನಾವು ಮಧು ಸೂದನನಿಗೆ ಸ್ವಪಕ್ಷದಲ್ಲಾಗಲಿ ವಿಪಕ್ಷದಲ್ಲಾಗಲಿ ಸೇರಿ ಕೆಲಸಮಾಡಬಹುದು. ಈಗ ನೀನು ದುಡುಕಬೇಡ," ಎಂದು ಕುಳ್ಳಿರಿಸಿದನು. ಜಯಚಂದ್ರನು ಸರಿ ಯೆಂದು ಹೇಳಿದವನಾಗಿ ಸುಮ್ಮನಾದನು. ಬಳಿಕ ವೀರಚಂದ್ರನು ಮಧುಸೂದನ ನನ್ನು ಕುರಿತು, "ಮಧು! ಗಲಭೆ ಮಾಡದೆ ಈಗ ಸುಮ್ಮನಿರು. ಅವರ ಓದುಗಾರಿಕೆ ಯೆಲ್ಲವೂ ಮುಗಿದುಹೋಗಲಿ. ಬಳಿಕ ನಿನಗೆ ಏನು ಮಾಡಬೇಕೆಂದು ತೋರುವುದೋ ಅದನ್ನು ಮಾಡುವವನಾಗು," ಎಂದು ತಿಳಿಯಪಡಿಸಿದನು. ಮಧುಸೂದನನು ಇದರ

ಲ್ಲೇನೋ ಮರ್ಮವಿರಬೇಕೆಂದು ಊಹಿಸಿ ಸುಮ್ಮನಾದನು. ಅವನು ಸುಮ್ಮನಾದರೂ ಅವನ ಹೃದಯದಲ್ಲಿ ಶಾಂತಿಯೆಂಬುದೇ ಇರಲಿಲ್ಲ. ಈ ಅಶಾಂತತೆಯ ಲಕ್ಷಣದಿಂದ, ಮಿದುಳನ್ನು ಸಾವಿರಾರು ರಣಹದ್ದುಗಳು ಕಿತ್ತು ತಿನ್ನುತ್ತಿರುವಂತೆಯೂ, ಹೃದಯವನ್ನು ನೂರಾರು ಸರ್ಪಗಳು ಕಚ್ಚುತ್ತಿರುವಂತೆಯೂ ಮಧುಸೂದನನು ತಿಳಿಯಲಾರಂಭಮಾಡಿದನು. ಕೆಲಸವನ್ನು ಮಾಡಿ ಅದರ ಫಲ ಬೇಡವೆಂದರೆ ಬಿಡುವುದುಂಟೇ? ಮಧುಸೂದನನು ಇದರ ಯಾತನೆಯನ್ನು ಸಾಯುವ ವರೆಗೂ ಅನುಭವಿಸಿಯೇ ತೀರಬೇಕು. ಇದಕ್ಕೆ ಮತ್ತಾರೂ ಭಾಗಿಗಳಾಗಿ ಬರಲಾಗುವುದಿಲ್ಲ.

ಮರಣಶಾಸನವನ್ನು ಕೇಳುವ ನಿಮಿತ್ತವಾಗಿ ಸಭೆಯವರೆಲ್ಲರೂ ನಿಶ್ಶಬ್ದವಾಗಿ ಕುಳಿತಿರುವರು. ವಕೀಲು ವಿಧುಭೂಷಣ ಮಹಾಶಯನು ಸುತ್ತಲೂ ಒಂದು ಸಲ ಸಭೆಯನ್ನು ದೃಷ್ಟಿಸಿ ನೋಡಿ ಮರಣಶಾಸನವನ್ನು ಕೈಯಲ್ಲಿ ಹಿಡಿದುಕೊಂಡು ಇಂತೆಂದನು:—

"ಈಗ್ಗೆ ಸಾಮಾನ್ಯವಾಗಿ ಆರು ತಿಂಗಳ ಕೆಳಗೆ ಶ್ರೀಮಂತ ಕಮಲಕಾಂತರ ಅಪ್ಪಣೆಗೆ ಅನುಸಾರವಾಗಿ ನಾನು ಈ ಮರಣಶಾಸನವನ್ನು ಬರೆದೆನು. ಇದಕ್ಕೆ ದೊಡ್ಡ ಮನುಷ್ಯರಿಬ್ಬರು ಸಾಕ್ಷಿಯಾಗಿ ಸ್ವಹಸ್ತಾಕ್ಷರಗಳನ್ನರ್ಪಿಸಿರುವರು. ಇಬ್ಬರು ಸಾಕ್ಷಿಗಳಲ್ಲಿ ಒಬ್ಬರು ಕೃಷ್ಣಾಪುರದ ನ್ಯಾಯಾಧಿಪತಿಗಳು; ಮತ್ತೊಬ್ಬರು ರಾಧಾನಗರದ ಶ್ರೀಮಂತ ಜಹಗೀರುದಾರ ರಾಮನಾರಾಯಣ ಮಹಾಂತರು. ಈ ದೊಡ್ಡ ಮನುಷ್ಯರ ಸಾಕ್ಷ್ಯವಿರುವುದರಿಂದ ಈ ಮರಣಶಾಸನವನ್ನು ಸುಳ್ಳೆಂದು ಸಾಧಿಸುವುದಕ್ಕಾಗಲಾರದು. ಇಷ್ಟು ಪೂರ್ವ ಪೀಠಿಕೆಯನ್ನು ಹೇಳಿದ ಬಳಿಕ, ನಾನು ಮರಣಶಾಸನವನ್ನು ಓದುವೆನು. ಎಲ್ಲರೂ ಸಾವಧಾನವಾಗಿ ಕೇಳಬೇಕು. ಮಧ್ಯದಲ್ಲಿ ಆರಾದರೂ ಗಲಭೆ ಮಾಡುವುದಾದರೆ, ನಾನು ಮುಂದಣ ಪ್ರತಿವಿಧಾನವನ್ನು ಕೈಕೊಳ್ಳಬೇಕಾಗುವುದು. ಆಗ ನನ್ನನ್ನು ನಿಂದಿಸಿ ಪ್ರಯೋಜನವಿಲ್ಲ."

ವಿಧುಭೂಷಣನು ಹೀಗೆ ಹೇಳಿ ಮರಣಶಾಸನವನ್ನು ಓದುವುದಕ್ಕೆ ಮೊದಲು ಮಾಡಿದನು. ಪತ್ರದ ಮೊದಲನೆಯ ಅಂಶವೇ ವೀರಚಂದ್ರ ಜಯಚಂದ್ರರ ವಿಚಾರವು. ಇವರಿಬ್ಬರಿಗೂ ಆಸ್ತಿಯಲ್ಲಿ ಆವ ಪಾಲೂ ಇಲ್ಲ. ಈ ಮಾತನ್ನು ಕೇಳಿದ ಕೂಡಲೆ ವೀರಚಂದ್ರನ ಮುಖವು ಮೊದಲು ಶೋಕದಿಂದ ಬೆಳ್ಳಗಾಗಿ ಹೋಯಿತು, ಅದರ ಉತ್ತರ ಕ್ಷಣದಲ್ಲಿಯೇ ಕ್ರೋಧದಿಂದ ರಕ್ತವರ್ಣವುಳ್ಳುದಾಯಿತು. ಜಯಚಂದ್ರನೂ ಚಕಿತನಾಗಿಬಿಟ್ಟನು. ಬಳಿಕ ವೀರಚಂದ್ರ ಜಯಚಂದ್ರರಿಬ್ಬರ ಗುಣಕೀರ್ತನವಾಯಿತು. ಇದನ್ನು ಕೇಳಿ ಇವರಿಬ್ಬರೂ ತಲೆಯನ್ನು ತಗ್ಗಿಸಿಬಿಟ್ಟರು. ಉಳಿದವರೆಲ್ಲರೂ ಇವರಿಬ್ಬರ ದುರ್ವ್ಯಾಪಾರವನ್ನು

ಕೇಳಿ ಬಾಯಿಗೆ ಬಂದಹಾಗೆ ಮಾತನಾಡಿಕೊಂಡರು. ಇದರಿಂದ ಇವರ ಮಾನ
ಕಾಸಿಗೆ ತರವಲ್ಲವಾಯಿತು.

ಎರಡನೆಯ ಅಂಶವು ವೀರಚಂದ್ರನ ಹುಡುಗಿಯರ ವಿಚಾರವಾಗಿದ್ದಿ
ಅದೂ ಎಲ್ಲರ ಇದಿರಿನಲ್ಲಿಯೂ ಓದಿಯಾಯಿತು. ಹುಡುಗಿಯರು ನಾಚುಗೆಯಿಂ
ತಲೆವಾಗಿದವರಾಗಿ ಕುಳಿತುಬಿಟ್ಟರು. ಇವರಿಬ್ಬರಲ್ಲಿ ಒಬ್ಬೊಬ್ಬರಿಗೂ ಹತ್ತು
ಸಾವಿರ ರೂಪಾಯಿಗಳು ಸಲ್ಲತಕ್ಕುದೆಂದು ತಿಳಿಸಿಯಾಯಿತು.

ಮೂರನೆಯ ಅಂಶವು ಜಯಚಂದ್ರನ ಹುಡುಗಿಯರ ವಿಷಯವು. ಇವ
ವಿಷಯದಲ್ಲಿ ಹೆಚ್ಚಿನ ಆಕ್ಷೇಪಣೆಯೇನೂ ಬರೆದಿರಲಿಲ್ಲ. ಇವರಲ್ಲಿ ಒಬ್ಬೊಬ
ರಿಗೂ ಇಪ್ಪತ್ತುಸಾವಿರ ರೂಪಾಯಿಗಳು ಸಲ್ಲತಕ್ಕುದೆಂದು ಓದಿದುದಾಯಿತು.

ನಾಲ್ಕನೆಯ ಅಂಶವಾದರೋ ಮಧುಸೂದನನಿಗೆ ಸಂಬಂಧ ಪಟ್ಟುದ
ಮಧುಸೂದನನು ಇದನ್ನು ಕೇಳುವುದಕ್ಕಾಗಿ ಹತ್ತಿರದಲ್ಲಿ ಬಂದು ಕುಳಿತನು. ಆ
ಅವನ ಸರ್ವೇಂದ್ರಿಯಗಳೂ ಕಿವಿಯಾಗಿ ಪರಿಣಮಿಸಿದ್ದುವು. ಕ್ರಮಕ್ರಮವಾ
ಅವನ ದುಶ್ಚರಿತ್ರಗಳು ವರ್ಣಿಸಲ್ಪಟ್ಟುವು. ವರ್ಣನೆಯು ನಡೆಯುತ್ತಿದ್ದ ಹಾಗೆಲ್ಲಾ
ಅವನು ಕಟಕಟನೆ ಹಲ್ಲುಗಳನ್ನು ಕಡಿಯುತಿದ್ದನು. ಮಧುಸೂದನನ ಭಾಗ
ಹತ್ತು ಸಾವಿರ ರೂಪಾಯಿಗಳು ಮಟ್ಟಿಗೆ ಸಲ್ಲತಕ್ಕುದೆಂದು ತಿಳಿಸಿದುದಾಯಿತ
ಇದನ್ನು ಕೇಳಿದೊಡನೆಯೇ ಮಧುಸೂದನು ಜ್ಞಾನತಪ್ಪಿದವನಾಗಿ ನೆಲದ ಮೇ
ಬಿದ್ದುಬಿಟ್ಟನು. ಅವನಿಗೆ ಶೈತ್ಯೋಪಚಾರಮಾಡುವುದರಲ್ಲಿಯೇ ಬಲುಹೊತ್ತು
ಕಳೆದುಹೋಯಿತು.

ಇನ್ನು ಚೌಧುರಿ ಮಹಾಶಯ ಮತ್ತು ಸ್ವರ್ಣಕುಮಾರಿ ಇವರ ವಿಚಾರ
ಉಲ್ಲೇಖಿತವಾಗಿರುವುದು. ರಾಯ ಮಹಾಶಯನು ಚೌಧುರಿಯನ್ನು ಬಲುವಾ
ಕೊಂಡಾಡಿ ಬರೆದಿದ್ದನು. ಇದನ್ನು ಕೇಳಿದ ಕೂಡಲೆ ಅವನಿಗೆ ನಾಚುಗೆಯಾಯಿತ
ಇದನ್ನು ವೀರಚಂದ್ರ ಜಯಚಂದ್ರರು ತಮ್ಮ ಕಡೆಗಣ್ಣುಗಳಿಂದ ಒಂದು ತಡ
ನೋಡಿ ಸುಮ್ಮನಾದರು. ಚೌಧುರಿ ಮಹಾಶಯನಿಗೆ ಒಂದುಲಕ್ಷ ರೂಪಾಯಿಗ
ಸಲ್ಲತಕ್ಕವು. ಉಳಿದ ಆಸ್ತಿಯೆಲ್ಲವೂ ಸ್ವರ್ಣಕುಮಾರಿಯ ಪಾಲಿನದು. ಈಕೆಯ
ಪ್ರಾಪ್ತವಯಸ್ಕಳಾದ ಮೇಲೆ ವಿವಾಹ ಮಾಡಿಕೊಳ್ಳತಕ್ಕುದು. ಕೋಪದಿಂ
ಉರಿದುರಿದು ಬೀಳುತಿದ್ದ ಮಧುಸೂದನನು ಈ ಮಾತನ್ನು ಕೇಳಿದೊಡನೆಯೆ
ಕೊಂಚ ಮಟ್ಟಿಗೆ ಶಾಂತಭಾವವನ್ನು ತಾಳಿದವನಂತೆ ಕಾಣಿಸಿಕೊಂಡನು.
ಸಮಯದಲ್ಲಿ ಇವನ ಮನದೊಳಗೆ ಈಕೆಯನ್ನು ತಾನೇ ಮದುವೆಮಾಡಿಕೊಂ
ಬಿಟ್ಟರೆ ಈ ಆಸ್ತಿಯೆಲ್ಲವೂ ತನ್ನದೇ ಆಗುವುದೆಂದು ತಿಳಿದುಕೊಂಡಂತೆ ತೋ

ವುದು. ಮದುವೆಯಾಗದ ಹುಡುಗಿಯನ್ನು ಅನೇಕ ಯುವಕರು ಬಯಸುವರು. ಮಧುಸೂದನನು ಸ್ವರ್ಣಕುಮಾರಿಯನ್ನು ಮೊದಲಿನಿಂದಲೂ ಪ್ರೀತಿಸುತ್ತಿದ್ದನು. ಇಂದೂ ಪ್ರೀತಿಸುವನು. ಮೊದಲಿಗಿಂತಲೂ ಈಗಣ ಪ್ರೀತಿಯು ಅತ್ಯಧಿಕವಾದುದು. ಇದರ ಕಾರಣವನ್ನು ನಾವಿಲ್ಲಿ ತಿಳಿಸಬೇಕಾದುದೇನೂ ಇರುವುದಿಲ್ಲ.

ಮರಣಶಾಸನದ ಕೊನೆಯ ಅಂಶಗಳಾದ ಉತ್ತರಕ್ರಿಯಾದಿಗಳೂ, ಸರಸ್ವತೀ ಪೀಠಕ್ಕಾಗಿ ಮಾಡತಕ್ಕ ದಾನಧರ್ಮಗಳೂ ವರ್ಣಿತವಾದುವು. ಇದನ್ನು ಕೇಳಿ ಅಲ್ಲಿಗೆ ಬಂದಿದ್ದವರೆಲ್ಲರೂ ಶ್ರೀ ಕಮಲಾಕಾಂತನ ಉದಾರವಾದ ಬುದ್ಧಿಯನ್ನು ಪರಿಪರಿಯಾಗಿ ಕೊಂಡಾಡಿದರು.

ವಿಧುಭೂಷಣವಕೀಲನು ಮರಣಶಾಸನವನ್ನು ಸಂಪೂರ್ಣವಾಗಿ ಓದಿದ ಬಳಿಕ "ಇದು ಮೊದಲನೆಯ ಮರಣಶಾಸನವು. ಶ್ರೀ ರಾಯಮಹಾಶಯನು ಚೌಧುರಿ ಮಹಾಶಯ ಮತ್ತು ಸ್ವರ್ಣಕುಮಾರಿ ಇವರಿಬ್ಬರ ಬಲಾತ್ಕಾರದಿಂದ ಮತ್ತೊಂದು ಮರಣಶಾಸನವನ್ನು ಬರೆಯಿಸಿದನೆಂದು ಕೇಳಿದೆನು. ಇವರಿಬ್ಬರ ಸ್ವಾರ್ಥತ್ಯಾಗವು ಅನ್ಯಾದೃಶವಾದುದು. ಉಳಿದ ಆಸ್ತಿಯೆಲ್ಲವೂ ಶಾಸ್ತ್ರರೀತಿಯಾಗಿ ಮಧುಸೂದನ ಮಹಾಶಯನಿಗೆ ಸೇರಬೇಕೆಂದು ಇವರಿಬ್ಬರೂ ಹಠ ಹಿಡಿದು ಪ್ರಾರ್ಥಿಸಿಕೊಂಡುದೇ ಎರಡನೆಯ ಮರಣಶಾಸನವು ಹುಟ್ಟುವುದಕ್ಕೆ ಕಾರಣವಾಯಿತು. ಈಗ ಎರಡನೆಯ ಶಾಸನವು ಕಳವಾಗಿರುವುದು. ಸ್ಥಿತಿಯು ಹೀಗಿರುವುದರಿಂದ ನ್ಯಾಯಮಾರ್ಗಾನುಸಾರವಾಗಿ ಮೊದಲನೆಯ ಮರಣಶಾಸನವೇ ಸಿದ್ಧವೆನಿಸುವುದು. ನಿಮ್ಮಗಳ ಮಾನಸೋಲ್ಲಾಸಕ್ಕಾಗಿ ನಾನು ಗುರುತು ಮಾಡಿಕೊಂಡಿರುವ ಎರಡನೆಯ ಮರಣ ಶಾಸನದ ಮುಖ್ಯಾಭಿಪ್ರಾಯವನ್ನು ಇಲ್ಲಿ ತಿಳಿಯಪಡಿಸಿಕೊಳ್ಳುವೆನು. ಇದು ಗ್ರಾಹ್ಯವಾದುದೆಂದು ಆರೂ ಅವಾಗಲೂ ತಿಳಿಯಬೇಕಾದುದಿಲ್ಲ.

ಎರಡನೆಯ ಮರಣಶಾಸನದ ಸಾರಾಂಶ.

| | | | |
|---|---|---|---|
| ವೀರಚಂದ್ರನ ಹುಡುಗಿಯರಿಗೆ | .... | .... | ೨೦,೦೦೦ |
| ಜಯಚಂದ್ರನ ಹುಡುಗಿಯರಿಗೆ | .... | .... | ೪೦,೦೦೦ |
| ಗೋವಿಂದ ಚಂದ್ರ ಚೌಧುರಿಗೆ | .... | .... | ೧,೦೦,೦೦೦ |
| ಉತ್ತರಕ್ರಿಯಾದಿಗಳಿಗೆ | .... | .... | ೧೦,೦೦೦ |
| ಸರಸ್ವತೀ ಪೀಠಕ್ಕೆ .... | .... | .... | ೨೦,೦೦,೦೦೦ |

ಮಧುಸೂದನನಿಗೆ

| | | | | |
|---|---|---|---|---|
| ಸ್ಥಿರ ಸ್ವತ್ತು | .... | .... | .... | ೧೮,೩೦,೦೦೦ |
| ಒಡವೆ ಮತ್ತು ಇತರ ಸಾಮಗ್ರಿ .... | | | .... | ೧೦,೦೦,೦೦೦ |
| ನಗದು | .... | ...... | .... | ೫೦,೦೦,೦೦೦ |

ಚೌಧುರಿಮಹಾಶಯರು ರಾಯರ ಸಕಲ ಸಂಪತ್ತಿಗೂ ಕಾರ್ಯನಿರ್ವಾಹಕರಾಗಿರುವುದರಿಂದ, ನಾನು ಅವರ ಅಪ್ಪಣೆಯ ಮೇರೆಗೆ ಮೊದಲನೆಯ ಮರಣ ಶಾಸನದಂತೆ ಕೆಲಸವನ್ನು ನೆರವೇರಿಸುವವನಾಗಿರುವೆನು. ಎರಡನೆಯ ಮರಣ ಶಾಸನವು ಈಗ ಕಳುವಾಗಿರುವುದು. ಅದು ಸಿಕ್ಕುವ ವರೆಗೂ ನಾವು ಅದಕ್ಕೆ ಮಾನ್ಯತೆಯನ್ನು ತೋರಿಸುವುದಕ್ಕಾಗುವುದಿಲ್ಲ. ಎರಡನೆಯ ಪತ್ರವು ಹುಟ್ಟಿತೆಂಬುದನ್ನು ನಾನು ಕೇಳಿರುವೆನೇ ಹೊರತು ಕಣ್ಣಿನಿಂದ ನೋಡಿದವನಲ್ಲ," ಎಂದು ಸಭೆಯವರಿಗೆ ತಿಳಿಯಪಡಿಸಿಕೊಂಡನು.

ವೀರಚಂದ್ರ, ಜಯಚಂದ್ರರಿಬ್ಬರೂ ಎರಡು ಮರಣಶಾಸನಗಳ ಒಕ್ಕಣೆಗಳನ್ನೂ ಕೇಳಿ ನೋಡಿದರು. ಅವರ ವಿಷಯದಲ್ಲಿ ಎರಡೂ ಸಮವಾಗಿಯೇ ಇರುವುವು. ಅದು ಕಾರಣ ಮಧುಸೂದನನ ಪಕ್ಷವನ್ನು ವಹಿಸುವುದರಿಂದ ಅವರಿಗೆ ಆವ ಲಾಭವೂ ಕಂಡುಬರಲಿಲ್ಲ. ಮಧುಸೂದನ! ಮಧುಸೂದನನ ಮನದಲ್ಲಿ ಹೊಸದಾದ ಉಪಾಯದ ಹೊಸದಾದ ಭಾವನೆಯದೊಂದು ತೋರಿದ್ದಿತು. ಅವನ ಚಿಂತೆಯೇನಿರಬಹುದು? ಅವನು ಆವ ಅಭಿಪ್ರಾಯದಿಂದ ಕಾರ್ಯವನ್ನು ಸಾಧಿಸಬೇಕೆಂದಿರುವನು? ಇದನ್ನು ನಾವು ಕೇಳುವುದೇನು? ಮುಂದೆ ಎಲ್ಲವೂ ತಾನಾಗಿಯೇ ಹೊರಬೀಳುವುದು. ಮಧುಸೂದನನು ಮರಣಶಾಸನದ ಕೇಳಿಕೆಯಾದ ಬಳಿಕ ಕಿಟಕಿಯ ಬಳಿ ನಿಂತು ನೋಡಿದನು. ಇದಿರಿನಲ್ಲಿ ದೇವದುರ್ಗದ ಅಪಾರವಾದ ಭೂ ಸಂಪತ್ತು ಕಿಲಕಿಲನೆ ನಗುತ್ತಿರುವುದು. ಕೆಲವು ದಿನಗಳ ಕೆಳಗೆ ಮಧುಸೂದನನು ತೋಟದಲ್ಲಿ ಕುಳಿತುಕೊಂಡು ಅವುದನ್ನು ನೋಡಿ "ಇವೆಲ್ಲವೂ ನನ್ನದೇ ಆಗಿರುವುವು," ಎಂದು ಹೇಳುತ್ತಾ ಅಹಂಕಾರದಿಂದ ಮೆರೆದನೋ, ಈಗ ಅವೆಲ್ಲವೂ ಅವನದಾಗಿರಲಿಲ್ಲ; ಅವುಗಳ ಮೇಲೆ ಹೆಂಗುಸೊಬ್ಬಳು ಪೂರ್ಣಾಧಿಕಾರ ಮಾಡುವವಳಾಗಿದ್ದಳು.

ಪ್ರಿಯ ಪಾಠಕ ಮಹಾಶಯ! ಗೋವಿಂದಚಂದ್ರ ಚೌಧುರಿಯು ಒಂದು ಗುಪ್ತವಾದ ಕೋಣೆಯೊಳಗೆ ಬಾಗಿಲನ್ನು ಪೂರ್ಣವಾಗಿ ಮುಚ್ಚಿಕೊಳ್ಳದೆ ವಕೀಲ ಮಹಾಶಯನೊಡನೆ ಎರಡನೆಯ ಮರಣಶಾಸನದ ವಿಷಯವಾಗಿ ಮಾತನಾಡು

ತಿದ್ದುದೂ, ಮಧುಸೂದನನು ಹೊರಗಡೆಯಿಂದಲೇ ಕಿವಿಕೊಟ್ಟು ಕೇಳುತಿದ್ದುದೂ ನಿಮಗೆ ಗೊತ್ತಿರುವುದು. ಕೇಳಿ ಬಂದ ಒಂದೊಂದು ಮಾತಿನಿಂದ ಎರಡು ಮರಣ ಶಾಸನಗಳು ಇರುವುವೆಂದು ಮಧುಸೂದನನಿಗೆ ತಿಳಿಯಲು ಸಾಧ್ಯವಾಗಲಿಲ್ಲ. ರಾಯಮಹಾಶಯನು ತಾನು ಸಾಯುವ ಕಾಲದಲ್ಲಿ ಮರಣಶಾಸನವನ್ನು ಬರೆದಿಟ್ಟಿರುವನೆಂಬುದು ಮಟ್ಟಿಗೆ ಮಧುಸೂದನನಿಗೆ ಗೊತ್ತಾಯಿತು. ಅಲ್ಲದೆಯೂ ವಕೀಲನ ಸಹಜಾಲಾಪದಿಂದ ತಾನೇ ರಾಯನ ಸಂಪತ್ತಿಗೆ ಉತ್ತರಾಧಿಕಾರಿಯೆಂದೂ ತಿಳಿದುಬಂದಿತು. ಈ ತಿಳಿವು ಅವನ ತಲೆಯನ್ನು ಗಿರಗಿರನೆ ತಿರುಗಿಸಿಬಿಟ್ಟಿತು. ಈ ಭ್ರಾಂತಿಯಿಂದ ಅವನ ಸಂತೋಷಕ್ಕೆ ಪಾರವೇ ಇರಲಿಲ್ಲ. ಲೋಕದಲ್ಲಿ ಆಶೆಗೆ ಪಾರವೆಲ್ಲಿಯದು? ಮಧುಸೂದನನು ತನ್ನ ದುರಾಶೆಯ ಪ್ರಾಬಲ್ಯದಿಂದ ಇತರರಿಗೆ ಒಂದು ಕನಡೆಯೂ ಸಲ್ಲತಕ್ಕುದಿಲ್ಲವೆಂದು ನಿಶ್ಚಯಿಸಿದನು. 'ಮರಣಶಾಸನ ವಿದ್ದರಲ್ಲವೇ ಇತರರಿಗೆ ಏನಾದರೂ ಕೊಡಬೇಕಾಗುವುದು. ಅದನ್ನೇ ಕದ್ದು ನಾಶಪಡಿಸಿಬಿಟ್ಟರೆ ತನ್ನ ಸಂಕಲ್ಪವು ಈಡೇರುವುದು,' ಎಂದು ಮಧುಸೂದನನ ಮನಸ್ಸಿಗೆ ಹೊಳೆಯಿತು. ಮಧುಸೂದನನು ತನ್ನ ಇಷ್ಟವನ್ನು ನೆರವೇರಿಸಿಕೊಳ್ಳುವುದಕ್ಕಾಗಿ ಏನ ಕೆಲಸ ಮಾಡಿದನೆಂಬುದು ನಿಮ್ಮ ತಿಳಿವಿಗೆ ಬಂದಿರುವುದು. ಮೊದಲನೆಯ ಮರಣಶಾಸನವು ಬಲು ಗುಟ್ಟಾಗಿಡಲ್ಪಟ್ಟಿದ್ದಿತು. ಇದು ಚೌಧುರಿ, ವಕೀಲ, ಕುಮಾರಿ, ಮತ್ತು ಇಬ್ಬರು ಸಾಕ್ಷಿಗಳು ಇವರ ಹೊರತಾಗಿ ಮತ್ತಾರಿಗೂ ತಿಳಿಯದು. ಅಯ್ಯೋ ಪಾಪ! ಮಧುಸೂದನನು ಮೊದಲನೆಯ ಮರಣಶಾಸನವು ಇಷ್ಟುದೂರ ಕೆಲಸಮಾಡಿ ತನ್ನ ಸರ್ವನಾಶಕ್ಕೆ ಮೂಲಕಾರಣವಾಗಿ ಬಂದು ನಿಲ್ಲುವುದೆಂದು ಸ್ವಪ್ನದಲ್ಲಿಯೂ ಅರಿಯದ ಪ್ರಾಣಿಯಾಗಿದ್ದನು. ಅವನಿಗೆ ಕೊಂಚಮಟ್ಟಿಗೆ ಅದರ ವಾಸನೆಯಾದರೂ ಬಂದಿದ್ದ ಪಕ್ಷದಲ್ಲಿ ಅವನು ಎರಡನೆಯ ಶಾಸನವನ್ನು ಕಳವು ಮಾಡಿ ಒಂದೆಡೆಯಲ್ಲಿ ಭದ್ರಪಡಿಸಿಟ್ಟುಕೊಂಡಿದ್ದು ಸಮಯದಲ್ಲಿ ರಾಮಬಾಣದಂತೆ ಪ್ರಯೋಗಮಾಡುವವನಾಗಿದ್ದನು. ಆದರೆ, ಅಹಂಕಾರದಿಂದಲೋ ಅಜ್ಞಾನದಿಂದಲೋ ಆನಂದ ಪರವಶತೆಯಿಂದಲೋ ದುರದೃಷ್ಟದ ಪ್ರಾಬಲ್ಯದಿಂದಲೋ ಮಧುಸೂದನನು ತಾನು ಪ್ರಯಾಸಪಟ್ಟು ಕಳವು ಮಾಡಿದ ಅಮೂಲ್ಯವಾದ ಮರಣಶಾಸನವನ್ನು ಸುಟ್ಟು ಬೂದಿ ಮಾಡಿಬಿಟ್ಟನು. ಅಷ್ಟೇ ಅಲ್ಲದೆ ಭಸ್ಮಾವಶೇಷವನ್ನು ಗಾಳಿಗೂ ತೂರಿಬಿಟ್ಟನು. ಬಳಿಕ ನಿರ್ಭಾಗ್ಯದಾಮೋದರನಾದ ಮಧುಸೂದನನು ತನ್ನ ರೊಟ್ಟಿಯು ಜಾರಿ ತುಪ್ಪದಲ್ಲಿ ಬಿದ್ದಿತೆಂದೂ ತನ್ನನ್ನು ಇತರರು ಕಳ್ಳನೆಂದು ಭಾವಿಸುವುದಕ್ಕೂ ಆಸ್ಪದವಿಲ್ಲವೆಂದೂ, ತಾನೇ ಶ್ರೀಮಂತರಾಯನ ಸರ್ವವಿಧವಾದ ಚರ ಸ್ಥಿರ ಸಂಪತ್ತಿಗೂ ನಿರ್ವಿವಾದವಾಗಿ ಉತ್ತರಾಧಿಕಾರಿಯೇ ಆಗುವೆನೆಂದೂ ಸುಖಮಯವಾದ ಸ್ವಪ್ನವನ್ನು ಅನುಭವಿಸಲಾರಂಭಿಸಿದನು ಅದೃಷ್ಟ ಕರ್ಮಕ್ಕೆ ತಕ್ಕ ಫಲವೇ

ಫಲಿಸುವುದು. ಭಗವಂತನಾದರೋ ತನ್ನ ನಿಯಮಕ್ಕೆ ಅನುಸಾರವಾಗಿ ಅದಕ್ಕೇ ಸಹಾಯನಾಗಿ ನಿಲ್ಲುವನು. ಪ್ರಪಂಚವ್ಯಾಪಾರವು ಕಾರ್ಯಕಾರಣ ಭಾವದಿಂದ ಕೂಡಿರುವುದೆಂಬುದನ್ನು ತಿಳಿದಿದ್ದರೂ, ಮನುಷ್ಯನು ಮಾಯಾವೃತ ನಾಗಿ ತನ್ನ ದೋಷಕ್ಕೆ ಭಗವಂತನನ್ನು ಗುರಿಮಾಡಿ ಶಪಿಸುವನು. ದೇವರು ನಿತ್ಯವೂ ಎಷ್ಟು ಜನರಿಂದ ಬೈಸಿಕೊಳ್ಳುತ್ತಿರುವನೋ ಅದನ್ನು ದೇವರೊಬ್ಬನೇ ಬಲ್ಲನು. ಅದು ಅವನ ಪೂರ್ವ ಪುಣ್ಯ ಪರಿಪಾಕದ ಫಲವು. ಕನ್ನಡಿಯಲ್ಲಿನ ಬಿಂಬವನ್ನು ನಾವು ಅಣಕಿಸುವುದಾದರೆ, ನಮ್ಮನ್ನು ನಾವೇ ಅಣಕಿಸಿಕೊಂಡಂ ತಾಗುವುದು. ಇದೂ ದೈವಲೀಲೆ.

---

## ಹದಿನೆಂಟನೆಯ ವಿಲಾಸ

### ಸ್ವರ್ಣಕುಮಾರಿಯ ಮೂರ್ಛೆ

ಸ್ವರ್ಣಕುಮಾರಿಯು ಇಂದಿಗೆ ರಾಯನ ಸಮಸ್ತ ಸಂಪತ್ತಿಗೂ ಸರ್ವಾಧಿ ಕಾರಿಣಿಯಾದಳು. ತತ್ತ್ವವನ್ನು ವಿಚಾರಿಸಿ ನೋಡಲಾಗಿ ಚೌಧುರಿ ಮಹಾ ಶಯನು—ಎಂದರೆ, ಆಕೆಯ ತಂದೆಯು, ಸರ್ವ ಪ್ರಕಾರದಲ್ಲಿಯೂ ಸರ್ವಾಧಿಕಾರಿ ಯಾಗಿದ್ದನು. ವೀರಚಂದ್ರ ಜಯಚಂದ್ರರು ದ್ವೇಷದಿಂದ ಕಾರ್ಯಸಾಧನೆ ಯಾಗುವುದಿಲ್ಲವೆಂದು ತಿಳಿದವರಾಗಿ, ಕಮಲಾಕಾಂತನ ಬಳಿಯಲ್ಲಿ ಎಷ್ಟು ಭಯ ಭಕ್ತಿಗಳಿಂದಿರುತಿದ್ದರೋ ಅದರಂತೆಯೇ ಚೌಧುರಿಯ ಬಳಿಯಲ್ಲಿಯೂ ಇರುವು ದಕ್ಕೆ ಮೊದಲುಮಾಡಿದರು. ಅಂತಃಪುರದಲ್ಲಿ ಸ್ವರ್ಣಕುಮಾರಿಯ ಆದರಕ್ಕೆ ಎಲ್ಲೆ ಕಟ್ಟಿರಲಿಲ್ಲ. ಗ್ರಾಮದವರೆಲ್ಲರೂ ಸ್ವರ್ಣಕುಮಾರಿಗೆ ಸಂಪತ್ತು ಬಂದುದ ಕ್ಕಾಗಿ ಬಹಳವಾಗಿ ಸಂತೋಷಪಟ್ಟರು. ವೀರಚಂದ್ರ ಜಯಚಂದ್ರರ ಹೆಣ್ಣು ಹುಡುಗಿಯರಂತೂ ಸಣ್ಣೂ ! ಸಣ್ಣೂ ! ಎಂದು ಆವಾಗಲೂ ಸ್ವರ್ಣಕುಮಾರಿಯ ಹಿಂದೆಯೇ ಇರುತ್ತಿರುವರು. ಅವರ ಆದರವಂತೂ ಹೇಳಲೇ ಕೆಲಸವಿಲ್ಲ. ಸ್ವರ್ಣಕುಮಾರಿಗೆ ತಲೆ ಬಾಚಿ ಜಡೆ ಹಾಕುವರೊಬ್ಬರು, ಸೀರೆಯುಡಿಸುವ ರೊಬ್ಬರು, ಹೂ ಮುಡಿಸುವರೊಬ್ಬರು, ಒಡವೆ ತೊಡಿಸುವರೊಬ್ಬರು, ಕೈಹಿಡಿದು ನಡೆಯಿಸುವರೊಬ್ಬರು. ಬಲು ಮಾತಿನಿಂದೇನು ? ಯುವತಿಯರು ಆವಾಗಲೂ ಸ್ವರ್ಣಕುಮಾರಿಯನ್ನು ಎಡೆಬಿಡದೆ ಸುತ್ತಿಕೊಂಡಿರುತಿದ್ದರು. ಸ್ವರ್ಣಕುಮಾರಿಗೆ ಇದೆಲ್ಲವೂ ಸ್ವಾಭಾವಿಕವಲ್ಲದ ದುಃಖಮಯವಾದ ನಿರ್ಬಂಧವಾಗಿ ತೋರಿತು. "ಐಶ್ವರ್ಯಬಂದರೆ ಜನರು ಸುಖವೆನ್ನುವರು. ಐಶ್ವರ್ಯದಿಂದ ನನಗೆ ನಿರ್ಬಂ ಧಗಳು ಅನೇಕವಾಗಿರುವುವು. ನಾನು ನಿರ್ಬಂಧವನ್ನು ಸುಖವೆಂದು ಒಪ್ಪ

ಲಾರೆನು. ಪ್ರಾಣಿಗಳು ಸ್ವತಂತ್ರಾಭಿಲಾಷಿಗಳು. ಸ್ವಾತಂತ್ರ್ಯವನ್ನು ಕಳೆದುಕೊಂಡು ನಿರ್ಬಂಧದಿಂದ ಸುಖವುಂಟೆನ್ನುವ ನರನು ಪಶುವಿಗಿಂತಲೂ ಕಡೆಯಾದವನೆಂದು ನನ್ನ ಅಭಿಪ್ರಾಯವು. ಈಗ ನಾನು ಕ್ರಮಕ್ರಮವಾಗಿ ಮನುಷ್ಯತ್ವವನ್ನು ಕಳೆದು ಕೊಂಡು ಪಶುವಾಗುತ್ತಾ ಬರುತ್ತಿರುವೆನು. ಕಟ್ಟಕಡೆಗೆ ನನಗೆ ಪಶುಗಳಲ್ಲಿಯೂ ಸ್ಥಾನವಿರಲಾರದೆಂದು ತೋರುತ್ತದೆ. ಇದೆಲ್ಲವೂ ಐಶ್ವರ್ಯದ ಮಹಾ ಮಹಿಮೆ," ಎಂದು ಸ್ವರ್ಣಕುಮಾರಿಯು ಆಡಿಕೊಳ್ಳುತ್ತಿದ್ದುದನ್ನು ನಾವು ಅನೇಕ ವೇಳೆಗಳಲ್ಲಿ ಕಿವಿಯಾರೆ ಕೇಳಿರುವೆವು.

ಇತ್ತ ಕಡೆ ಚೌಧುರಿಯು ಆವುದೋ ಕ್ಲೇಶವನ್ನು ಕಟ್ಟಿಕೊಂಡು ವ್ಯಸನಪಡ ತ್ತಿರುವನು. ಆ ಕ್ಲೇಶವಾದರೋ ಆಗ ತಕ್ಕುದೂ ಅಲ್ಲ, ಹೋಗತಕ್ಕುದೂ ಅಲ್ಲ; ಆದರೂ ಅವನಿಗೆ ಕೊರಗಾಟ ತಪ್ಪದು. ಇದಕ್ಕೆ ಜನರು ವ್ಯವಹಾರದ ಬಲದಿಂದ ಜಾಯಮಾನವೆಂದು ಹೇಳುವರು. ಶ್ರೀಮಂತರಾಯನು ಮಧುಸೂದನನ ವಿಷಯ ದಲ್ಲಿ ಕೊಂಚವಾದರೂ ದಯೆಯನ್ನು ತೋರಿಸಲಿಲ್ಲವೆಂದು ಚೌಧುರಿಯು ಕೊರಗಿ ಕೊರಗಿ ಸಾಯುವುದಕ್ಕೆ ದಾರಿಯನ್ನು ಏರ್ಪಡಿಸಿ ಕೊಳ್ಳುತ್ತಿದ್ದನು. ಚೌಧುರಿಯು ಒಂದೊಂದು ವೇಳೆ ಒಂದು ಕೋಟಿ ರೂಪಾಯಿಗಳಲ್ಲಿ ತಮ್ಮನ ಮಗನಾದ ಮಧುಸೂ ದನಿಗೆ ಹತ್ತು ಸಾವಿರ ರೂಪಾಯಿಗಳ ಪಾಲೇ ಬರುವುದು! ಇದೆಂದಿಗೂ ನ್ಯಾಯವಲ್ಲ, ಎನ್ನುವನು; ಒದೊಂದು ವೇಳೆ ತನ್ನ ಪಾಲಿನಲ್ಲಿಯಾದರೂ ಮಧುಸೂದನನಿಗೆ ಏನಾದರೂ ಕೊಡಬೇಕು, ಕೊಡದಿರುವುದು ಧರ್ಮವಲ್ಲ, ಎನ್ನುವನು; ಒಂದೊಂದು ವೇಳೆ ಮಧುಸೂದನನ ಅತ್ಯಾಚಾರವನ್ನು ಸ್ಮರಣೆಗೆ ತಂದುಕೊಂಡು 'ಆ ನರಾ ಧಮನಿಗೆ ಒಂದು ಕಾಸೂ ಕೊಡುವುದು ನ್ಯಾಯವಲ್ಲ ರಾಯರು ನ್ಯಾಯವಾಗಿಯೇ ಕೆಲಸಮಾಡಿರುವರು. ಹೀಗಿರುವಲ್ಲಿ ರಾಯರ ಮಾತಿಗೆ ವಿರೋಧವಾಗಿ ಕೊಡುವು ದಕ್ಕೆ ನಾನಾರು? ಎನ್ನುವನು. ಚೌಧುರಿಯು ಈ ರೀತಿಯಾದ ಚಿಂತಾಸಾಗರದಲ್ಲಿ ಮುಳುಗಿ ಮುಳುಗಿ ಕಂಗೆಟ್ಟವನಾಗಿ ಒಂದು ದಿನ ವಕೀಲನೊಡನೆ ಏಕಾಂತವಾಗಿ ಕುಳಿತುಕೊಂಡು, "ವಕೀಲ ವಿಧು ಮಹಾಶಯ! ನಾವೆಲ್ಲರೂ ಸೇರಿಕೊಂಡು ಮಧುಸೂದನನಿಗೆ ಕಡೆಗೂ ಮೋಸವೇ ಮಾಡಿದಂತಾಯಿತಲ್ಲವೇ?" ಎಂದು ಪ್ರಶ್ನೆಮಾಡಿದನು.

ವಿಧು—ಚೌಧುರಿಗಳೇ! ನಿಮ್ಮ ಮಾತು ನನಗೆ ಅರ್ಥವೇ ಆಗುವುದಿಲ್ಲ. ಮೋಸವೆಂದರೇನು? ಆರಿಗೆ ಆರು ಮೋಸಮಾಡಿರುವರು? ತಮ್ಮನ ಮಗನಿಗೆ ಕೊಡುವುದಕ್ಕೆ ಯಜಮಾನನಿಗೆ ಮೊದಲಿನಿಂದಲೂ ಇಷ್ಟವೇ ಇರಲಿಲ್ಲ. ಮಧು ಸೂದನನು ಅಯೋಗ್ಯಶಿಖಾಮಣಿಯೆಂದು ರಾಯರಿಗೆ ಚೆನ್ನಾಗಿಯೂ ಗೊತ್ತಿದ್ದಿತು. ಈಗ ನಿಮ್ಮ ಅನುಭವದಿಂದ ಆಲೋಚಿಸಿ ನೋಡೋಣವಾಗಲಿ. ಮಧುಸೂದನನು ಸಂಪತ್ತಿಗೆ ಉಪಯುಕ್ತವಾದ ಪಾತ್ರವೆಂದು ಆರು ತಾನೇ ಹೇಳುವುದಕ್ಕಾದೀತು?

ಚೌಧುರಿ—ವಕೀಲ ಮಹಾಶಯ, ರಾಯರ ಸೂಕ್ಷ್ಮದೃಷ್ಟಿಗೂ ದೂರಾ ಲೋಚನೆಗೂ ಆಶ್ಚರ್ಯಪಡಬೇಕಾಗಿದೆ. ಅವರು ಎರಡನೆಯ ಶಾಸನದಲ್ಲಿ "ಮಧುಸೂದನನು ದುಶ್ಚರಿತ್ರನು, ಅವನೆಂದಿಗೂ ಯೋಗ್ಯನಾಗುವುದಿಲ್ಲ, ಅಧಮನ ಕೈಯಲ್ಲಿ ಅರ್ಪಿಸಿದ ಸಂಪತ್ತು ಬಹುಕಾಲ ವುಳಿವುದೂ ಇಲ್ಲ," ಎಂದು ಮುಂತಾಗಿ ಮೊದಲೇ ಭವಿಷ್ಯತ್ತನ್ನು ಊಹಿಸಿ ಬರೆದಿಟ್ಟವರು. ಕಮಲಾಕಾಂತರಾಯರು ನಿಜವಾಗಿಯೂ ಮಹಾತ್ಮರೇ ಆಗಿರಬೇಕು.

ವಕೀಲ—ಅದಕ್ಕೆ ಸಂದೇಹವೇನಿರುವುದು? ರಾಯರು ಮಹಾತ್ಮರೆಂದು ಹೇಳುವಿರಿ. ಅವರು ವಿವೇಚನೆಮಾಡಿ ತಿಳಿಸಿರುವರಾದರೂ, ನೀವು ಸಂಶಯದಲ್ಲಿ ಬಿದ್ದು ಒದ್ದಾಡುವಿರಿ. ಅವನಿಗೆ ಅದೃಷ್ಟವಿದ್ದಿದ್ದರೆ, ರಾಯರು ಸ್ವಾಭಿಪ್ರಾಯ ದಿಂದಲೇ ಮೊದಲನೆಯ ಶಾಸನದಲ್ಲಿ ಅವನಿಗೆ ಸರ್ವಾಧಿಕಾರ ಕೊಡುತ್ತಿದ್ದರು, ನೀವು ಬಲಾತ್ಕಾರದಿಂದ ಹಿಡಿದು ಬರೆಯಿಸಿದ ಎರಡನೆಯ ಶಾಸನದಿಂದಲಾದರೂ ಅವನಿಗೆ ಪ್ರಯೋಜನವಾಗಬೇಕಾಗಿತ್ತು. ಅದೂ ಅವನ ಹಣೆಯಲ್ಲಿ ಬರೆಯ ಲಿಲ್ಲವೆಂದ ಮೇಲೆ ಅವನ ದುರದೃಷ್ಟವು ಬಲವತ್ತರವಾದುದೆಂದೇ ತಿಳಿಯ ಬೇಕಲ್ಲವೇ? ಅದೃಷ್ಟವಿಲ್ಲದವನಿಗೆ ನೀವು ಸರ್ವಸ್ವವನ್ನು ಕೊಟ್ಟರೂ ಅವ ನದನ್ನು ಉಳಿಸಿಕೊಳ್ಳಲಾರನು. ರಾಯಮಹಾಶಯನು ಧಾರ್ಮಿಕನಾದುದರಿಂದಲೇ ಅವನಿಗೆ ದೈವವೂ ಸಹಾಯವಾಗಿ ಬಂದು ನಿಂತಿತು.

ಚೌಧುರಿ—ತಾವು ಹೇಳುವುದು ಸತ್ಯವೆಂದು ನಾನು ನಂಬುವೆನು. ಅನ್ಯಾಯವಾಯಿತೆಂದು ನಾನು ತಿಳಿದಿದ್ದೆನು. ಈಗ ಅದೂ ದೂರವಾಯಿತು. ಭಗ ವಂತನು ನ್ಯಾಯದಿಂದ ಮಾಡಿರುವ ಕೆಲಸದಲ್ಲಿ ನಾವು ಬುದ್ಧಿಯ ದೋಷದಿಂದ ಅನ್ಯಾಯವಾಯಿತೆಂದು ತಿಳಿಯುವುದಾದರೆ, ನಮಗಿಂತಲೂ ಮೂಢರು ಮತ್ತಾ ರುಂಟು?

ಚೌಧುರಿ ಮಹಾಶಯನು ಹೀಗೆ ವಿಧುಭೂಷಣನೊಡನೆ ಮಾತನಾಡಿದ ಬಳಿಕ ಸ್ವರ್ಣಕುಮಾರಿಯನ್ನು ನೋಡುವುದಕ್ಕಾಗಿ ಅಂತಃಪುರಕ್ಕೆ ಬಂದು, "ಮಗು, ಎರಡನೆಯ ಮರಣಶಾಸನವು ಕಳವಾಯಿತು. ಆದುದರಿಂದ ಮೊದಲನೆಯ ಮರಣ ಶಾಸನವೇ ಸಿದ್ಧವೆನಿಸಿತು. ಇದರ ಪ್ರಕಾರವಾಗಿ ನೀನೇ ಅತುಲ ಸಂಪತ್ತಿಗೂ ಏಕಾಧಿಕಾರಿಣಿ," ಎಂದನು.

ಸ್ವರ್ಣ—ಅಪ್ಪ! ನಾನೂ ಹಾಗೆಯೇ ಕೇಳಿದೆನು. ಇದು ಧರ್ಮ ಸಮ್ಮತವಾಗಿರುವುದೇನು?

ಚೌಧುರಿ—ಧರ್ಮಾತ್ಮನಾದ ರಾಯಮಹಾಶಯನು ಮಾಡಿರುವುದರಲ್ಲಿ ಅಧರ್ಮವಾವುದೂ ಕಂಡುಬರುವುದಿಲ್ಲ. ಮಗು, ಕುಮಾರಿ! ಮಧುಸೂದನನ ನಡೆವಳಿಯನ್ನು ಕೇಳಿದೆಯಾ?

ಸ್ವರ್ಣ—ಅಪ್ಪ! ನಾನು ಮರೆಯಲ್ಲಿ ನಿಂತುಕೊಂಡು ಎಲ್ಲವನ್ನೂ ಬಿಡದೆ ಕೇಳಿದೆನು. ಮಧುಸೂದನನಂತಹ ಪಾಪಾತ್ಮನಾದ ನರಾಧಮನು ಹಿಂದೆ ಹುಟ್ಟಿದುದೂ ಇಲ್ಲ, ಮುಂದೆ ಹುಟ್ಟುವುದೂ ಇಲ್ಲ.

ಚೌಧುರಿ—ಇಂತಹ ದೇವತಾಯೋಗ್ಯವಾದ ದೇವದುರ್ಗದಲ್ಲಿ ಪಿಶಾಚ ಸ್ವರೂಪನಾದ ಮಧುಸೂದನನಂತಹವನಿಗೆ ಸ್ಥಳವಿರಲಾಗದು. ಆತನನ್ನು ಸಾಧ್ಯ ವಾದಷ್ಟು ಬೇಗನೆ ಇಲ್ಲಿಂದ ಹೊರಹೊರಡಿಸಬೇಕು.

ಚೌಧುರಿಯು ಹೀಗೆ ಹೇಳಿ ಅಲ್ಲಿಂದೆದ್ದು ಹೊರಟುಹೋದನು. ಸ್ವರ್ಣ ಕುಮಾರಿಯು ತನ್ನ ಕೋಣೆಯಲ್ಲಿ ಒಬ್ಬಳೇ ಕುಳಿತುಕೊಂಡಿದ್ದಳು. ಏಕಾಂತ ವಾಗಿ ಕುಳಿತುಕೊಂಡಿರುವ ಯೋಗವು ಅವಳ ಹಣೆಯಿಂದ ಅಳಿಸಿ ಹೋಗಿದ್ದಿತು. ಆದರೂ ಹೆಂಗುಸರು ಬಂದು ತುಂಬಿಕೊಳ್ಳುವುದಕ್ಕೆ ಮೊದಲು ಸ್ವರ್ಣಕುಮಾ ರಿಯು ತನ್ನ ಅದೃಷ್ಟವನ್ನು ಕುರಿತು ಕ್ಷಣಕಾಲ ಚಿಂತಿಸತೊಡಗಿದಳು:—

"ನನ್ನ ಮನದಲ್ಲಿ ಮೊದಲಿನಿಂದಲೂ ಅನಿರ್ವಚನೀಯವಾದದೊಂದು ಭಯವು ಸೇರಿಕೊಂಡು ಮರ್ಮವನ್ನು ಕೊಂಚ ಕೊಂಚವಾಗಿ ಕತ್ತರಿಸುತ್ತಿತ್ತು. ಈಗ ಆ ಭಯವು ಎಲ್ಲಿಯೋ ಮಾಯವಾದಂತಿದೆ. ಇದಕ್ಕೆ ಕಾರಣವೇನಿರಬಹುದು?

ಕೆಲಗಾಲದ ಹಿಂದೆ ಜೋಯಿಸನೊಬ್ಬನು ನನ್ನ ಕೈನೋಡಿ ಕೆಲವು ಸಂಗತಿ ಗಳನ್ನು ತಿಳಿಸಿದ್ದನು. ಆಗ ಅವೆಲ್ಲವೂ ಹೊಟ್ಟೆಯ ಪಾಡಿನ ಮಾತುಗಳೆಂದು ಉದಾಸೀನೆಯಾಗಿದ್ದೆನು. ಈಗ ನಾನು ಅತುಲಸಂಪತ್ತಿಗೆ ಅಧಿಕಾರಿಣಿಯಾದೆನು. ವಾಸಮಾಡುವುದಕ್ಕೆ ದೊಡ್ಡದಾದ ಅರಮನೆಯೇ ಸಿಕ್ಕಿತು. ಸೇವೆ ಮಾಡುವುದಕ್ಕೆ ದಾಸದಾಸಿಯರು ಆವಾಗಲೂ ಕೈಕಟ್ಟಿನಿಂತಿರುವರು. ಇವೆಲ್ಲವೂ ಜೋಯಿಸನು ಹೇಳಿದಂತೆಯೇ ನಡೆದಿರುವುದು. ಹಾಗಾದರೆ ಜೋಯಿಸನ ಹೇಳಿಕೆಯಲ್ಲಿ ಅರ್ಧ ಭಾಗವು ನೆರವೇರಿದಂತಾಯಿತು. ಇದು ಜೋಯಿಸನ ಸ್ವಂತವಾದ ಹೇಳಿಕೆಯೇ? ಇಲ್ಲವೆ ಕಮಲಾಕಾಂತನ ಚಾತುರ್ಯದ ಕೈವಾಡವೇ? ಕೈವಾಡವಾಗಿದ್ದರೆ ಎರಡ ನೆಯ ಮರಣಶಾಸನವು ಹುಟ್ಟಕೂಡದಾಗಿದ್ದಿತು. ಈಗ ಅದು ಹುಟ್ಟಿ ಸತ್ತಿರು ವುದು ನೋಡಿದರೆ ಆವುದನ್ನೂ ನಿರ್ಣಯಿಸುವುದಕ್ಕೆ ನನ್ನಿಂದ ಸಾಗದು. ಒಂದು ವೇಳೆ ಜೋಯಿಸನ ಭವಿಷ್ಯದ್ವಾಣಿಯು ಫಲಿಸಿದ್ದರೂ ಫಲಿಸಿರಬಹುದು. ಎಷ್ಟೋ ಜನರ ವಾಕ್ಕಿನಲ್ಲಿ ಕ್ರಿಯಾಸಿದ್ಧಿಯಿರುವುದೆಂದು ನಾನು ಕೇಳಿರುವೆನು. ಹೇಗಾದ

ರೂ ಆಗಲಿ, ಜೋಯಿಸರು ಹೇಳಿದುದು ಈಗ ಅರ್ಧ ಫಲಕ್ಕೆ ಬಂದಹಾಗಾಯ್ತು. ಉಳಿದ ಅರ್ಧವೂ ಫಲಿಸುವುದೇ! ಇದು ಆವ ರೀತಿಯಲ್ಲಿ ಫಲಕ್ಕೆ ಬರುವುದೋ ದೇವರೊಬ್ಬನೇ ಬಲ್ಲನು."

ಈ ವಿಷಯವನ್ನು ಮನಸ್ಸಿಗೆ ತಂದುಕೊಂಡ ಕೂಡಲೆ ಸ್ವರ್ಣಕುಮಾರಿಯು ನಾಚುಗೆಯಿಂದ ತಲೆವಾಗಿದವಳಾಗಿ ಅಲ್ಲಿಂದೆದ್ದು ಕಿಟಕಿಯ ಬಳಿಗೆ ಬಂದು ನಿಂತಳು.

ಕುಮಾರಿಯು ನೋಡುತ್ತಿದ್ದ ಹಾಗೆಯೇ ಒಂದು ದೋಣಿಯು ಗಂಗಾನದಿಯಲ್ಲಿ ತೇಲಿಕೊಂಡು ಹೋಯಿತು. ಕುಮಾರಿಯು ಅದನ್ನು ದೃಷ್ಟಿಸಿ ನೋಡಲಿಲ್ಲ, ಆದರೂ ಮಧುಸೂದನನು ಈ ದೋಣಿಯಲ್ಲಿ ಕುಳಿತು ತನ್ನ ದೇಶಕ್ಕೆ ಹೊರಟಿರಬೇಕೆಂದು ಊಹಿಸಿದಳು. "ಮಧುಸೂದನನು ಸಚ್ಚರಿತ್ರನಾಗಿದ್ದರೆ ಅವನ ಅವಸ್ಥೆಯು ಈಗ ಹೇಗಿರುತಿದ್ದಿತು? ಈಗಣ ಅವಸ್ಥೆಯಾದರೋ ಹೇಗಿರುವುದು? ಇದೆಲ್ಲವೂ ದುರ್ಮಾರ್ಗದ ಫಲವಾಗಿರುವುದು. ಆರೇ ಆಗಲಿ ತನ್ನ ಕರ್ಮಕ್ಕೆ ತಕ್ಕ ಫಲವನ್ನೇ ಅನುಭವಿಸುವನು. ಮಧುಸೂದನನು ಈ ನಿಯಮಕ್ಕೆ ಮೀರಿದವನೇನೂ ಅಲ್ಲ. ಈಗ ಈ ನೀಚನ ಸುದ್ದಿಯೇಕೆ?" ಎಂದು ಸ್ವರ್ಣಕುಮಾರಿಯು ತನ್ನಲ್ಲಿ ತಾನೇ ಆಡಿಕೊಂಡು ಕೋಣೆಯಿಂದ ಹೊರಗೆ ಬಂದುಬಿಟ್ಟಳು. ಬಾಗಿಲಿನಲ್ಲಿ ತಂದೆಯನ್ನು ಕಂಡು ನಿಂತಳು. ಆತನು ಮಗಳನ್ನು ಕುರಿತು, "ಮಗು, ಮಧುಸೂದನನು ತಾನಾಗಿಯೇ ಹೊರಟು ಹೋದನು. ಹೋಗುವಾಗ ಅವನು ಆರಿಗೂ ತಿಳಿಸಿ ಹೋಗಲಿಲ್ಲ. ಅವನು ವಕೀಲನನ್ನು ಕಂಡು ತನ್ನ ಪಾಲಿಗೆ ಬರಬೇಕಾದುದನ್ನು ವಿದ್ಯಾನಗರದಲ್ಲಿ ತನ್ನ ಹೆಸರಿಗೆ ಕಳುಹಬೇಕೆಂದು ಮಟ್ಟಿಗೆ ಹೇಳಿ ಹೊರಟು ಹೋದನು. ಇದನ್ನು ನೋಡಿದರೆ ಅವನು ಎರಡನೆಯ ಮರಣಶಾಸನದ ವಿಚಾರವಾಗಿ ನ್ಯಾಯಸ್ಥಾನದಲ್ಲಿ ವ್ಯವಹರಿಸಲಾರನೆಂದು ತೋರುತ್ತದೆ," ಎಂದನು.

ಮನೆಯಲ್ಲಿ ಒಂದರ ಮೇಲೊಂದು ತೊಂದರೆಯು ಸಂಭವಿಸುತ್ತಿದ್ದುದರಿಂದ, ರಾಯಮಹಾಶಯನ ಶ್ರಾದ್ಧವು ಕಳೆದ ಕೆಲ ದಿನಗಳವರೆಗೂ ಸ್ವರ್ಣಕುಮಾರಿಯು ಮನೆಯಿಂದ ತೋಟಕ್ಕೆ ಹೋಗುವುದಕ್ಕೂ ಅವಕಾಶವೇ ಸಿಕ್ಕಲಿಲ್ಲ. ಇಂದಿಗೆ ಶ್ರಾದ್ಧದ ಕಲಾಪಗಳೆಲ್ಲವೂ ಮುಗಿದು ಹೋಗಿದ್ದುವು; ಬಂದಿದ್ದವರೆಲ್ಲರೂ ಒಬ್ಬೊಬ್ಬರಾಗಿ ತಮ್ಮ ತಮ್ಮ ಮನೆಗಳಿಗೆ ಹೊರಟಿದ್ದರು. ಮನೆಯಲ್ಲಿ ಹೆಚ್ಚಿನ ಗಲಭೆಯಿರಲಿಲ್ಲ. ಸ್ವರ್ಣಕುಮಾರಿಗೆ ತಾನೊಬ್ಬಳೇ ಸ್ವತಂತ್ರವಾಗಿ ಉಸಿರಾಡುವುದಕ್ಕೆ ಅವಕಾಶವನ್ನು ಕಲ್ಪಿಸಿಕೊಳ್ಳಬೇಕೆಂದು ತೋಟದ ಕಡೆಗೆ ಹೊರಡುವ ಇಚ್ಛೆಯುಂಟಾಯಿತು. ಮಳೆ ಗಾಳಿ ಚಳಿ ಇವಾವುದರ ಬಾಧೆಯೂ ಇರಲಿಲ್ಲ. ಪೂರ್ವದಿಗಂಗನೆಯ ಲಲಾಟಮಂಡಲದಲ್ಲಿ ಸಿಂಧೂರ ಬಿಂದುವಿನಂತಿದ್ದ ಹುಣ್ಣಿಮೆಯ ಪೂರ್ಣಚಂದ್ರನು ಆಗತಾನೇ ಉದಯಿಸಿದ್ದನು. ಸಂಧ್ಯಾಕಾಲದ ಮಂದ ಮಾರು

ತನು ಗಂಗಾಜಲದಲ್ಲಿ ಮಿಂದು ಪರಿಶುದ್ಧನಾಗಿ ಅಪವಿತ್ರವಾದ ಹಾದಿಬೀದಿಗಳ ದೊಳು ಮೈಗೆ ಸೋಕದಿರಲೆಂದು ಭಯದಿಂದ ಮೆಲ್ಲಮೆಲ್ಲನೆ ಸಂಚರಿಸುತಲಿದ್ದನು. ಬಗೆಬಗೆಯ ಹೂಗಳು ಅರಳಿ ತಮ್ಮ ದಿವ್ಯ ಸೌರಭವನ್ನು ದಿಕ್ಕುದಿಕ್ಕಿಗೂ ಬೀರಿ ರಸಿಕರನ್ನು ತಮ್ಮಲ್ಲಿಗೆ ಬರಮಾಡಿಕೊಳ್ಳುತ್ತಿದ್ದುವು. ಪರಿಮಳವು ಕುಮಾರಿಯ ಬಳಿಗೂ ಬಂದು ವಿಲಾಸಮಹೋತ್ಸವಕ್ಕೆ ತಪ್ಪದೇ ಬರಬೇಕೆಂದು ಅಕ್ಷತೆಯನ್ನು ಕೊಟ್ಟು ಹೋಗಿದ್ದಿತು. ಮನೆಯನ್ನು ಬಿಟ್ಟು ಹೊರಹೊರಡುವುದಕ್ಕೆ ಅವಕಾಶವೇ ಒದಗದ ವಿಲಾಸಿನಿಯರಾದ ಹೆಂಗುಸರು ತಮ್ಮನ್ನು ಆರಾದರೂ ಉತ್ಸವಾದಿಗಳಿಗೆ ಕರದಾರೇ ಎಂದು ಇದಿರುನೋಡುತ್ತಿರುವರು. ಆಹ್ವಾನ ಬಂದೊಡನೆಯೇ ಅವರು ಹೊರಡುವುದಕ್ಕೆ ಸಿದ್ಧರಾಗಿಬಿಡುವರು. ಸ್ವರ್ಣಕುಮಾರಿಯೂ ಪುಷ್ಪಗಳ ಸೌಂದರ್ಯವನ್ನು ನೋಡಿ ಆನಂದಿಸುವುದಕ್ಕಾಗಿ ಹೂದೋಟಕ್ಕೆ ಏಕಾಕಿನಿಯಾಗಿ ತೆರಳಿದಳು. ಆಗ ಅವಳ ಹೃದಯದಲ್ಲಿ ಆವಾವ ಚಿಂತೆಯೋ ಪದಾರ್ಪಣಮಾಡಿದ್ದಿತು. ಈ ಚಿಂತೆಯ ಭಾರದಿಂದ ತಗ್ಗಿದವಳಾಗಿ ಕುಮಾರಿಯು ಮಂದಮಂದ ಗಮನದಿಂದ ತಿರುಗಲಾರಂಭಿಸಿದಳು. ಆಗ ತಾನೆ ಕತ್ತಲೆಯು ಸುತ್ತಲೂ ಆವರಿಸುತ್ತಾ ಬಂದಿದ್ದಿತು, ಆದರೆ ಅದು ಚಂದ್ರನಿಗೆ ಹೆದರಿ ಹೆದರಿ ಅಲ್ಲಲ್ಲಿ ಗಿಡುಗಳ ಮರೆಗಳಲ್ಲಿ ಅವಿತುಕೊಂಡು ಸಮಯವನ್ನು ಕಾಯುತಿದ್ದಿತು. ಅಜ್ಞಾನಿಗಳಾದ ದುಷ್ಟರ ಸ್ವಭಾವವೇ ಹೀಗಾಗಿರುವುದು. ದುಷ್ಟರು ದೂರವಾದರೆಂದು ಸ್ವರ್ಣಕುಮಾರಿಯು ಆವ ಭಯವನ್ನೂ ಶಂಕಿಸದೆ ಹೂದೋಟದಲ್ಲಿ ಸಂಚರಿಸುತ್ತಿರುವಲ್ಲಿ, ಕತ್ತಲೆಯು ರೂಪವನ್ನು ತಾಳಿ ಬಂದಿತೋ ಎಂಬಂತೆ ಪುರುಷನೊಬ್ಬನು ಒಂದು ಗಿಡದ ಕಡೆಯಿಂದ ತಟ್ಟನೆ ಆಕೆಯ ಇದಿರಿನಲ್ಲಿ ಬಂದು ನಿಂತನು. ಕುಮಾರಿಯು ದೃಷ್ಟಿಸಿ ನೋಡಲಾಗಿ ಆತನು ಮಧುಸೂದನನಾಗಿದ್ದನು. ಮಧುಸೂದನನನ್ನು ನೋಡಿದ ಕೂಡಲೆ ಆಕೆಯ ಪ್ರಾಣವು ಪಟಕ್ಕನೆ ಹಾರಿಹೋಗುವುದರಲ್ಲಿದ್ದಿತು. ಆದರೂ ಆಕೆಯು ಅತಿಸಾಹಸದಿಂದ ಧೈರ್ಯವನ್ನು ತಾಳಿಕೊಂಡು, "ಈ ಸಮಯದಲ್ಲಿ ನೀವು ಇಲ್ಲಿಗೆ ಬರಲು ಕಾರಣವೇನು?" ಎಂದು ಕೇಳಿದಳು.

ಮಧುಸೂದನ—ನಾನು ಹೊರಟುಹೋಗಿದ್ದವನು, ನಿನ್ನನ್ನು ನೋಡದೆ ಹೋಗುವುದು ತರವಲ್ಲವೆಂದು ತಿಳಿದು ಹಿಂದಿರುಗಿ ಬಂದೆನು.

ಸ್ವರ್ಣ—ಈಗ ನೋಡಿಯಾಯಿತಷ್ಟೇ? ಇನ್ನಾದರೂ ಹೊರಟು ಹೋಗೋಣವಾಗಲಿ. ತಾವು ತಡಮಾಡುವುದಾದರೆ, ತೊಂದರೆಯುಂಟು.

ಮಧು—(ಕಾತರನಾಗಿ) ಕುಮಾರಿ! ಒಂದೇ ಮಾತು. ನಾನು ನಿನ್ನೊಡನೆ ಒಂದೇ ಮಾತನ್ನಾಡಿ ಹೊರಟುಹೋಗುವೆನು. ದಯೆಯಿಟ್ಟು ನನ್ನ ಮಾತ

ಲಾಲಿಸು. ನಾನು ನಿನಗೆ ಕೆಡುಕನ್ನು ಮಾಡುವುದಕ್ಕಾಗಿ ಬಂದವನಲ್ಲ. ಇಂತಹ ದುರವಸ್ಥೆಯಲ್ಲಿರತಕ್ಕ ನನ್ನಂತಹವನು ಆವ ಅನಿಷ್ಟವನ್ನು ತಾನೇ ಮಾಡಲಾಪನು?

ಸ್ವರ್ಣ—ಒಳ್ಳೆಯದು. ನೀವು ಹೇಳಬೇಕೆಂದಿರುವುದನ್ನು ಬೇಗನೆ ಹೇಳಿಬಿಡಿ. ವಿಳಂಬವಾಗುವುದಾದರೆ, ನಾನು ಇಲ್ಲಿ ನಿಲ್ಲದೆ ಹೊರಟು ಹೋಗುವೆನು.

ಮಧು—ಇಲ್ಲಿ ನಿನ್ನ ಹೊರತಾಗಿ ಮತ್ತಾರೂ ಇರುವುದಿಲ್ಲವಷ್ಟೇ? ನೀನೊಬ್ಬಳೇ ಇಲ್ಲಿರುವುದಾಗಿ ಭಾವಿಸಿ ಬಂದಿರುವೆನು. ಈ ಹೊತ್ತಿನಲ್ಲಿ ನಾನು ನಿನ್ನನ್ನು ಏಕಾಕಿನಿಯಾಗಿ ನೋಡಿದುದು ನನ್ನ ಪುಣ್ಯೋದಯವೆಂದೇ ಹೇಳಬೇಕು.

ಸ್ವರ್ಣ—(ವಿರಕ್ತಳಾಗಿ) ನಿಮ್ಮ ಮಾತುಗಳು ಇವುಗಳೇತಾನೇ? ಇನ್ನು ನಿಮ್ಮ ಮಾತು ಸಾಕು, ನಾನು ಹೊರಡುವೆನು. ಹೊತ್ತು ಬಹಳವಾಗಿ ಹೋಗಿದೆ.

ಮಧು—ಬೇಸರಪಡಬೇಡ, ಕುಮಾರಿ! ಒಂದಾನೊಂದು ಕಾಲದಲ್ಲಿ ನೀನು ನನ್ನನ್ನು ಪ್ರೀತಿಸಿಲ್ಲವೇ? ಇದಕ್ಕಾಗಿಯಾದರೂ ನನ್ನ ಒಂದೆರಡು ಮಾತುಗಳನ್ನು ಕೇಳಕೂಡದೇನು?

ಸ್ವರ್ಣ—(ರೇಗಿದವಳಾಗಿ) ನಿಮ್ಮ ಮಾತು ನನಗೆ ಬೇಕಿಲ್ಲ; ನೀವು ಇಲ್ಲಿಂದ ಬೇಗ ಹೊರಡಿರಿ.

ಮಧು—ಈಗ ನನ್ನ ಮಾತು ಹೇಗೆ ಬೇಕಾದೀತು! ಮೊದಲು ನೀನು ದರಿದ್ರೆಯಾಗಿದ್ದೆ; ಆಗ ನೀನು ನನ್ನನ್ನು ಹಣಗಾರನೆಂದು ತಿಳಿದಿದ್ದೆ. ಅದು ಕಾರಣವೇ ನೀನು ನನ್ನನ್ನು ಪ್ರೀತಿಸಿದ್ದುದು; ಈಗ ನೀನು ಅಪರಿಮಿತವಾದ ಸಂಪತ್ತಿಗೆ ಅಧೀಶ್ವರಿ, ನಾನಾದರೋ ನಿನ್ನ ಕಣ್ಣಿಗೆ ದರಿದ್ರನಾಗಿ ಕಾಣಿಸುತ್ತಿರುವೆನು.

ಸ್ವರ್ಣ—ಹೊರಡಿರಿ, ಸಾಕು; ಈಗಲೇ ಹೊರಡಿರಿ. ನನ್ನ ತೋಟಕ್ಕೆ ಬಂದು ನನ್ನನ್ನೇ ಅಪಮಾನ ಪಡಿಸುವಿರಾ? ನಾನು ಇದನ್ನು ಬಲು ಹೊತ್ತು ಸಹಿಸಿಕೊಂಡಿರಲಾರೆನು.

ಮಧು—(ನಗುತ್ತಾ) ಆ ಪ್ರೀತಿಯೆಲ್ಲವೂ ಈಗ ಎಲ್ಲಿ ಹೋಯಿತು, ಕುಮಾರಿ?

ಸ್ವರ್ಣ—ಈಗ ಎಲ್ಲವೂ ಎಲ್ಲಿಯೋ ಮಾಯವಾಗಿ ಹೋಯಿತು. ಈಗ ಅದರ ಸುದ್ದಿಯೇಕೆ? ನೀವು ಬಂದದಾರಿವಿಡಿದು ಹೊರಡಿರಿ. ವ್ಯರ್ಥವಾದ ಮಾತುಗಳಿಂದ ಕಾಲ ಕಳೆವುದು ಸರಿಯಲ್ಲ.

ಮಧು—ಕುಮಾರಿ! ಹಾಗಾದರೆ ಇಂದು ಮೊದಲು ನಾನು ನಿನಗೆ ಭಯಂಕರನಾದ ಶತ್ರುವಾಗಿರುವೆನು. ಮೊದಲು ನಾನು ಎಷ್ಟರ ಮಟ್ಟಿಗೆ ಪ್ರೀತಿ ಸುತ್ತಿದ್ದೆನೋ, ಈಗ ಅಷ್ಟರ ಮಟ್ಟಿಗೆ ದ್ವೇಷಿಸುವೆನು.

"ಸಾಕು, ಸಾಕು; ಇನ್ನು ಮಾತು ಕೇಳುವುದಕ್ಕಾಗುವುದಿಲ್ಲ," ಎಂದು ಸ್ವರ್ಣಕುಮಾರಿಯು ಹೇಳುತ್ತಾ ಹೇಳುತ್ತಾ ಮನೆಯ ಕಡೆಗೆ ತಿರುಗಿದಳು. ಮಧುಸೂದನನು ಆಕೆಯ ಕೈಗಳನ್ನು ಬಲವಾಗಿ ಹಿಡಿದು "ನನ್ನ ಮಾತುಗಳನ್ನು ನೀನು ಕೇಳಲೇ ಬೇಕು. ನೀನು ಕೇಳಲು ಇಷ್ಟಪಡದಿದ್ದರೆ, ನಾನು ಬಲಾತ್ಕಾರ ದಿಂದಲಾದರೂ ಕೇಳುವಂತೆ ಮಾಡುವೆನು. ಒಂದು ವೇಳೆ ನೀನು ಅರಚಿಕೊಂಡರೂ ಮನೆಯೊಳಗೆ ಕೇಳಿಸುವುದಿಲ್ಲ," ಎಂದು ಅಬ್ಬರದ ಮಾತನಾಡಿದನು.

ಸ್ವರ್ಣಕುಮಾರಿಯು ಕೋಪಕ್ಕೆ ಪರವಶೆಯಾಗಿ ಕಣ್ಣುಗಳಿಂದ ಬೆಂಕಿಯ ಕಿಡಿಗಳನ್ನುದುರಿಸುತ್ತಾ, "ಕೈ ಬಿಡು. ಮುಟ್ಟಬೇಡ, ನರಾಧಮ!" ಎಂದು ಗದ್ದರಿಸಿದಳು.

ಮಧುಸೂದನನು ಕರ್ಣಕಠೋರವಾದ ಧ್ವನಿಯಿಂದ, "ಎಲೆ ಹುಡುಗಿ! ನರಾಧಮ' ಎನ್ನುವಷ್ಟು ಧೈರ್ಯಬಂದಿತಲ್ಲವೇ? ನನ್ನ ಶಕ್ತಿಯನ್ನಾದರೂ ನೋಡು. ನಾನು ನಿನ್ನನ್ನು ಇಂದು ಸುಮ್ಮನೆ ಬಿಡತಕ್ಕವನಲ್ಲ. ನೀನು ಓಡಿ ಹೋಗುವುದಾದರೂ, ಕಿರಿಚಿಕೊಳ್ಳುವುದಾದರೂ, ನಿನ್ನ ದವಡೆಗೆ ಚೆನ್ನಾಗಿ ಎರಡ ಬಿಗಿಯುವೆನು. ನನ್ನನ್ನು ಆರೆಂದು ತಿಳಿದು ಮಾತಾಡುವೆ?" ಎಂದು ಅಬ್ಬ ರಿಸಿದನು.

ಸ್ವರ್ಣಕುಮಾರಿಯು ಆತನ ಹಿಡಿತದಿಂದ ತಪ್ಪಿಸಿಕೊಳ್ಳಬೇಕೆಂದು ಎಷ್ಟೋ ಹೋರಾಡಿದಳು, ಆದರೆ ಅದು ಸಾಗದೇ ಹೋಗಲು ಅಚೇತನಳಾಗಿ ನೆಲದ ಮೇಲೆ ದುಪ್ಪನೆ ಬಿದ್ದುಬಿಟ್ಟಳು. ಇಷ್ಟೆನ್ನುವುದರೊಳಗಾಗಿ ಮತ್ತೊಂದು ಗಿಡದ ಬುಡ ದಿಂದ ಮತ್ತೊಬ್ಬನು ಚಿಣ್ಣನೆ ಹಾರಿಬಂದು ಮಧುಸೂದನನ ಮುಖದ ಮೇಲೆ ಒಂದು ಬಲವಾದ ಒತ್ತವನ್ನು ಕೊಟ್ಟನು. ಈ ಪೆಟ್ಟಿನ ರಭಸಕ್ಕೆ ಮಧುಸೂದನನು ಗಿರರರನೆ ಸುತ್ತಿಕೊಂಡು ಮೂರ್ಛಿತನಾಗಿ ಭೂತಳದಲ್ಲಿ ಪವಡಿಸಿಬಿಟ್ಟನು. ಬಳಿಕ ಆಗಂತುಕವ್ಯಕ್ತಿಯು ಮೈಮರೆತು ಬಿದ್ದಿದ್ದ ಕುಮಾರಿಯನ್ನು ಎತ್ತಿಕೊಂಡು ಮನೆಯ ಕಡೆಗೆ ಹೊರಟುಹೋಯಿತು.

ಸ್ವರ್ಣಕುಮಾರಿಯು ಚೇತರಿಸಿಕೊಂಡು ನೋಡಿದಾಗ, ಒಂದು ಕೋಣೆಯಲ್ಲಿ ಹಾಸುಗೆಯ ಮೇಲೆ ಮಲಗಿದ್ದಳು. ಆಕೆಯ ಸುತ್ತಲೂ ಚೌಧುರಿ, ವೀರಚಂದ್ರ, ಜಯಚಂದ್ರ, ನಾಲ್ಕು ಯುವತಿಯರು, ದಾಸದಾಸಿಯರು ಇನ್ನೂ ಕೆಲವರು ಕುಳಿ

ತಿದ್ದರು. ವೃದ್ಧಸುಮಂಗಲಿಯೊಬ್ಬಳು ಮಗುವಿಗೆ ದೃಷ್ಟಿಯಾಯಿತೆಂದು ತಿಳಿದು ಮೆಣಸಿನಕಾಯಿಗಳನ್ನು ನಿವಾಳಿಸಿ ಬೀಸಾಡಿದಳು. ಮತ್ತೊಬ್ಬಳು ಗೃಹದೇವತೆಗೆ ಮುಡುಪನ್ನು ಕಟ್ಟಿಟ್ಟಳು. ಇನ್ನೊಬ್ಬಳು ದೃಷ್ಟಿಪರಿಹಾರಕ್ಕಾಗಿ ಲಟಲಟನೆ ನೆಟ್ಟಿಗೆಯನ್ನು ಮುರಿದಳು. ಇನ್ನೂ ಕೆಲವರು ತಮತಮಗೆ ತೋರಿಬಂದುದನ್ನು ಮಾಡಿನೋಡಿದರು.

ಸ್ವರ್ಣಕುಮಾರಿಯು ಹಾಸುಗೆಯಿಂದೆದ್ದು ಕುಳಿತಳು. ಚೌಧುರಿಯು ಎಲ್ಲಿಯಾದರೂ ಪೆಟ್ಟಾಗಿದೆಯೇ ಎಂದು ಕೇಳಿದನು. ಕುಮಾರಿಯು ಒಂದೆರಡು ಕಡೆಗಳಲ್ಲಿ ಮೈತರೆದಿರುವುದೇ ಹೊರತು ಪೆಟ್ಟೇನೂ ಆಗಿಲ್ಲವೆಂದು ಉತ್ತರಕೊಟ್ಟಳು. ಅಲ್ಲಿದ್ದವರೆಲ್ಲರೂ ಹೀಗಾಗಲೂ ಕಾರಣವೇನೆಂದು ಕೇಳಿದರು.

ಸ್ವರ್ಣ—ನಾನೊಬ್ಬಳೇ ತೋಟದಲ್ಲಿ ತಿರುಗಾಡುತಿದ್ದೆನು. ಆಗ-ಮಧುಸೂದನನು ಎಲ್ಲಿಂದಲೋ ಹಠಾತ್ತಾಗಿ ಬಂದು ನನ್ನನ್ನು ಆಕ್ರಮಿಸಿದನು. ಕೂಡಲೆ ನನಗೆ ಜ್ಞಾನವು ತಪ್ಪಿಹೋಯಿತು. ಆ ಮೇಲೆ ಏನಾಯಿತೋ ನನಗೊಂದೂ ತಿಳಿಯದು.

ಚೌಧುರಿ—ನಾಳೆಯ ಬೆಳಗ್ಗೆ ವಕೀಲಮಹಾಶಯನು ಹೊರಡುವನಾದುದರಿಂದ ಈ ದಿನದ ಸಾಯಂಕಾಲ ನಾನು ಆತನೊಡನೆ ಮಾತನಾಡಬೇಕಾಗಿದ್ದುದನ್ನು ಮಾತನಾಡಿಕೊಂಡು ನಿಶಾಮುಖದಲ್ಲಿ ಕೋಣೆಯಿಂದ ಹೊರಗೆ ಬರುತ್ತಿದ್ದೆನು. ಆಗ ಆರೋ ಒಬ್ಬರು ನಿನ್ನನ್ನು ಎತ್ತಿಕೊಂಡುಬಂದು ನಿನ್ನ ಕೋಣೆಯಲ್ಲಿ ಒಂದು ಹಾಸುಗೆಯ ಮೇಲೆ ನಿನ್ನನ್ನು ಮಲಗಿಸಿ ಒಬ್ಬ ಪರಿಚಾರಿಕೆಯನ್ನು ಕರೆದು, "ತೋಟದಲ್ಲಿ ಸಂಚಾರಮಾಡುತಿದ್ದ ನಿಮ್ಮ ಯಜಮಾನಮ್ಮನವರನ್ನು ಆರೋ ನರಾಧಮನು ದುರಭಿಪ್ರಾಯದಿಂದ ಆಕ್ರಮಣಮಾಡಿದ್ದನು. ಆ ಭಯದಿಂದ ಈಯಮ್ಮನು ಮೂರ್ಛೆಗೊಂಡಿದ್ದಳು. ನೀವುಗಳು ಎಚ್ಚರಿಕೆಯಿಂದ ನೋಡಿಕೊಳ್ಳಿರಿ," ಎಂದು ಹೇಳಿ ಎಲ್ಲಿಯೋ ಹೊರಟುಹೋದರು. ಅವರಾರೋ ನನಗೆ ಗೊತ್ತಾಗಲಿಲ್ಲ. ಪರಿಚಾರಿಕೆಯೂ ಗೊತ್ತಿಲ್ಲವೆಂದು ಹೇಳಿದಳು. ಬಂದಿದ್ದವರು ಥಟ್ಟನೆ ಹೊರಟುಹೋದುದರಿಂದ, ಅವರಾರೆಂಬುದನ್ನು ತಿಳಿಯಲು ನನಗೆ ಕೊಂಚವಾದರೂ ಅವಕಾಶವಾಗಲಿಲ್ಲ. ಆರೋ ದೇವತಾ ಮನುಷ್ಯರು ಬಂದು ಉಪಕಾರಮಾಡಿರಬೇಕು. ಇಲ್ಲದಿದ್ದರೆ ಅವರು ನಮ್ಮನ್ನು ನೋಡದೆ ಹೊಗುತ್ತಿರಲಿಲ್ಲ. ಲೋಕದಲ್ಲಿ ಎಷ್ಟೋ ಮಹನೀಯರಾದ ಅವ್ಯಾಜಬಂಧುಗಳು ಇರುವುದರಿಂದಲೇ ಮಳೆ ಬೆಳೆಗಳಾಗುತ್ತಿರುವುವು.

## ಹತ್ತೊಂಬತ್ತನೆಯ ವಿಲಾಸ

### ಆಲೋಚನೆ

ಮಧುಸೂದನನು ವಜ್ರಾಯುಧದ ಪೆಟ್ಟಿಗೆ ಸಮಾನವಾದ ಒತ್ತುವನ್ನು ತಿಂದು ತಲೆ ತಿರುಗಿದವನಾಗಿ ಭ್ರಾಂತಿಗೊಂಡು ನೆಲದಲ್ಲಿ ಬಿದ್ದು ಒದೆದಾಡಿದನು. ಬಲು ಹೊತ್ತಿನ ಮೇಲೆ ಅವನಿಗೆ ಜ್ಞಾನೋದಯವಾಯಿತು. ಆಗ ಅವನ ಬಳಿಯಲ್ಲಿ ಆರೂ ಇರಲಿಲ್ಲ. ಮಧುಸೂದನನು ಇನ್ನು ಅಲ್ಲಿರುವುದು ಅಪಾಯಕರವೆಂದು ತಿಳಿದು ಕಾಲಹರಣಕ್ಕೆಡೆಗುಡದೆ ನದಿಯ ತೀರಕ್ಕೆ ಬಂದು ಅಲ್ಲಿದ್ದ ಒಂದು ಸಣ್ಣ ದೋಣಿಯಲ್ಲಿ ಕುಳಿತು ತಾನೇ ಹುಟ್ಟುಹಾಕುತ್ತಾ ಅದನ್ನು ನಡೆಯಿಸಿಕೊಂಡು ಶಾಂತಿಪುರಾಭಿಮುಖವಾಗಿ ಹೊರಟುಹೋದನು. ಕಾಲಕ್ರಮದಲ್ಲಿ ಶಾಂತಿಪುರಕ್ಕೆ ಸೇರಿ ಅಲ್ಲಿ ತಾನು ಮೊದಲೇ ಬಾಡಿಗೆಗೆ ತೆಗೆದಿಟ್ಟಿದ್ದ ತನ್ನ ಅಂಗಡಿಗೆ ಬಂದನು.

ರಾತ್ರಿಯ ಕಾಲ; ಪ್ರಾಯಿಕವಾಗಿ ಹತ್ತು ಗಂಟೆಯಾಗಿ ಹೋಗಿರುವುದು. ಪುರಜನರು ತಮ್ಮ ತಮ್ಮ ಮನೆಗಳಲ್ಲಿ ನಿದ್ರಿಸುತ್ತಿರುವರು. ಒಂದೊಂದು ಅಂಗಡಿಯವರು ಮಟ್ಟಿಗೆ ಅಂಗಡಿಯ ಬಾಗಿಲುಗಳನ್ನು ತೆರೆದುಕೊಂಡು ಆಯಾ ದಿನದ ಲೆಕ್ಕಪಕ್ಕಗಳನ್ನು ತಿದ್ದಿ ಸರಿಪಡಿಸಿಕೊಳ್ಳುತ್ತಿರುವರು. ಮಧುಸೂದನನು ತನ್ನ ಸ್ಥಾನದಲ್ಲಿ ಹಾಸುಗೆಯನ್ನು ಹಾಸಿಕೊಂಡು ಅದರ ಮೇಲೆ ಕುಳಿತು ಪರಿಪರಿಯಾಗಿ ಚಿಂತಿಸುತ್ತಿದ್ದನು. ಅಷ್ಟು ಹೊತ್ತಿನಲ್ಲಿ ಹುಡುಗನೊಬ್ಬನು ಬಂದು, "ತಾವೆಯೇ ಮಧುಸೂದನ ಮಹಾಶಯರು?" ಎಂದು ಪ್ರಶ್ನೆಮಾಡಿದನು.

ಮಧು—ನಾನೇ ಮಧುಸೂದನನೆಂಬುವನು. ನಿನಗೇನಾಗಬೇಕು?

ಹುಡುಗ—ಒಬ್ಬ ಹೆಂಗುಸು ನಿಮ್ಮನ್ನು ನೋಡಬೇಕೆಂದು ಕಾದು ನಿಂತಿರುವಳು.

ಮಧು—(ಚಕಿತನಾಗಿ) ಏನು, ಹೆಂಗುಸು ನನ್ನನ್ನು ನೋಡಬೇಕೆಂದು ಕಾದಿರುವಳೇ? ಎಲ್ಲಿ?

ಹುಡುಗ—ಈ ಊರಿನ ಆಲದ ಮರದ ಕೆಳಗೆ. ತಾವು ಬರುವುದಾದರೆ ನಾನು ಕರೆದುಕೊಂಡು ಹೋಗಿ ತೋರುವೆನು.

ಇದನ್ನು ಕೇಳಿ ಮಧುಸೂದನನು ಹುಡುಗನನ್ನು ಹಿಂಬಾಲಿಸಿದನು. ಹುಡುಗನು ಆ ಸ್ಥಳವನ್ನು ತೋರಿ ಹೊರಟು ಹೋದನು. ಮಧುಸೂದನನು ಹೆಂಗುಸು ಆರಿರಬಹುದೆಂದು ನೋಡಿದನು. ಆಕೆಯು ಆತನ ಗುಪ್ತಪತ್ನಿ

ಯಾದ ಚಂದ್ರವದನೆಯಾಗಿದ್ದಳು. ಮಧುಸೂದನನು ಬೆಳದಿಂಗಳ ಬೆಳಕಿನಲ್ಲಿ ಚಂದ್ರವದನೆಯನ್ನು ನೋಡಿದನು. ಆಕೆಯು ಮಲಿನಾಂಬರವನ್ನುಟ್ಟು ಗಳಿತ ಯೌವನಳಾದ ಅಸ್ಥಿಚರ್ಮಮಾತ್ರಸಾರವುಳ್ಳ ಮುದುಕಿಯಂತೆ ಕಾಣಿಸಿದಳು. ಚಂದ್ರವದನೆಯ ಈ ದುರವಸ್ಥೆಯನ್ನು ನೋಡಿ ಮಧುಸೂದನನು ಭಯದಿಂದ ನಡುಗುತ್ತಾ ನಿಂತನು. ಆಕೆಯು ಇವನನ್ನು ನೋಡಿ, "ಪ್ರಿಯ ಮಹಾಶಯ! ಇಷ್ಟು ದಿನವಿದ್ದ ನಿನ್ನ ಆಶೆಯು ಇಂದಿಗೆ ನಿರಾಶೆಯಾಯಿತು," ಎಂದಳು.

ಮಧು—(ವಿರಕ್ತನಾಗಿ) ಇದರಿಂದ ನಿನ್ನ ಮನೋರಥವು ನೆರವೇರಿತೇ ಹೇಗೆ? ನನಗೆ ಒಳ್ಳೆಯದಾದರೆ ನಿನಗೂ ಒಳ್ಳೆಯದಲ್ಲವೇ? ಇದನ್ನರಿಯದೇ ಹುಚ್ಚಿಯಂತೆ ಮಾತನಾಡುವೆ!

ಚಂದ್ರ—ನಾನು ಮೊದಲು ಹುಚ್ಚಿಯಾಗಿದ್ದೆನು, ಈಗಲ್ಲ; ತಾವು ಮೊದಲು ಜಾಣರಾಗಿದ್ದು ಈಗ ತಲೆಮಾರಿದ ಹುಚ್ಚರಾಗಿರುವಿರಿ.

ಮಧು—ಈಗ ನೀನು ಚತುರೆಯೂ ಕಪಟನಾಟಕ ನಾಯಿಕೆಯಾದ ಮಾಯಾವಿನಿಯೂ ಆಗಿರುವೆಯೆಂದು ನಾನು ಚೆನ್ನಾಗಿಯೂ ಬಲ್ಲೆನು. ಇದೆಲ್ಲಾ ಹಾಗಿರಲಿ. ಇಷ್ಟು ಹೊತ್ತಿನಲ್ಲಿ ನೀನೊಬ್ಬಳೇ ಇಲ್ಲಿಗೆ ಬಂದು ನನ್ನನ್ನು ಕರೆಯಲು ಕಾರಣವೇನು?

ಚಂದ್ರ—ಕಾರಣವೇನೆಂಬುದು ಗೊತ್ತೇ ಇರುವುದು. ನಿನಗೆ ಸಂಪತ್ತು ಕೈಸೇರುವಲ್ಲಿ ನನಗೆ ಸ್ವಾರ್ಥಕ್ಕೆ ಕಾರಣವಿಲ್ಲವೇ? ನಿನ್ನ ಮಾತಿನಂತೆಯೇ ನಾನು ಬೇರೆಯ ಹೆಸರನಿಟ್ಟುಕೊಂಡು ಚಂದ್ರವದನೆಯು ಸತ್ತುಹೋದಳೆಂಬ ಸುದ್ದಿಯನ್ನು ಎಲ್ಲೆಲ್ಲಿಯೂ ಬೀರಿ ಈ ಊರಿಗೆ ಸಮೀಪದಲ್ಲಿರುವ ಒಂದು ಗ್ರಾಮದಲ್ಲಿ ವಾಸಮಾಡಿಕೊಂಡಿರುವೆನು. ಆ ಗ್ರಾಮದಲ್ಲಿದ್ದುಕೊಂಡೇ ನಿನ್ನ ಚರ್ಯೆಯನ್ನು ಪರೀಕ್ಷಿಸುತ್ತಿರುವೆನು. ಲೋಕದಲ್ಲಿ ಒಳ್ಳೆಯ ಸುದ್ದಿಗಿಂತಲೂ ಕೆಟ್ಟ ಸುದ್ದಿಯೇ ಬಲು ಬೇಗನೆ ಹಬ್ಬುವುದು. ಕಮಲಾಕಾಂತರಾಯ ಮಹಾಶಯನ ಸಂಪತ್ತು ನಿನ್ನ ಕೈಸೇರಲಿಲ್ಲವೆಂದು ಎಲ್ಲೆಲ್ಲಿಯೂ ಜನರು ಆಡಿಕೊಳ್ಳುತ್ತಿರುವರು. ನಿನ್ನ ದೌರ್ಭಾಗ್ಯವನ್ನು ಸುಟ್ಟರು. ಈಗ ನೋಡು, ಶ್ರೀಮತೀ ಸ್ವರ್ಣಕುಮಾರೀ ದೇವಿಯು ರಾಯಮಹಾಶಯನ ಅಷ್ಟೈಶ್ವರ್ಯಕ್ಕೂ ಏಕಮಾತ್ರಳಾದ ಉತ್ತರಾಧಿಕಾರಿಣಿಯಾಗಿ ಶ್ರೀರಾಜರಾಜೇಶ್ವರಿಯಂತೆ ಪ್ರಭಾಪ್ರಭಾವದಿಂದ ದೇದೀಪ್ಯಮಾನಳಾಗಿರುವಳು. ಈ ಯಪಮಾನವನ್ನು ಸಹಿಸಲಾರದೆ ನೀನು ಇಲ್ಲಿಗೆ ಬಂದು ಬಿಡುವೆಯೆಂದು ನಾನು ಊಹಿಸಿದುದು ಸರಿಯೇ ಆಯಿತು. ನಿನ್ನ ಚಾತುರ್ಯದ ಮಹಾಪ್ರಯತ್ನವೆಲ್ಲವೂ ಗಾಳಿಯಲ್ಲಿ ತೂರಿಹೋಯಿತು. ಇನ್ನು ನಾನು ಬಡ

ಕಿದೆನು. ಇಂದಿನಿಂದ ನಾನು ಚಂದ್ರವದನೆಯಾಗುವೆನು. ಸತ್ತುಹೋಗಿದ್ದವಳು ಮತ್ತೆ ಹುಟ್ಟಿಬಂದಳೆಂದು ಜನರು ತಿಳಿದುಕೊಳ್ಳಲಿ ; ದೋಷವೇನು ?

ಮಧು—(ಕಂಗೆಟ್ಟವನಾಗಿ) ನಾನು ಮಾಡಿದ ಪ್ರಯತ್ನವು ವಿಫಲವಾಯಿತು. ನನ್ನ ದುರವಸ್ಥೆಯನ್ನು ಕುರಿತು ಮಾತನಾಡಿ ತಾನೇ ಏನು ಪ್ರಯೋಜನ ? ಚಂದ್ರ ! ಅಟ್ಟದಿಂದ ಬಿದ್ದವನನ್ನು ದಡಿಯಿಂದ ಚಚ್ಚಿದ ಹಾಗೆ ಎಂಬಂತೆ ಇಷ್ಟು ಕಠಿಣವಾಗಿ ವರ್ತಿಸುವುದು ನಿನಗೆ ತಕ್ಕುದಲ್ಲ. ಅನೇಕಾನೇಕ ಸದಸದ್ಭಾವಗಳು ಒಟ್ಟಿಗೆ ಸೇರಿಕೊಂಡು ನನ್ನ ಮನಸ್ಸೆಂಬ ಅಗಾಧವಾದ ಸಮುದ್ರವನ್ನು ಮಥನಮಾಡಿರುವುವು. ಇದರಿಂದ ದುರಾಗ್ರಹವೆಂಬ ಮಹಾವಿಷವು ಉತ್ಪನ್ನವಾಗಿರುವುದು. ಹೀಗಿರುವುದರಿಂದ ಮರ್ಮವನ್ನು ಉದ್ಘಾಟಿಸಿ ನನಗೆ ಕೋಪಬರುವಂತೆ ಮಾಡಬೇಡ, ಕಂಡೆಯಾ ? ಈಗಣ ನನ್ನ ಕೋಪಾಗ್ನಿಯು ಅತಿ ದಾರುಣವಾದುದು. ಇದು ಎಲ್ಲೆ ತಪ್ಪುವುದಾದರೆ ಮೂಜಗವನ್ನಾದರೂ ಸುಟ್ಟು ಬೂದಿ ಮಾಡದೇ ಬಿಡದು. ಹೀಗಿರುವಲ್ಲಿ ನೀನು ನನ್ನ ಕೋಪಾಗ್ನಿಗೆ ಆಹುತಿಯಾಗದಂತೆ ಎಚ್ಚರದಿಂದಿರಬೇಕಾದೀತು.

ಚಂದ್ರ—ಇದು ನಿನ್ನಂತಹ ಪುರುಷನಿಗೆ ಸಹಜವಾದ ಪೌರುಷವೇ ಸರಿ, ಆದರೆ ಹೆಂಗುಸಿನ ಮೇಲೆ ತೋರಿಸತಕ್ಕ ಪೌರುಷವು ಅದೆಂತಹ ಪೌರುಷವೋ ನಾನು ಕಾಣೆನು. ಒಂದು ವೇಳೆ ನೀನು ನನ್ನ ಮೇಲೆ ಪೌರುಷಪ್ರಯೋಗ ಮಾಡುವುದಾಗಿ ಹಠ ಹಿಡಿದರೂ ನಾನು ಅಂಜತಕ್ಕವಳಲ್ಲ. ಇದನ್ನು ನೀನು ಬಲ್ಲವನಾಗಿಯೂ ಇರುವೆ. ಇದನ್ನು ತಿಳಿ ತಿಳಿದೂ ಇಂತಹ ಮಾತುಗನ್ನಾಡುವುದಕ್ಕಾಗಿ, ನಾನು ನಿನ್ನ ವಿಷಯದಲ್ಲಿ ಪಶ್ಚಾತ್ತಾಪ ಪಡಬೇಕಾಗಿದೆಯೇ ಹೊರತು ಪ್ರತಿಯಾಗಿ ಕೋಪಮಾಡಲು ಇಷ್ಟಪಡಲಾರೆನು. ಈ ಮಾತುಗಳು ಹಾಗಿರಲಿ. ನಾವಿಬ್ಬರೂ ಸೇರಿಕೊಂಡು ಇಬ್ಬರಿಗೂ ಲಾಭವುಂಟಾಗುವಂತಹ ಕಾರ್ಯವನ್ನು ಪರ್ಯಾಲೋಚಿಸತಕ್ಕುದಿದೆ. ನಾವಿಬ್ಬರೂ ಕದನವಾಡಿದರೆ ಬಂದ ಭಾಗ್ಯವೇನು ? ಮಧುಸೂದನ ! ಒಂದೇ ತಡವೆಗೆ ನೀನೇನಾದರೂ ಎದೆಯೊಡೆದು ಹತಾಶನಾಗಿರುವೆಯಾ, ಹೇಗೆ ? ಪುರುಷನಾದವನು ಒಂದು ಪ್ರಯತ್ನವು ಕೆಟ್ಟಲ್ಲಿ ಮತ್ತೊಂದನ್ನು ಅವಲಂಬಿಸಬೇಕಾದುದು ಧರ್ಮ. ತತ್ಕಾಲದಲ್ಲಿ ನಿನಗೆ ಬುದ್ಧಿಯೋಡದಿದ್ದರೂ, ನಾನು ನಿನಗೆ ಕಾರ್ಯಸಾಧನೋಪಾಯವನ್ನು ಹೇಳಿಕೊಡುವೆನು. ಇದಕ್ಕಾಗಿ ಬಾಯಿಗೆ ಬಂದಂತೆ ಮಾತನಾಡಿದರೆ ಏನು ಆದ ಹಾಗಾಯಿತು ? ನನಗೆ ನೀನು ಉಪಕಾರಮಾಡುವುದಾದರೆ, ನಾನೂ ನಿನಗೆ ಯುಕ್ತವಾದ ಪ್ರತ್ಯುಪಕಾರವನ್ನೇ ಮಾಡುವೆನು. ಇದು ಮಟ್ಟಿಗೆ ಚೆನ್ನಾಗಿಯೂ ಜ್ಞಾಪಕದಲ್ಲಿ ಇರಲಿ.

ಮಧು—(ಪರ್ಯಾಲೋಚಿಸಿ) ಚಂದ್ರವದನೆ! ಒಳ್ಳೆಯ ಉಪದೇಶವನ್ನೇ ಮಾಡಿದೆ. ನಾವಿಬ್ಬರೂ ವಿವಾದ ಮಾಡುತ್ತಾ ಕುಳಿತರೆ, ನಾವಿಬ್ಬರೂ ಕೆಡುವೆವು. ಬಳಿಕ ಆರಿಗೆ ಏನು ತಾನೇ ಪ್ರಯೋಜನವಾಗುವುದು?

ಚಂದ್ರವದನೆಯು ಇಷ್ಟು ಹೊತ್ತಿನ ವರೆಗೂ ಉದಾಸೀನ ಭಾವವನ್ನು ತಾಳಿ ಮಾತನಾಡುತಿದ್ದವಳು, ಈಗ ಗಂಭೀರ ಭಾವದಿಂದ ಮಾತನಾಡತೊಡಗಿದಳು:—

"ಮಧುಸೂದನ! ಹೇಳುವೆನು, ಕೇಳು. ನೀನು ಹೇಳಿದ ಹಾಗೆಲ್ಲಾ ಕೇಳುವುದಕ್ಕೆ ಮೊದಲು ಮಾಡಿ ಈಗ್ಗೆ ಪ್ರಾಯಿಕವಾಗಿ ಹತ್ತೆಂಟು ತಿಂಗಳುಗಳಾದುವು. ಒಂದು ತಡವೆ ರಾಯಪೇಟೆಯಲ್ಲಿ ಸರಕಾರವಾಡಿಯ ತೋಟದೊಳಗೆ ಕುಳಿತುಕೊಂಡು ನೀನು ಸ್ವರ್ಣಕುಮಾರಿಯನ್ನು ಮದುವೆಯಾದ ಬಳಿಕ ಬಹಳವಾಗಿ ದ್ರವ್ಯದಿಂದುಪಕರಿಸುವುದಾಗಿ ಹೇಳಿದೆ. ಆಗ ನಾನು ನಿನ್ನ ಗೋಜಿಗೆ ಬರಲಿಲ್ಲ. ನಿನ್ನ ಆ ಉಪಾಯವು ಫಲಿಸದಿರಲು ಕಾರಣವೇನು? ಅದಾದ ಮೇಲೆ ರಾಯ ಮಹಾಶಯನ ಆಸ್ತಿಯನ್ನು ಸೂರೆಗೊಳ್ಳುವೆನೆಂದು ಆಶೆ ಹುಟ್ಟಿಸಿ ನಾನು ಬದುಕಿದ್ದರೂ ಸತ್ತಳೆಂದು ಗಲಭೆಯೆಬ್ಬಿಸಿದೆ. ನಾನು ಸ್ವಾರ್ಥದ ಮೇಲೆ ದೃಷ್ಟಿಯಿಟ್ಟು ಆಗಲೂ ನಿನ್ನ ಮಾತಿಗೆ ಒಪ್ಪಿ ನಡೆದುಕೊಂಡೆನು, ಆದರಿಂದಲಾದರೂ ನೀನು ಸಾಧಿಸಿದ ಮಹಾಕಾರ್ಯವೇನು?"

ಮಧುಸೂದನ—(ವ್ಯಸ್ತನಾಗಿ) ಈಗ ಕಳೆದು ಹೋದ ಹಿಂದಣ ಕತೆಗಳನ್ನು ಪುನರುತ್ಥಾಪನೆಮಾಡುವುದರಿಂದ ನಿನ್ನ ಉದ್ದೇಶ ತಾನೇ ಏನಿರುವುದು?

ಚಂದ್ರವದನೆ—ವಿಷಯಗಳನ್ನು ಆಗಿಂದಾಗ ತಿಳಿಯಪಡಿಸುತ್ತಿರುವುದರಿಂದಲಾದರೂ ನಿನ್ನ ಕಲ್ಲೆದೆಯು ಕರಗುವುದೋ ಏನೋ ಎಂದು ತಿಳಿದಿರುವೆನು. ಇಷ್ಟಾದರೂ ನನ್ನ ಸಂಕಟವು ನಿನ್ನ ತಲೆಗೆ ಹತ್ತಲೇ ಇಲ್ಲ.

ಮಧು—(ಜಿಗುಪ್ಸೆಯಿಂದ) ನೀನು ಏನೇನ ಹೇಳಬೇಕೆಂದು ಸಂಕಲ್ಪ ಮಾಡಿರುವೆಯೋ ಅದೆಲ್ಲವೂ ಮುಗಿಯಲಿ. ಅಲ್ಲಿಯ ವರೆಗೂ ನಿನ್ನ ಮನಸ್ಸಿಗೆ ಸಮಾಧಾನವುಂಟಾಗುವುದೇ ಇಲ್ಲ. ಹೇಳುವುದಾದರೆ ಬೇಗ ಬೇಗನೆ ಹೇಳಿಬಿಡು.

ಚಂದ್ರವದನೆಯು ಮತ್ತೆ ಹೇಳುವುದಕ್ಕೆ ಪ್ರಾರಂಭಮಾಡಿದಳು:—

ರಾಯಮಹಾಶಯನ ಸಂಪತ್ತನ್ನು ಸೂರೆಗೊಳ್ಳುವುದರಲ್ಲಿ ನೀನು ಎರಡು ಉಪಾಯಗಳನ್ನು ನನಗೆ ತಿಳಿಯಹೇಳಿದೆ. ಒಂದನೆಯದು—ರಾಯಮಹಾಶಯನನ್ನು ಸರ್ವಪ್ರಕಾರದಲ್ಲಿಯೂ ಸಂತೋಷಪಡಿಸಿ ಅವನ ಅತುಳಸಂಪತ್ತಿಗೂ ಉತ್ತರಾಧಿಕಾರಿಯಾಗುವೆನೆಂದೂ; ಎರಡನೆಯದು—ಒಂದು ವೇಳೆ ದೈವಯೋಗ

ದಿಂದ ಆತನ ಸಂಪತ್ತಿಗೆ ಸ್ವರ್ಣಕುಮಾರಿಯೇ ಉತ್ತರಾಧಿಕಾರಿಣಿಯಾಗುವು ದಾದರೆ, ಉಪಾಯಾಂತರದಿಂದ ಅವಳನ್ನು ವಿವಾಹ ಮಾಡಿಕೊಂಡು ಅವಳ ಆಸ್ತಿ ಯೆಲ್ಲಕ್ಕೂ ತಾನೇ ಯಜಮಾನನಾಗುವೆನೆಂದೂ, ನೀನು ನನಗೆ ತಿಳಿಸಿರಲಿಲ್ಲವೇ? ಅಲ್ಲದೆಯೂ ಮೊದಲನೆಯ ಉಪಾಯವು ಸಿದ್ಧಿಸಿದರೆ, ನನ್ನನ್ನು ಧರ್ಮಪತ್ನಿ ಯನ್ನಾಗಿ ಮಾಡಿಕೊಂಡಿರುವುದಾಗಿಯೂ, ಮೊದಲನೆಯದು ಕೆಟ್ಟು ಎರಡನೆ ಯದು ಸಿದ್ಧಿಸಿದರೆ, ತಿಂಗಳೊಂದಕ್ಕೆ ನನಗೆ ನೂರು ರೂಪಾಯಿಗಳ ಜೀವನಾಂಶ ವನ್ನು ನಡೆಯಿಸಿಕೊಂಡುಬರುವುದಾಗಿಯೂ ನೀನು ನನಗೆ ಮಾತಕೊಟ್ಟಿರುವೆ. ಅದಕ್ಕಾಗಿ ನೀನು ಹೇಳಿದುದೆಲ್ಲವನ್ನೂ ನಾನು ಮಾಡಿದೆನು. ಈಗಣ ಫಲಿತಾಂಶ ವೇನೆಂದರೆ—ಈಗ ನಿನಗೆ ಎಲ್ಲವೂ ಹೋಗಿ ಮರಣಶಾಸನದ ಪ್ರಕಾರವಾಗಿ ಹತ್ತು ಸಾವಿರ ರೂಪಾಯಿಗಳು ಮಟ್ಟಿಗೆ ನಿನ್ನ ಪಾಲಿಗೆ ಬಂದಿರುವುದಾಗಿ ತಿಳಿದು ಬಂದಿದೆ.''

ಮಧು—ನಿನಗೆ ಇದೆಲ್ಲವೂ ಗೊತ್ತಾದ ಬಗೆ ಹೇಗೆ? ದೇವದುರ್ಗದಲ್ಲಿ ಮರಣಶಾಸನದ ಪತನ ಕಾಲದಲ್ಲಿ ಉಂಟಾದ ಗಲಭೆಯನ್ನು ನೀನು ಕೇಳಿದೆಯಾ?

ಚಂದ್ರ—ಅದಿನ್ನೂ ಕಿವಿಗೆ ಬಿದ್ದಿಲ್ಲ. ಇಷ್ಟರಲ್ಲಿಯೇ ಅದೂ ಗೊತ್ತಾ ಗುವುದು.

ಮಧು—ಈಗ ನಾವಿಬ್ಬರೂ ಒಂದೇ ಅಭಿಪ್ರಾಯದಿಂದ ಕೆಲಸ ಮಾಡ ಬೇಕೆಂದಿರುವಾಗ, ನಾನು ನಡೆದುದೆಲ್ಲವನ್ನೂ ನಿನಗೆ ತಿಳಿಸಬೇಕಾದುದು ಯುಕ್ತ ವಾಗಿರುವುದು. ನಾನಾದರೋ ಮೂರ್ಖತನದ ಹುಚ್ಚನಾದುದರಿಂದ ಆ ಸಂಪ ತ್ತೆಲ್ಲವನ್ನೂ ಒಂದೇ ನಿಮಿಷದಲ್ಲಿ ಕಳೆದುಕೊಂಡುಬಿಟ್ಟೆನು. ಕೈಗೆ ಬಂದ ತುತ್ತು ಬಾಯಿಗೆ ಬರದೇ ಹೋದುದನ್ನು ತಿಳಿಸುವೆನು. ಆಸ್ತಿಯೆಲ್ಲವೂ ನನಗೇ ಸೇರ ತಕ್ಕುದೆಂದು ಮರಣಶಾಸನವು ಬರೆಯಲ್ಪಟ್ಟಿದ್ದಿತು. ನಾನು ಆ ಶಾಸನವನ್ನು ಕದ್ದು ನನ್ನ ಅದೃಷ್ಟದೋಷದಿಂದ ಅದನ್ನು ನಾಶಪಡಿಸಿದೆನು.

ಚಂದ್ರ—ನಿಜವಾಗಿಯೂ ಅದನ್ನು ನಾಶಪಡಿಸಿದೆಯಾ?

ಮಧು—ನಿಜವಾಗಿಯೂ ಅದನ್ನು ನಾಶಪಡಿಸಿಬಿಟ್ಟೆನು. ಆಗ ನನ್ನ ಬುದ್ಧಿಯಲ್ಲಿ ಪಿಶಾಚವು ಆವರಿಸಿದ್ದಿತು. ಇತರರಿಗೆಲ್ಲಾ ಭಾಗಗಳು ಕೊಡಬೇಕಾ ಗುವುದಲ್ಲಾ ಎಂಬ ಹೊಟ್ಟೆಯ ಕಿಚ್ಚಿನಿಂದ ಗಿಡದ ಬುಡಕ್ಕೇ ಕೊಡಲಿಯ ಪೆಟ್ಟನ್ನು ಹಾಕಿದೆನು. ಮರಣಶಾಸನವು ಜೀವಿಸಿದ್ದರೆ ಇತರರಿಗೆಲ್ಲಾ ಭಾಗ ಕೊಡಬೇಕಾಗುವುದೆಂದೂ, ಮರಣಶಾಸನವಿಲ್ಲದಿದ್ದರೂ ತಾನೇ ನ್ಯಾಯಶಾಸ್ತ್ರ ಪ್ರಕಾರವಾಗಿ ಉತ್ತರಾಧಿಕಾರಿಯಾಗುವೆನೆಂದೂ ತಿಳಿದು, ಆ ಪತ್ರವನ್ನು ಯಜ್ಞ

ಪುರುಷನ ಬಾಯಲ್ಲಿಟ್ಟುಬಿಟ್ಟೆನು. ನನ್ನ ದುರದೃಷ್ಟಕ್ಕೆ ಸರಿಯಾಗಿ ಮತ್ತೊಂದು ಮರಣಶಾಸನವು ಅದರ ಸ್ಥಾನದಲ್ಲಿ ತಲೆಯೆತ್ತಿಕೊಂಡು ನಿಂತೇ ನಿಂತಿತು. ದೈವ ಬಲವು ದುರ್ಬಲವಾಗಿರುವಾಗ ನನಗೆ ಹತ್ತು ಸಾವಿರ ರೂಪಾಯಿಗಳು ಸಿಕ್ಕಿದುದೇ ದೊಡ್ಡ ವಿಷಯವಾಗಿರುವುದು.

ಚಂದ್ರ—(ನಿಟ್ಟುಸಿರುಬಿಟ್ಟು) ಗೊತ್ತಾಯಿತು.

ಮಧು—(ಗದ್ಗದ ಸ್ವರದಿಂದ) ಈ ದೋಷಕ್ಕಾಗಿ ನನಗೆ ಮರಣವೇ ಪ್ರಾಯಶ್ಚಿತ್ತವು. ನಮ್ಮ ಜನರ ಮುಂಗಡೆಯಲ್ಲಿ ನಾನು ಪ್ರಾಣವನ್ನಿಟ್ಟುಕೊಂಡು ಏನೆಂದು ಬಾಳಲಿ! ಶಿವ ಶಿವ, ನನಗೆ ಈಗಳೇ ಮರಣವು ಸಂಭವಿಸಬಾರದೆ!

ಚಂದ್ರ—ಪ್ರಿಯನೆ! ಮನಸ್ಸಿಗೆ ಧೈರ್ಯವನ್ನು ತೆಗೆದುಕೊಳ್ಳು. ಈ ಬಗೆಯ ವ್ಯಾಕುಲತೆಯಿಂದ ಆವ ಲಾಭವೂ ಇಲ್ಲ. ನಾವು ಬದುಕಿ ಕೆಲಸ ಮಾಡಬೇಕೇ ಹೊರತು ಸತ್ತ ಮೇಲೆ ಏನಿರುವುದು? ಸಾಯಬೇಕೆನ್ನುವುದು ಹೇಡಿಗಳ ಮಾತು. ಮಧುಸೂದನ! ನೀನು ಇಲ್ಲಿಗೆ ಹೊರಟುಬರುವಾಗ ಸ್ವರ್ಣ ಕುಮಾರಿಯನ್ನು ನೋಡಿದ್ದೆಯಾ?

ಮಧು—ನೋಡಿದ್ದೆ.

ಚಂದ್ರ—ಅವಳೊಡನೆ ಮಾತನಾಡಿದೆಯಾ?

ಮಧು—ಮಾತನಾಡಿದೆ.

ಚಂದ್ರ—ಫಲವೇನಾಯಿತು?

ಮಧು—ಪ್ರಾಣಹೋಗುವ ಹಾಗೆ ಒದೆಗಳನ್ನು ತಿಂದುದೇ ಫಲವಾಯಿತು.

ಚಂದ್ರ—ನಿಜವೇ?

ಮಧು—ನಿಜ.

ಚಂದ್ರ—ನಡೆದುದೆಲ್ಲವನ್ನೂ ಸರಿಯಾಗಿ ವಿವರಿಸು.

ಮಧು—ವಿವರಿಸುವೆನು, ಕೇಳು. ನಾನು ಅವಳನ್ನು ಸಂತೋಷಪಡಿಸುವುದಕ್ಕೆ ಹೋಗಿ ರೇಗಿಸಿಬಿಟ್ಟೆನು. ಅವಳೂ ರೇಗಿ ರೇಗಿ ಉರಿದು ಬಿದ್ದಳು, ನಾನೂ ರೇಗಿ ರೇಗಿ ಉರಿದು ಬಿದ್ದೆನು. ಈ ರೇಗಾಟಕ್ಕೆ ಪರಿಣಾಮವೇ ಇರಲಿಲ್ಲವಾದುದರಿಂದ, ನಾನು ಆಕೆಯನ್ನು ಹೊಡೆದು ಮಲಗಿಸಿದೆನು. ಅಷ್ಟು ಹೊತ್ತಿಗೆ

ಸರಿಯಾಗಿ ನನ್ನ ದುರದೃಷ್ಟವೇ ಮೂರ್ತೀಭವಿಸಿ ಬಂದಿತೋ ಎಂಬಂತೆ ಆರೋ ಒಬ್ಬರು ಎಲ್ಲಿಂದಲೋ ಬಂದು ನನ್ನನ್ನು ಒಂದೇ ಪೆಟ್ಟಿಗೆ ಪ್ರಾಣ ಹೋಗುವ ಹಾಗೆ ಒದೆದು ಒದೆದು ನೆಲದ ಮೇಲೆ ಕೆಡಹಿಬಿಟ್ಟರು.

ಚಂದ್ರ—ಅವರಾರಿರಬಹುದು ?

ಮಧು—ಅವರಾರೋ ನನಗೆ ಗೊತ್ತಾಗಲಿಲ್ಲ. ಗೊತ್ತುಮಾಡಿಕೊಳ್ಳುವುದಕ್ಕೂ ವ್ಯವಧಾನವಿರಲಿಲ್ಲ. ಏಟು ಬಿದ್ದೊಡನೆಯೇ ನನಗೆ ಜ್ಞಾನವು ಹೋಗೇಬಿಟ್ಟಿತು. ಮುಂದೇನಾಯಿತೋ ನನಗಾವುದೂ ಗೊತ್ತಾಗಲಿಲ್ಲ. ನನಗೆ ಜ್ಞಾನೋದಯವಾದ ಕಾಲದಲ್ಲಿ ನನ್ನ ಹೊರತಾಗಿ ಮತ್ತಾರೂ ಇರಲಿಲ್ಲ. ಚಂದ್ರವದನೆ! ನನಗೆ ಈಗ ಬುದ್ಧಿ ಶಕ್ತಿಯೆಲ್ಲವೂ ಹಾಳಾಗಿಹೋಗಿದೆ. ನಿನಗೇನಾದರೂ ಬೇರೊಂದುಪಾಯವು ತಿಳಿದಿರುವುದಾದರೆ ನನಗೆ ತಿಳಿಸು.

ಚಂದ್ರ—ಈಗ ನಾನು ಅದನ್ನೇ ಚಿಂತಿಸುತ್ತಿರುವೆನು. ಈಗ ನಿನಗೆ ಹತ್ತು ಸಾವಿರ ರೂಪಾಯಿಗಳು ಬರುವುವು. ನಾನು ಈ ಕೆಲಸವನ್ನು ಕೈಕೊಳ್ಳಬೇಕಾದರೆ ತುಂಬಾ ಹಣ ವ್ಯಯವಾಗಬೇಕಾಗುವುದು.

ಮಧು—ನಾನು ಈ ಹಣವನ್ನು ವ್ಯಯಮಾಡಿ ನ್ಯಾಯಸ್ಥಾನದಲ್ಲಿ ವಿವಾದ ಮಾಡಿದರೆ—

ಚಂದ್ರ—ವಿವಾದ ಮಾಡಿದರೆ, ಕೆಲಸವಾಗುವುದಿಲ್ಲ, ಹೆಸರು ಕಿಡುವುದು, ನ್ಯಾಯಸ್ಥಾನದವರೂ ವಕೀಲರೂ ನಿನ್ನ ಹಣವೆಲ್ಲವನ್ನೂ ಕಿತ್ತುಕೊಂಡು ಬಿಕಾರಿಯನ್ನಾಗಿ ಮಾಡಿಬಿಡುವರು.

ಮಧು—ಹಾಗಾದರೆ ನೀನೇನ ಹೇಳುವೆ?

ಚಂದ್ರ—ಆವ ಕೆಲಸ ಮಾಡಬೇಕಾದರೂ ಹಣವು ಬೇಕು. ನನ್ನ ಪ್ರಯತ್ನದಿಂದ ನಿನ್ನ ಹಣವೆಲ್ಲವೂ ವೆಚ್ಚವಾಗುವುದಾದರೂ, ಮುಂದೆ ನಿನಗೆ ಕಾರ್ಯಸಿದ್ಧಿಯಾಗಿಯೇ ಆಗುವುದು. ಇದರಲ್ಲಿ ಕೊಂಚವಾದರೂ ಸಂಶಯವಿಲ್ಲ.

ಮಧು—ಇದಕ್ಕಾಗಿ ನಾನು ಮಾಡಬೇಕಾದುದೇನು ?

ಚಂದ್ರ—ವಿದ್ಯಾನಗರದಲ್ಲಿ ನಿನ್ನ ವ್ಯಾಪಾರದ ಅಂಗಡಿ ಇರುವುದು ಸರಿಯಷ್ಟೇ? ಈಗ ಅಲ್ಲಿಗೆ ಹೋಗಿ ಮತ್ತೆ ವ್ಯಾಪಾರ ಮಾಡಬಲ್ಲೆಯಾ ?

ಮಧು—ನನಗೆ ವ್ಯಾಪಾರಮಾಡುವುದು ತಿಳಿಯದು; ಮಾಡುವುದಕ್ಕೂ ಇಷ್ಟವಿಲ್ಲ. ಮುದುಕನ ಕಣ್ಣಿಗೆ ಮಣ್ಣೆರಚುವುದಕ್ಕಾಗಿ ನಾನು ವ್ಯಾಪಾರದ ಹೂಟವನ್ನು ಹೂಡಿದ್ದುದು.

ಚಂದ್ರ—ಹಾಗಾದರೆ ಅಲ್ಲಿರತಕ್ಕುದೆಲ್ಲವನ್ನೂ ಮಾರಿ ಕೈಯಲ್ಲಿ ಹಣ ಕಾಸುಗಳನ್ನು ಮಾಡಿಟ್ಟುಕೊಳ್ಳು. ನಮ್ಮ ಕೆಲಸಕ್ಕೆ ಹಣದ ಅಡಚಣೆ ಅವಾಗಲೂ ಇರಕೂಡದು. ನಾವು ಹತ್ತು ಹದಿನೈದು ಸಾವಿರ ರೂಪಾಯಿಗಳನ್ನು ವೆಚ್ಚ ಮಾಡುವುದರೊಳಗಾಗಿ ದೇವ ದುರ್ಗದ ಸಂಪತ್ತೆಲ್ಲವನ್ನೂ ಸವರಿಸಿಬಿಡಬಹುದು. ಬಳಿಕ ನಾವು ಸಾಯುವ ವರೆಗೂ ನಿರಾತಂಕವಾಗಿ ಜೀವನ ಮಾಡಿಕೊಂಡು ಸುಖದಿಂದಿರಬಹುದು.

ಮಧು—ನಾನು ಅಂಗಡಿಯನ್ನು ಇಷ್ಟರಲ್ಲಿಯೇ ಮಾರಿ ಹಣ ಮಾಡಿಟ್ಟುಕೊಳ್ಳುವೆನು.

ಚಂದ್ರ—ಹಾಗಾದರೆ ಸರಿ. ಚೌಧುರಿ ಮಹಾಶಯನನ್ನು ನೀನು ಚೆನ್ನಾಗಿಯೂ ಬಲ್ಲೆಯಷ್ಟೇ! ಅವನು ಎಂತಹ ಮನುಷ್ಯನು? ಸ್ವರ್ಣಕುಮಾರಿಯ ಸ್ವಭಾವವೆಂಥದು? ಕೊಂಚ ತಿಳಿಸು, ನೋಡೋಣ.

ಮಧು—ಚೌಧುರಿಯು ನಿರೀಹನಾದ ದೇವತಾ ಮನುಷ್ಯನು. ಅವನಿಗೆ ಪ್ರಪಂಚಜ್ಞಾನವಿಲ್ಲ. ಅದು ಕಾರಣ ಅವನು ಎಲ್ಲವನ್ನೂ ನಂಬತಕ್ಕ ಸ್ವಭಾವದವನು. ಅವನ ಮಗಳಾದ ಸ್ವರ್ಣಕುಮಾರಿಯೂ ಹಾಗೆಯೇ. ಮುದುಕನು ತನ್ನ ಆಸ್ತಿಯಲ್ಲಿ ನನಗೆ ಕೊಂಚ ಕೊಡುವುದಕ್ಕೂ ಇಷ್ಟಪಟ್ಟಿರಲಿಲ್ಲ. ಇವರಿಬ್ಬರ ಬಲಾತ್ಕಾರದಿಂದಲೇ ಎರಡನೆಯ ಮರಣಶಾಸನವು ಹುಟ್ಟಿದುದು. ನನ್ನ ಅತ್ಯಾಚಾರದಿಂದ ಅದು ಹುಟ್ಟಿದೊಡನೆಯೇ ಸತ್ತೂ ಹೋಯಿತು.

ಚಂದ್ರ—ಸ್ವರ್ಣ ಕುಮಾರಿಗೆ ದುರ್ಭಾವನೆಗಳೇನಾದರೂ ಉಂಟೋ?

ಮಧು—ರಾಮ ರಾಮ! ಅಂತಹ ಸುದ್ದಿಯೇ ಅವಳ ಹತ್ತಿರ ಬರಕೂಡದು. ಅಂಥದೇನಾದರೂ ಇದ್ದಿದ್ದರೆ ಕಾರ್ಯಸಾಧನೆಗೆ ಇಷ್ಟು ದಿನಗಳು ಬೇಕಾಗಿದ್ದಿತೇ!

ಚಂದ್ರ—ಸ್ವರ್ಣಕುಮಾರಿಯು ನಿನ್ನನ್ನು ಪ್ರೀತಿಸುತ್ತಿದ್ದಳೆಂದು ಹೇಳಿದ್ದೆಯಲ್ಲಾ, ಅದು ನಿಜವೇ?

ಮಧು—ಅದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ.

ಚಂದ್ರ—ಹಾಗಾದರೆ ನಿನ್ನ ಇಂದಿನ ಪ್ರಯತ್ನವೇನಾಯಿತು?

ಮಧು—ನಾನೇನ ಮಾಡಲಿ?

ಚಂದ್ರ—ನಾನೇನ ಮಾಡಲಿ, ನಾನೇನ ಮಾಡಲಿ, ಎಂದು ತಲೆಯ ಮೇಲೆ ಕೈಗಳನ್ನಿಟ್ಟು ಕುಳಿತರೆ ಕೆಲಸವಾದೀತೇ? ನೀನು ಕೆಲಸಮಾಡುವುದಕ್ಕೆ ಸುಗ್ಗುವೆಯಾದರೂ ಅದರ ಫಲಕಾಲದಲ್ಲಿ ಕುಲಗೆಡಿಸಿಬಿಡುವೆ. ನಿನ್ನ ಬುದ್ಧಿಯು ಸಮಯದಲ್ಲಿ ಮಣ್ಣು ತಿಂದು ಹೋಗುವುದು. ನಾನು ನನ್ನ ಹೊಸ ಉಪಾಯವನ್ನು ನಿನಗೆ ತಿಳಿಸುವುದಾದರೆ, ಅದನ್ನೂ ನೀನು ಕಿಡಿಸಿಬಿಟ್ಟು "ತಾನು ಕಿಡುವ ಕೋತಿ ವನವನ್ನೆಲ್ಲಾ ಕಿಡಿಸಿತು" ಎನ್ನುವ ಗಾದೆಗೆ ಸರಿಯಾಗಿ ಮಾಡಿದಲ್ಲಿ, ನನ್ನ ಪರಿಣಾಮವೇನು? ಉಪಾಯವನ್ನು ತಿಳಿಸಿ ಕೆಲಸವನ್ನು ನಿನ್ನ ಕೈಲಿ ಮಾಡಿಸುವುದಕ್ಕಿಂತಲೂ ನಾನೇ ಮಾಡುವುದು ಉತ್ತಮ. ಆದುದರಿಂದ ನನ್ನ ಉಪಾಯದ ಮರ್ಮವನ್ನು ಪ್ರಕೃತದಲ್ಲಿ ನಿನಗೆ ತಿಳಿಸಲಾರೆನು. ಕಾಲಕ್ರಮದಲ್ಲಿ ಎಲ್ಲವೂ ನಿನಗೆ ತಾನಾಗಿಯೇ ಗೊತ್ತಾಗುವುದು. ನನ್ನ ಕೆಲಸಕ್ಕೆ ಸದ್ಯದ ಸ್ಥಿತಿಯಲ್ಲಿ ಐದು ಸಾವಿರವಾದರೂ ಕೈಯಲ್ಲಿರಬೇಕಾಗುವುದು. ನೀನು ಬೇಗನೆ ಹೋಗಿ ಅಂಗಡಿಯನ್ನು ಮಾರಿಬಿಟ್ಟು ಹಣವನ್ನು ಹವಣಿಸು.

ಮಧು—ಏನು! ಐದು—ಸಾವಿರ-ರೂ-ಪಾ-ಯಿ-ಗಳು! ಇಷ್ಟೊಂದು ಹಣಬೇಕಾಗುವುದೇ, ಚಂದ್ರ?

ಚಂದ್ರ—ಭಿಕಾರಿ! ಭಿಕಾರಿ! ನಿನ್ನ ಹಣ ನನಗೇನೂ ಬೇಕಿಲ್ಲ. ನಿನ್ನ ಕೆಲಸವನ್ನು ನೀನೇ ನೋಡಿಕೊಳ್ಳು. ನನ್ನದನ್ನು ನಾನು ನೋಡಿಕೊಳ್ಳುವೆನು. ನಿನಗೆ ಕೆಲಸವಾಗಬೇಕು, ಹಣದಲ್ಲಿ ಒಂದು ಕಾಸೂ ವೆಚ್ಚವಾಗಬಾರದು.

ಮಧು—ನನಗೆ ನಿನ್ನ ಕೆಲಸವೇನೆಂಬುದೇ ಗೊತ್ತಿಲ್ಲ. ಮೊದಲೇ ಹಣ, ಹಣ, ಎಂದು ಬಾಯ ಬಿಡುವೆಯಲ್ಲ! ಇದಾವ ನ್ಯಾಯ? ಮೊದಲು ನಿನ್ನ ಉಪಾಯವೇನೆಂಬುದನ್ನಾದರೂ ತಿಳಿಸು, ನೋಡೋಣ.

ಚಂದ್ರ—ನಾನು ಹೇಳಿದುದೆಲ್ಲವೂ ವಿನೋದಕ್ಕಾಗಿಯೇ. ಹೆಣ್ಣು ಹೆಂಗುಸಿಗೆ ಉಪಾಯವೇನು ಗೊತ್ತು, ಅಪಾಯವೇನು ಗೊತ್ತು! ನಿನ್ನ ಹಣಕ್ಕಾಗಿ ನಾನು ಬಾಯ ಬಿಟ್ಟುಕೊಂಡಿಲ್ಲ. ಮೊದಲೇ ಹೀಗಾದ ಮೇಲೆ ನಮ್ಮ ಕೆಲಸವು ನೆರವೇರಿದಂತೆಯೇ ಸರಿ. ಇದಕ್ಕಾಗಿಯೇ ನಾನು ನಿನಗೇನೂ ತಿಳಿಸುವುದಿಲ್ಲವೆಂದು ಹಿಂದೆಯೇ ಹೇಳಿದುದು. ನನ್ನ ಇಷ್ಟದಂತೆ ಮೋಸದ ಬಲೆಯನ್ನು ಬೀರಿ ಕೆಲಸಮಾಡಬೇಕಾದರೆ ಒಂದೆರಡು ವರ್ಷಗಳಾಗಬಹುದು. ಸಮಯಾ

ಸಮಯಗಳಲ್ಲಿ ಅನೇಕರಿಗೆ ಕೈಬೆಚ್ಚಗೆ ಮಾಡಬೇಕಾಗುವುದು. ಅದುಕಾರಣ ನಾನು ಹಣವಿಟ್ಟುಕೊಳ್ಳದೆ ಆವ ಕೆಲಸಕ್ಕೂ ಕೈಹಚ್ಚುವುದಿಲ್ಲ. ನಿನ್ನ ಹಾಗೆ ಕೆಲಸಮಾಡಿ ನಾನೆಂದಿಗೂ ಹುಚ್ಚುಮುಂಡೆಯಾಗಲಾರೆನು. ನಾನು ಕೇಳುವಷ್ಟು ಹಣವನ್ನು ಒದಗಿಸುವ ಧೈರ್ಯವು ನಿನಗಿದ್ದರೆ, ನಾನೇ ಮುಂದು ನಿಂತು ಮಾಯಾಜಾಲವನ್ನು ಬಿತ್ತರಿಸುವೆನು ; ಇಲ್ಲವಾದರೆ ನಿನ್ನ ದಾರಿ ನಿನ್ನದು, ನನ್ನ ದಾರಿ ನನ್ನದು. ನಾನು ಎಲ್ಲಿಯಾದರೂ ಹೊರಟು ಹೋಗುವೆನು. ನನಗೆ ಕೊಡ ಬೇಕಾದುದನ್ನು ಕೊಟ್ಟುಬಿಡು. ನೀನು ಮಾತಿಗೆ ತಪ್ಪುವುದಾದರೆ, ನಾನು ಸುಮ್ಮನೆ ಬಿಡತಕ್ಕವಳಲ್ಲ. ನನ್ನ ಸ್ವಭಾವ ನಿನಗಿನ್ನೂ ತಿಳಿಯದು.

ಮಧು—ಚಂದ್ರವದನೆ! ಮತ್ತೊಂದು ವಿಷಯವನ್ನು ಹೇಳುವುದಕ್ಕೆ ಮರೆತಿದ್ದೆನು. ರಾಯನ ಮರಣಶಾಸನದ ಕಟ್ಟಳೆಯ ಪ್ರಕಾರವಾಗಿ ಸ್ವರ್ಣ ಕುಮಾರಿಗೆ ಇನ್ನೆರಡು ವರ್ಷಗಳ ವರೆಗೂ ವಿವಾಹವಾಗುವಂತಿಲ್ಲ.

ಚಂದ್ರ—ನಾನು ಇದೆಲ್ಲವನ್ನೂ ತಿಳಿದು ಎರಡು ವರ್ಷಗಳ ಕಾಲವನ್ನು ಅವಧಿಯಾಗಿಟ್ಟಿರುವುದು. ನಿನ್ನ ಹಾಗೆ ನಾನು ಹಿಂದೆ ಮುಂದೆ ನೋಡದೆ ಕೆಲಸ ಮಾಡತಕ್ಕವಳಲ್ಲ.

ಮಧುಸೂದನನು ಬಲು ಹೊತ್ತು ಚಂದ್ರವದನೆಯ ಮುಖವನ್ನೇ ನೋಡು ತ್ತಾ ಇದ್ದನು. ಆಗ ಅವನ ಮನದಲ್ಲಿ 'ಈಕೆಯು ಹೇಳುವುದೆಲ್ಲವೂ ನಿಜವಿರ ಬಹುದೇ? ಈಕೆಯನ್ನು ನಾನು ನಂಬಿ ಕೆಲಸಕ್ಕೆ ಕೈಹಚ್ಚುವುದು ಸರಿಯಾದುದೇ? ನನ್ನಲ್ಲಿರುವ ಹಣವೆಲ್ಲವನ್ನೂ ಕಸರಿಕೊಂಡು ಹೊರಟುಹೋಗುವುದಕ್ಕೆ, ಈಕೆಯು ಹೂಡಿದ ಹೂಟವೇ ಇದು?' ಎಂಬ ಭಾವವು ತಲೆದೋರಿತು.

ಚಂದ್ರವದನೆಯು ಮಧುಸೂದನನ ಭಾವಭಂಗಿಯನ್ನು ನೋಡಿ, "ಮಧು ಮಹಾಶಯ! ಹಣದ ಸುದ್ದಿಯೆತ್ತಿದರೆ ಹೀಗೆಲ್ಲಾ ಆಗುವುದುಂಟು. ಹಣ ಕೊಟ್ಟರೆ ಹೇಗೋ ಎಂಬ ಸಂಶಯವು ನಿನಗುಂಟಾದಂತಿದೆ. ನನಗೆ ಬರಬೇಕಾ ದುದು ನನ್ನದೇ ಹೊರತು, ನಿನ್ನ ಹಣದಿಂದ ನನಗಾಗುವುದೇನು? ನಿನ್ನ ಇಷ್ಟ ವನ್ನಾದರೂ ತಿಳಿಸಿಬಿಡು. ನನ್ನ ಕೆಲಸವನ್ನಾದರೂ ಮಾಡಿಕೊಳ್ಳುವೆನು. ನಿನಗೆ ಒಳ್ಳಿಯದಾಗಲೆಂದೂ, ನಿನ್ನ ದುರವಸ್ಥೆಯು ದೂರವಾಗಲೆಂದೂ, ಹೂವಿನಿಂದ ನಾರು ಸ್ವರ್ಗಕ್ಕೆ ಎನ್ನುವಂತೆ ನನಗೂ ನಿನ್ನಿಂದ ಸುಖವುಂಟಾಗಲೆಂದೂ ಬಯಸಿ ಹೇಳುವ ಮಾತು ನಿನಗೆ ವಿಷವಾಗಿ ಕಾಣುವುದಲ್ಲವೇ? ಈ ಕಷ್ಟಕಾಲದಲ್ಲಿ ನನ ಗಿಂತಲೂ ಹಿತಚಿಂತಕರು ನಿನಗೆ ಮತ್ತಾರಿರುವರು? ನಿನಗೆ ಶನಿಕಾಟವಿನ್ನೂ ಕಳೆದಿಲ್ಲ. ಅದಕ್ಕಾಗಿಯೇ ನೀನು ಮೇಲೆ ಕೆಳಗೆ ನೋಡುತ್ತಿರುವೆ. ನಿನ್ನ

ಹಣೆಯ ಬರೆಹವನ್ನು ತಪ್ಪಿಸಬಲ್ಲವರಾರು? ಅದೃಷ್ಟವಿಲ್ಲದಿರುವಾಗ ಅಮೃತವೂ ವಿಷವಾಗುವುದುಂಟು. ಹೀಗಿರುವುದರಿಂದ ಇದು ನಿನ್ನ ತಪ್ಪಲ್ಲ. (ಕಂಬನಿ ಗರೆಯುತ್ತಾ) ನಾನು ಹಿಂದೆ ನಿನಗಾಗಿ ಎಷ್ಟೋ ಕಷ್ಟಗಳನ್ನು ಅನುಭವಿಸಿದೆನು, ಈಗಲೂ ಅನುಭವಿಸುತ್ತಿರುವೆನು. ಪ್ರಿಯನಿಗಾಗಿ ತತ್ತರಗುಟ್ಟುವ ಹೆಂಗುಸಿನ ಸಂಕಟವನ್ನು ಅರಿಯಬಲ್ಲವರಾರು? ಹೇನಾಥ, ಮಧುಸೂದನ! ನಿನ್ನನ್ನೇ ನಂಬಿ ರುವ ನನ್ನಲ್ಲಿ ನಿನಗೆ ಈರೀತಿಯಾಗಿ ಅವಿಶ್ವಾಸ ಹುಟ್ಟಿತಲ್ಲವೇ! ಹಾ ದೇವ! ಗಂಡನೇ ಸಂಶಯಪಡುವುದಾದರೆ, ಪತಿಪರಾಯಣೆಯಾದ ನನಗೆ ಮುಂದೇನು ಗತಿ? ನಾನು ಆರಿಗಾಗಿ ಜೀವಿಸಿರಬೇಕು? ಮೃತ್ಯುದೇವತೆ! ಈಗಳೇ ನೀನು ದರ್ಶನವನ್ನು ಕೊಟ್ಟು ಈ ಪಾಮರಿಯಾದ ನನ್ನ ಸುಟ್ಟ ದೇಹವನ್ನು ನಿನ್ನ ಬಳಿಗೆ ಕೊಂಡೊಯ್ಯುವುದಾದರೆ ನಾನೇ ಧನ್ಯೆ.

ಮಧು—ಚಂದ್ರವದನೆ! ಅಳಬೇಡ. ಅಳಬೇಡ. ನಿನ್ನಲ್ಲಿ ನನಗೆ ಕಿಂಚಿತ್ತಾದರೂ ಸಂಶಯವಿಲ್ಲ. ನಾನು ನಿನ್ನ ಪ್ರೇಮಕ್ಕೆ ಅಕ್ರೀತದಾಸನಾಗಿ ರುವೆನು. ನನ್ನ ವಿಷಯದಲ್ಲಿ ನೀನು ಸಂಶಯ ಪಡಲಾಗದು. ನಾವಿಬ್ಬರೂ ಒಂದಾಗಿರುವಾಗ, ಮಾತು ಬಂದರೂ ಮಾತು ಹೋದರೂ, ಆರೊಬ್ಬರೂ ಭೇದ ವನ್ನು ಎಣಿಸಲಾಗದು. ನಿನ್ನ ಉಪಾಯವೇನೆಂದು ನಾನು ಕೇಳಿದೊಡನೆಯೇ, ನೀನು ಇಷ್ಟು ಮಾತನಾಡಬಹುದೇ? ನಿನ್ನಿಂದ ಕಾರ್ಯಸಾಧನೆಯಾಗುವುದೆಂದು ತಿಳಿದಿದ್ದುದರಿಂದ, ನಿನ್ನ ಉಪಾಯವನ್ನು ಕೇಳಿ ನನ್ನ ಈ ದುರವಸ್ಥೆಯಲ್ಲಿ ಕೊಂಚಮಟ್ಟಿಗಾದರೂ ಸಂತೋಷಪಟ್ಟುಕೊಳ್ಳಬೇಕೆಂದು ಹಾಗೆ ಪ್ರಶ್ನೆ ಹಾಕಿ ದೆನೇ ಹೊರತು ಬೇರೊಂದು ಉದ್ದೇಶದಿಂದಲ್ಲ. ನೀನು ಅದೆಲ್ಲವನ್ನೂ ಮನದ ಲ್ಲಿಟ್ಟು ಕೊರಗುವುದಾಗಲಿ, ನನ್ನನ್ನು ನಿಂದಿಸುವುದಾಗಲಿ ಮಾಡಬೇಡ. ನೀನು ಸಂಕಟಪಟ್ಟುಕೊಂಡರೆ ನನ್ನ ಪ್ರಾಣವೇ ಹಾರಿಹೋದಂತಾಗುವುದು. ಚಂದ್ರ ವದನೆ! ನನ್ನ ದುಃಖಾಗ್ನಿಗೆ ನೀನು ವರ್ಷಾಕಾಲಸ್ವರೂಪಿಣಿ. ನನ್ನ ಕಾರ್ಯ ಸಾಧನೆಗೆ ನೀನು ಸರ್ವಾನುಕೂಲ ನವಗ್ರಹದೇವತಾ ಮೂರ್ತಿ. ನನ್ನ ಸುಖ ಜೀವನಕ್ಕೆ ನೀನು ಭೂಲೋಕದಲ್ಲಿ ಅವತರಿಸಿ ಬಂದಿರುವ ಸ್ವರ್ಗಸಾಮ್ರಾಜ್ಯದ ಅಮೃತ ಕಲಶವೇ ಆಗಿರುವೆ. ಇನ್ನು ಮೇಲೆ ನಿನ್ನ ಕೆಲಸವೇನೆಂದು ಕೇಳುವು ದಿಲ್ಲ, ನಿನ್ನ ಕೆಲಸಕ್ಕೆ ಅಡ್ಡಿಯಾಗಿಯೂ ಬರುವುದಿಲ್ಲ. ನನ್ನ ಸರ್ವಸ್ವವೆಲ್ಲವನ್ನೂ ನಿನ್ನ ಪಾದಮೂಲದಲ್ಲಿ ಸಮರ್ಪಿಸುವೆನು. ನೀನು ಹೇಗಾದರೂ ಮಾಡಿ ಕಾರ್ಯ ವನ್ನು ಸಾಧಿಸಿಕೊಡು.

ಚಂದ್ರ—ಬುದ್ಧಿಮಂತನಾದವನು ಹೀಗೆ ಮಾತನಾಡಬೇಕು, ಪ್ರೀತಿಗೆ ಪಾತ್ರವಾದವರನ್ನು ನಂಬಿ ಕೆಲಸ ಮಾಡಬೇಕು. ಬಳಿಕ ಸಾವಧಾನವಾಗಿ

ಕಾರ್ಯದ ಫಲಾಫಲಗಳನ್ನು ನಿರೀಕ್ಷಿಸುತ್ತಿರಬೇಕು. ಮಧುಸೂದನ! ಇಷ್ಟು ವರ್ಷಗಳಿಗೆ ಇಂದಾದರೂ ನಿನ್ನ ಪಾದದಾಸಿಯನ್ನು ನಂಬಿದೆಯಲ್ಲಾ, ಇದೇ ನನ್ನ ಭಾಗ್ಯೋದಯವು. ಇಂತಹ ಸುಯೋಗವನ್ನು ನಾನು ಕಂಡುದು ನನ್ನ ಜನ್ಮದಲ್ಲಿ ಇದೇ ಮೊದಲು. ಈ ದಿನವೇ ಸುದಿನವು. ಪ್ರಾಣನಾಥ! ನದಿಯ ದಡದಲ್ಲಿ ನಿನ್ನ ದೋಣಿಯು ಸಿದ್ಧವಾಗಿರುವುದು. ನೀನು ತಡಮಾಡದೆ ಈಗಳೇ ವಿದ್ಯಾನಗರಕ್ಕೆ ಹೊರಟು ಅಲ್ಲಿನ ಕೆಲಸವನ್ನು ಮೊದಲು ನೆರವೇರಿಸಿಕೊಂಡು ಬರುವನಾಗು. ನಾನು ಹಿಂದೆ ಇದ್ದಹಾಗೆ ಈಗಳೂ ಹೆಸರನ್ನು ಮಾರ್ಪಡಿಸಿ ಕೊಂಡೇ ಕಾಲ ಕಳೆವೆನು. ಹೊರಡು, ಹೊತ್ತಾಯಿತು.

ಚಂದ್ರವದನೆಯು ಹೀಗೆ ಹೇಳಿ ಸುಮ್ಮನೆ ನಿಂತುಕೊಂಡಳು. ಮಧುಸೂದನನ ತಲೆಯ ಮೇಲೆ ಅಮೃತದ ಮಳೆಗರದಂತಾಯಿತು. ಮಾಡಿದ ಕೆಲಸಗಳೆಲ್ಲವೂ ಹಾಳಾಗಿ ಎದೆಗೆಟ್ಟು ಯುಕ್ತಾಯುಕ್ತ ಪರಿಜ್ಞಾನ ಶೂನ್ಯನಾದವನಿಗೆ ಆರಾದರೂ ಒಳ್ಳೆಯ ಮಾತನ್ನು ಹೇಳಿದೊಡನೆಯೇ ನರಕದಲ್ಲಿ ಸ್ವರ್ಗಸುಖ ವೇರ್ಪಡಿಸಿಕೊಟ್ಟಂತಾಗುವುದು. ಆರು ಏನ ಹೇಳಿದರೂ ಅದೆಲ್ಲವೂ ನಿಜ ವೆಂದೇ ನಂಬುವುದು, ವಿವೇಕವು ವಿಲೋಪಗೊಂಡವನ ಸ್ವಭಾವವೇ ಆಗಿರುವುದು. ಮಧುಸೂದನನ ವಿವೇಚನೆಯ ಜ್ಞಾನವು ಹೋಗಿದ್ದುದರಿಂದ, ಅವನಿಗೆ ಚಂದ್ರ ವದನೆಯ ಮೃದುಮಧುರೋಕ್ತಿಯಲ್ಲಿ ಪೂರ್ಣವಿಶ್ವಾಸವೇರ್ಪಟ್ಟಿತು. ಈ ವಿಶ್ವಾಸದ ಬಲದಿಂದ ಮಧುಸೂದನನು ಮೆಯ್ಯುಬ್ಬಿದವನಾಗಿ ಕೊಡಬೇಕಾಗಿದ್ದ ಬಾಡಿಗೆಯನ್ನು ಸಲ್ಲಿಸಿ ಅಂಗಡಿಯನ್ನು ಬಿಟ್ಟುಕೊಟ್ಟು ವಿದ್ಯಾನಗರವನ್ನು ಕುರಿತು ತೆರಳುವುದಕ್ಕಾಗಿ ದೋಣಿಯನ್ನೇರಿದನು. ಚಂದ್ರವದನೆಯೂ ತಾನಿದ್ದ ಗ್ರಾಮ ವನ್ನು ಕುರಿತು ತೆರಳಿದಳು.

---

## ಇಷ್ಪತ್ತನೆಯ ವಿಲಾಸ

### ಪದ್ಮಾವತೀ ಬಾಯಿ

ರಾಯ ಮಹಾಶಯನ ಮರಣಶಾಸನದ ಮರ್ಮಾನುಸಾರವಾಗಿ ಸ್ವರ್ಣ ಕುಮಾರೀದೇವಿಯು ದೇವದುರ್ಗವಲ್ಲಿಯೇ ವಾಸಮಾಡತೊಡಗಿದಳು. ಚೌಧುರಿ ಮಹಾಶಯನೂ ಮಗಳ ಯೋಗಕ್ಷೇಮದ ವಿಚಾರಣೆಗಾಗಿ ಅಲ್ಲಿಯೇ ನಿಲ್ಲಬೇಕಾಯಿತು. ಆದುದರಿಂದ ಆತನು ತನ್ನ ಕೆಲಸವನ್ನು ನೋಡಿಕೊಳ್ಳುವುದಕ್ಕಾಗಿ ಒಬ್ಬ ಕಾರ್ಯಪ್ರತಿನಿಧಿಯನ್ನು ಏರ್ಪಡಿಸಿ ಆತನು ಸರಕಾರವಾಡಿಯಲ್ಲಿಯೇ ವಾಸವಾಗಿರತಕ್ಕುದೆಂದು ನಿರ್ಣಯಿಸಿದನು. ಚೌಧುರಿಯು ಆಗಿಂದಾಗ ತನ್ನ

ಗ್ರಾಮಕ್ಕೆ ಹೋಗಿ ಬರುವನು; ಆತನ ಅಭಿಮಾನವೆಲ್ಲವೂ ದೇವದುರ್ಗದ ಸಂಪತ್ತಿನ ಮೇಲೆ ತಿರುಗಿದ್ದಿತು. ಚೌಧುರಿ ಮಹಾಶಯನು ಉತ್ಸವಾದಿಗಳನ್ನು ತನ್ನ ಗ್ರಾಮದಲ್ಲಿ ಸಾಮಾನ್ಯವಾಗಿ ನಡೆಯಿಸಿ ದೇವದುರ್ಗದಲ್ಲಿ ಮಹಾ ಸಮಾರಂಭದೊಡನೆ ನಡೆಯುವಂತೆ ಏರ್ಪಡಿಸಿದನು ಚೌಧುರಿಯ ಪ್ರಯತ್ನವಿಶೇಷದಿಂದ ದೇವದುರ್ಗದ ಕೆಲಸಗಳೆಲ್ಲವೂ ಒಮ್ಮೊಗವಾಗಿ ನಡೆಯಲಾರಂಭಿಸಿದುವು.

ಸ್ವರ್ಣಕುಮಾರಿಯು ದೇವದುರ್ಗದ ದೊಡ್ಡ ಜಹಗೀರುದಾರಳಾದಳು. ಈಕೆಯನ್ನು ಅನೇಕರು ಕುಮಾರಿ ಚೌಧುರಾಣಿ ಎಂದು ಕರೆವರು. ಅರಮನೆಯ ದಾಸದಾಸಿಯರೆಲ್ಲರೂ ತಮ್ಮ ಯಜಮಾನಮ್ಮನವರನ್ನು ರಾಣಿಯವರೆಂದು ಕರೆಯಲಾರಂಭಿಸಿದರು. ಸ್ವರ್ಣಕುಮಾರಿಯು ರಾಣಿಯಾಗುವುದಕ್ಕೆ ಮೊದಲು ಜನರು ವಯಸ್ಸಾದ ಹುಡುಗಿಗೆ ಮದುವೆ ಮಾಡಲಿಲ್ಲವೆಂದು ಚೌಧುರಿಗೆ ಬಹಿಷ್ಕಾರ ಹಾಕಿದ್ದರು. ಆಗ ಅವನ ಮನೆಯಲ್ಲಿ ನಡೆಯುತಿದ್ದ ಆವ ಹವ್ಯಕವ್ಯಗಳಿಗೂ ಜನರು ಹೋಗುತ್ತಿರಲಿಲ್ಲ. ಆಗ ಆರ ಬಾಯಲ್ಲಿ ನೋಡಿದರೂ ಚೌಧುರಿಯ ವಿಷಯ, ಇಲ್ಲವೆ ಸ್ವರ್ಣಕುಮಾರಿಯ ವಿಷಯ; ಇವೆರಡು ವಿಷಯ ಹೊರತಾಗಿ ಜನರು ಮತ್ತಾವ ಮಾತನ್ನೂ ಆಡುತ್ತಿರಲಿಲ್ಲ. ಈಗ ಆ ಭಾವಗತಿಗಳೆಲ್ಲವೂ ಮಾರ್ಪಟ್ಟು ಹೋಗಿದ್ದುವು. ಮೊತ್ತಮೊದಲು ಚೌಧುರಿಯನ್ನು ದೂಷಿಸುವುದಕ್ಕೆ ಮುಂದಾಳಾಗಿ ಬಂದಿದ್ದವರೆಲ್ಲರೂ ಆತನನ್ನು ಭೂಷಿಸುವುದರಲ್ಲಿಯೂ ಮುಂದಾಳಾಗಿ ನಿಂತರು. ಈಗ ಆತನು ಜನರನ್ನು ಊಟಕ್ಕೆ ಕರೆಯುವುದೇ ಅಡ್ಡಿ; ಕರೆದ ಕೂಡಲೆ ಎಲ್ಲರೂ ನಾನು ಮೊದಲು ತಾನು ಮೊದಲು ಎಂದು ಭೋಜನಕ್ಕೆ ಕೂಡುವರು. ಈಗ ಸಮಾಜದವರು ಹಿಂದಣ ಬಹಿಷ್ಕಾರಕ್ಕೆ ಬಹಿಷ್ಕಾರ ಹಾಕಿಬಿಟ್ಟಿದ್ದರು. ಪಾಠಕಮಹಾಶಯ! ಇದೆಲ್ಲವೂ ಆವುದರ ಮಹಿಮೆ? ನೀವೆಲ್ಲರೂ ಸಮಾಜದವರಾದುದರಿಂದ ಈ ಪ್ರಶ್ನೆಗೆ ಸದುತ್ತರವನ್ನು ನೀವೇ ಕೊಡಬೇಕು. ನಿಮಗೆ ಇಷ್ಟವಿಲ್ಲದಿದ್ದಾಗ, ಹೋಗಕೂಡದೆಂದು ನಿರ್ಬಂಧಪಡಿಸುವವರೂ ನೀವೆ; ಇಷ್ಟಬಂದಾಗ ಹೋಗಬಹುದೆಂದು ನುಡಿಯುವವರೂ ನೀವೆ. ನಿಮಗೆ ಇಷ್ಟವಿರುವುದಾವಾಗ? ಇಷ್ಟವಿಲ್ಲದಿರುವುದಾವಾಗ? ಇದನ್ನಾದರೂ ತಿಳಿಸಬಲ್ಲಿರಾ? ಇಷ್ಟವಿರುವುದಾದರೆ ತಿಳಿಸಿರಿ, ಇಲ್ಲವಾದರೆ ನಿಮ್ಮಿಷ್ಟ. ನಿಮ್ಮಿಷ್ಟಾನಿಷ್ಟಗಳು ಹಣವನ್ನಾಶ್ರಯಿಸಿಕೊಂಡಿರುವುದೆಂದು ನಾವೂ ಬಲ್ಲೆವು. ನೀವು ಬಾಯಬಿಟ್ಟು ಹೇಳದಿದ್ದರೂ ನಮಗೆಲ್ಲವೂ ಗೊತ್ತು. ಹಣಕೊಟ್ಟರೆ ಭೂಷಿಸುವಿರಿ, ಕೊಡದಿದ್ದರೆ ದೂಷಿಸುವಿರಿ; ಇದನ್ನು ಆರು ತಾನೇ ಕಂಡಿಲ್ಲ, ಹಣದ ಬಲದಿಂದ ಕುಲಹೀನರು ಕುಲವಂತರಾಗಿರುವರು; ಹಣವಿಲ್ಲದಿರುವುದರಿಂದ ಕುಲವಂತರು ಕುಲಹೀನರೆಂದು ಕರೆಯಿಸಿಕೊಂಡಿರುವರು. ಇದೆಲ್ಲದಕ್ಕೂ ನೀವಲ್ಲವೇ ಕಾರಣವು? ಕುಲಟೆಯರನ್ನು ಪತಿ

ವ್ರತೆಯರನ್ನಾಗಿ ಮಾಡುವುದೂ, ಪತಿವ್ರತೆಯರನ್ನು ಕುಲಟೆಯರನ್ನಾಗಿ ಮಾಡು ವುದೂ ಆವುದರ ಮಹಿಮೆ ? ಗೊತ್ತಾಯಿತು, ಗೊತ್ತಾಯಿತು ; ಈಗ ಗುಟ್ಟೆ ಲ್ಲವೂ ಗೊತ್ತಾಯಿತು. ಹಣವಿದ್ದರೆ ಎಷ್ಟೇ ದೋಷವಿರಲಿ, ಅದೆಲ್ಲವೂ ಗುಣವೇ ಆಗುವುದು ; ಹಣವಿಲ್ಲದಿದ್ದರೆ ಎಷ್ಟೇ ಗುಣವಿರಲಿ, ಅದೆಲ್ಲವೂ ದೋಷವೇ ಆಗು ವುದು. ಈಗಣ ಕಾಲದಲ್ಲಿ ಗುಣದೋಷಗಳು ಹಣವನ್ನಾಶ್ರಯಿಸಿಕೊಂಡಿರುವುವು, ಎಂದು ನಿರ್ಧರಪಡಿಸಬಹುದು. ಹಿಂದಣ ಕಾಲದಲ್ಲಿ ಮನುವು ಹೇಳಿದುದು :—

“ ವಿತ್ತಂ ಬಂಧು ರ್ವಯಃ ಕರ್ಮ । ವಿದ್ಯಾ ಭವತಿ ಪಂಚಮೀ ॥
ಏತಾನಿ ಮಾನ್ಯ ಸ್ಥಾನಾನಿ । ಗರೀಯೋ ಯದ್ಯದುತ್ತರಂ ॥

ಅರ್ಥವೇನೆಂದರೆ—ಲೋಕದಲ್ಲಿ ‘ ಹಣ, ಬಾಂಧವ್ಯ, ವಯಸ್ಸು, ಕೆಲಸ, ವಿದ್ಯೆ ’ ಎಂಬಿವುಗಳು ಗೌರವವನ್ನು ಸಂಪಾದಿಸಿ ಕೊಡತಕ್ಕುವು. ಇವುಗಳಲ್ಲಿ ಉತ್ತರೋತ್ತರವಾಗಿ ಒಂದಕ್ಕೊಂದು ಶ್ರೇಷ್ಠವು.

‘ ಹಣದ ಗೌರವವು ಅತಿ ತುಚ್ಛವಾದುದೆಂದೂ, ವಿದ್ಯೆಯ ಗೌರವವು ಅತ್ಯು ಚ್ಚವಾದುದೆಂದೂ ಪೂರ್ವಿಕರ ಅಭಿಪ್ರಾಯವು. ಈಗಣ ನವನಾಗರಿಕತೆಯ ಕಾಲದಲ್ಲಿಯಾದರೋ ಗೌರವ ಸ್ಥಾನಗಳು ತಲೆಕೆಳಗಾಗಿ ಹೋಗಿರುವುವು. ಆದುದ ರಿಂದ ವಿದ್ಯೆಗೆ ಗೌರವವಿಲ್ಲ ; ಗೌರವವಿರುವುದು ಹಣವೊಂದಕ್ಕೇ. ಕಲಿಗಾಲದ ಕಾಲಪುರುಷನ ಕಾರ್ಯಕ್ರಮವನ್ನು ಕಂಡವರಾರು !

ಈಗ ಚೌಧುರಿ ಚೌಧುರಾಣಿಯರನ್ನು ಅಕ್ಕಪಕ್ಕದ ಗ್ರಾಮದವರೆಲ್ಲರೂ ಅತಿಶಯವಾಗಿ ಪ್ರೀತಿಸುವರು. ಆಗಿಂದಾಗ ಬಂದು ಯೋಗಕ್ಷೇಮವನ್ನು ವಿಚಾ ರಿಸಿಕೊಳ್ಳುವರು. ಹುಡುಗಿಯನ್ನು ಕೇಳುವುದಕ್ಕಾಗಿ ದಿಕ್ಕುದಿಕ್ಕುಗಳಿಂದಲೂ ಜನರು ಬಂದು ಹೋಗುವುದಕ್ಕೆ ಮೊದಲು ಮಾಡಿದರು. ಚೌಧುರಿಯು ಆರಿಗೂ ಮಾತ ಕೊಡಲಿಲ್ಲ. ಕಾರಣವೇನೆಂದರೆ:—ಮರಣಶಾಸನದ ಕಟ್ಟಳೆಯ ಮೇರೆಗೆ ಸ್ವರ್ಣಕುಮಾರಿಯ ವಿವಾಹವು ನಡೆಯುವುದಕ್ಕೆ ಇನ್ನೂ ಬೇಕಾದ ಹಾಗೆ ಕಾಲ ವಿದ್ದಿತು. ಅದಕ್ಕಾಗಿ ಚೌಧುರಿಯು ವರಾನ್ವೇಷಣದ ವಿಷಯದಲ್ಲಿ ಅಷ್ಟಾಗಿ ಆತುರನಾಗಿರಲಿಲ್ಲ.

ಒಂದಾನೊಂದು ದಿನದ ಅಪರಾಹ್ಣ ಕಾಲದಲ್ಲಿ ಸ್ವರ್ಣಕುಮಾರಿಯು ತನ್ನ ಕೋಣೆಯಲ್ಲಿ ಒಬ್ಬಳೇ ಕುಳಿತುಕೊಂಡಿದ್ದಳು. ಅವಳ ತಂದೆಯು ಅವುದೋ ಕೆಲಸವನ್ನು ನಿಮಿತ್ತ ಮಾಡಿಕೊಂಡು ರಾಯಪೇಟೆಗೆ ಹೋಗಿದ್ದನು. ಆ ಹೊತ್ತಿ ನಲ್ಲಿ ಸಖಿಯರಾರೂ ಆಕೆಯ ಬಳಿಯಲ್ಲಿ ಕುಳಿತಿರಲಿಲ್ಲ. ಆಗ ದಾಸಿಯೊಬ್ಬಳು ಬಂದು, “ ರಾಣಿಯಮ್ಮ ! ಬ್ರಾಹ್ಮಣ ಯುವತಿಯೊಬ್ಬಳು ನಿಮ್ಮನ್ನು ನೋಡ

ಬೇಕೆಂದು ಬಾಗಿಲಲ್ಲಿ ಕಾದುಕೊಂಡಿರುವಳು," ಎಂದು ಅರಿಕೆ ಮಾಡಿದಳು. ಚೌಧುರಾಣಿಯು ಆಕೆಯನ್ನು ತನ್ನಲ್ಲಿಗೆ ಕರೆದುಕೊಂಡು ಬರುವಂತೆ ಅಪ್ಪಣೆ ಮಾಡಿದಳು. ಕೊಂಚ ಹೊತ್ತಿನೊಳಗಾಗಿ ದಾಸಿಯು ವಿಧವೆಯ ರೂಪಿನಲ್ಲಿದ್ದ ಯುವತಿಯೊಬ್ಬಳನ್ನು ಜತೆಯಲ್ಲಿ ಕರೆದುಕೊಂಡು ಬಂದು ರಾಣಿಯ ಬಳಿಯಲ್ಲಿ ಬಿಟ್ಟು ಹೋದಳು. ರಾಣಿಯು ಒಂದು ಆಸನವನ್ನು ತೋರಿಸಿ ಯುವತಿಗೆ ಅದರ ಮೇಲೆ ಕುಳಿತುಕೊಳ್ಳುವಂತೆ ಹೇಳಿದಳು. ಯುವತಿಯು ಯಜಮಾನಿಯ ಇಷ್ಟದಂತೆಯೇ ಕುಳಿತುಕೊಂಡಳು.

ವಿಧವಾವಸ್ಥೆಯಲ್ಲಿ ಕಾಣಿಸಿಕೊಂಡ ಯುವತಿ ಅಸಾಧಾರಣ ರೂಪವತಿಯಾಗಿದ್ದಳು. ಆಕೆಯ ವಯಸ್ಸು ಇಪ್ಪತ್ತು ಮೂರಕ್ಕೆ ಹೆಚ್ಚಾಗಿರಲಿಲ್ಲ. ಚಿತ್ರಪಟದಲ್ಲಿ ಚಿತ್ರಿಸಿದ ದಿವ್ಯ ಸುಂದರಿಯಂತೆ ಇದ್ದಳೆಂದು ವರ್ಣಿಸುವುದಾದರೆ, ಆಕೆಯ ರೂಪದಲ್ಲಿ ನ್ಯೂನತೆಯನ್ನು ಕಲ್ಪಿಸಿದಂತಾಗುವುದು. ವಿಧವೆಯ ರೂಪನ್ನು ವರ್ಣಿಸುವುದು ಶಾಸ್ತ್ರನಿಷಿದ್ಧವೆಂದು ನಾವು ಬಲ್ಲೆವಾದರೂ ಆ ರೂಪರೇಖಾ ಲಾವಣ್ಯಗಳು ಎಂತಹ ಜಡನನ್ನಾದರೂ ಮೋಹಾವೇಶದಿಂದ ಕುಣಿಸಿಬಿಡುವುವು, ಎಂದು ಗ್ರಂಥದಲ್ಲಿ ಉಲ್ಲೇಖಿಸಲೇ ಬೇಕಾಗುವುದು. ಕಂಡುದನ್ನು ಕಂಡ ಹಾಗೆ ವರ್ಣಿಸುವುದು ಗ್ರಂಥಕಾರರ ಲಕ್ಷಣವಾದುದರಿಂದ, ಈ ದೋಷವನ್ನು ನಮ್ಮ ಪ್ರಿಯಪಾಠಕರು ಮನ್ನಿಸದಿರರು. ಈ ಯುವ ವಿಧವೆಯು ಆಸನವನ್ನು ಅಲಂಕರಿಸಿದ ಬಳಿಕ ರಾಣಿಯನ್ನು ನೋಡಿ, "ಮಹಾರಾಣಿಯಮ್ಮ! ನಾನು ಬಹುದೂರದಿಂದ ಬಂದಿರುವೆನು. ಇಲ್ಲಿಯ ಯಜಮಾನರನ್ನು ನೋಡಬೇಕೆಂದು ದಾಸಿಯೊಬ್ಬಳನ್ನು ಕೇಳಿದಾಗ, ಅವರು ಗ್ರಾಮಾಂತರಕ್ಕೆ ಹೋಗಿರುವರೆಂದು ಹೇಳಿದ ಮಾತನ್ನು ಕೇಳಿ, ನಿಮ್ಮನ್ನಾದರೂ ನೋಡಿ ಹೋಗೋಣವೆಂದು ಬಂದೆನು. ಇದರಿಂದ ನಿಮ್ಮ ಮನಸ್ಸಿಗೆ ಬೇಸರವಿಲ್ಲವಷ್ಟೇ?" ಎಂದು ಹೇಳಿದಳು.

ಕುಮಾರಿ—ಬೇಸರವೇತಕಮ್ಮ! ಹೇಳಬೇಕಾದುದನ್ನು ಧಾರಾಳವಾಗಿ ಹೇಳಬಹುದು. ನನ್ನಲ್ಲಿ ನಾಚುಗೆ ಪಡಬೇಕಾದುದಿಲ್ಲ.

ವಿಧವೆ—ತಾಯಿ! ನಾನು ಬಹು ದುಃಖಿನಿ, ಬಹಳ ಪಾಪಿಷ್ಠೆ. ನನ್ನ ಪತಿಯು ಕಾಲವಾಗಿ ತುಂಬಾ ದಿವಸಗಳಾಗಿಲ್ಲ. ಅಷ್ಟರಲ್ಲಿಯೇ ನನಗೆ ಹೊಟ್ಟೆಗಿಲ್ಲದ ದುರವಸ್ಥೆಯು ಸಂಭವಿಸಿದುದರಿಂದ, ನಾನು ತಿರಿದು ತಿನ್ನಬೇಕಾಗಿ ಬಂದು ಸೇರಿತು. ನನ್ನ ಹೆಸರು ಪದ್ಮಾವತೀ ಬಾಯಿ. ನಾನು ನನ್ನ ತಾಯಿತಂದೆಗಳಿಗೆ ಅಕ್ಕರೆಯ ಮಗಳು. ನನ್ನನ್ನು ಅನ್ನಬಟ್ಟೆಗೆ ನೇರವಾಗಿದ್ದ ಒಬ್ಬ ಯುವಕನಿಗೆ ಕೊಟ್ಟು ಮದುವೆ ಮಾಡಿದ್ದರು. ಗಂಡನೊಡನೆ ಚಿರಕಾಲ ಸುಖದಿಂದ ಬಾಳಿಕೊಂಡಿರುವ ಯೋಗವು ನನ್ನ ಹಣೆಯಲ್ಲಿ ಬರೆಯಲಿಲ್ಲ. (ಕೊಂಚ ಹೊತ್ತು

ಕಣ್ಣೀರ ಸುರಿಸುತ್ತಿದ್ದು) ಅಮ್ಮಾ! ನನ್ನ ತೌರೂರು ವರ್ಧಮಾನಪುರ. ನನ್ನ ತಂದೆಯು ಮಧ್ಯವಿತ್ತನಾಗಿದ್ದನು. ನಮಗೆ ಜೀವನಕ್ಕೇನೂ ಅಭಾವವಿರಲಿಲ್ಲ. ನನ್ನಲ್ಲಿ ಈ ಸುಟ್ಟರೂಪವಿದ್ದುದನ್ನು ನೋಡಿ ಅನೇಕರು ನನ್ನನ್ನು ಮದುವೆ ಯಾಗಲು ಬಂದರು. ನನ್ನ ತಂದೆಯು ಅವರಲ್ಲಿ ಯೋಗ್ಯನಾದ ವರನೊಬ್ಬನಿಗೆ ನನ್ನನ್ನು ಕೊಟ್ಟು ಮದುವೆ ಮಾಡಿದನು. ನನ್ನ ಪತಿಯು ನವನಾಗರಿಕರಂತೆ ಠಕ್ಕಿನ ಮನುಷ್ಯರಲ್ಲ. ಅವರು ನನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಅವರ ನಿರ್ದುಷ್ಟವಾದ ಪ್ರೀತಿಯನ್ನು ಅನುಭವಿಸುವುದಕ್ಕೆ ನನಗೆ ಲಭ್ಯವಿಲ್ಲ. ಈಗ್ಗೆ ಕೆಲವು ತಿಂಗಳ ಕೆಳಗೆ ನನ್ನ ಸ್ವಾಮಿಗೆ ವಿಷೂಚಿಕಾ ರೋಗವು ತಗಲಿತು. ರೋಗವು ಅವರನ್ನು ಬಿಡಲಿಲ್ಲವಾದರೂ, ಅವರೇನೋ ಈ ಲೋಕವನ್ನು ಬಿಟ್ಟು ಹೊರಟೇ ಹೋದರು. ನನ್ನ ತಾಯಿತಂದೆಗಳು ಅದಕ್ಕೆ ಮೊದಲೇ ಸತ್ತುಹೋ ಗಿದ್ದರು. ಇದರಿಂದ ನನಗೆ 'ಏನೇ' ಎಂಬುವರು ಗತಿಯಿಲ್ಲದೇ ಹೋಯಿತು.

"ಅಮ್ಮಾ ತಾಯಿ! ನಾನು ಹಿಂದೆ ಎಂತಹ ಪಾಪ ಮಾಡಿದ್ದೆನೋ, ಅದು ಈಗ ನನ್ನ ಗಂಡನನ್ನು ತಿಂದುಕೊಂಡು ಹೋಯಿತು. ಗಂಡನನ್ನು ಕಳೆದು ಕೊಂಡ ಸಂಕಟವನ್ನು ಎಷ್ಟು ಹೇಳಿದರೂ ಮುಗಿಯುವ ಹಾಗಿಲ್ಲ. ನನ್ನ ಅತ್ತೆಯ ಮನೆಯ ಅವಸ್ಥೆಯನ್ನು ಏನೆಂದು ಹೇಳಲಿ? ನನಗೆ ಅತ್ತೆಮಾವ ಇವರಿಬ್ಬರೂ ಇಲ್ಲ ; ಉಳಿದವರೆಲ್ಲರೂ ಬೇಕಾದ ಹಾಗೆ ಇರುವರು. ನಾನು ಹೊಟ್ಟೆಗಾಗಿ ಅತ್ತೆಯ ಮನೆಯಲ್ಲಿಯೇ ಕೆಲವು ಕಾಲ ವಾಸವಾಗಿದ್ದೆನು. ಒಂದು ದಿನ, ಹೇಳುವುದಕ್ಕೆ ನಾಚುಗೆಯಾಗುವುದು, ಆದರೂ ತಿಳಿಸಿಬಿಡುವೆನು ; ಒಂದು ದಿನ ನನ್ನ ಪತಿಯ ತಮ್ಮನೊಬ್ಬನು ನನ್ನ ರೂಪದಲ್ಲಿ ಬೆರಗಾದನಂತೆ. ಇದು ನನಗೆ ತಿಳಿಯದು. ಮನೆಯ ದಾಸಿಯೊಬ್ಬಳು ಇದನ್ನು ನನಗೆ ಗುಟ್ಟಾಗಿ ತಿಳಿಸಿದಳು. ಈ ಮಾತ ಕೇಳಿದೊಡನೆಯೇ ನನ್ನ ಅಂಗಾಂಗವೆಲ್ಲವೂ ಥರಥರನೆ ನಡುಗಿತು. ನಾನು ಆ ದಿನವೇ ಅವರ ಮನೆಯನ್ನು ತ್ಯಾಗಮಾಡಿ ಹೊರಟೆನು. ಎಲ್ಲೆಲ್ಲಿಯೂ ನಿಮ್ಮ ಹೆಸರು ಪ್ರಸಿದ್ಧವಾಗಿದ್ದುದರಿಂದ, ನಿಮ್ಮಲ್ಲಿಗೆ ಬಂದರೆ ನನ್ನ ಮಾನರಕ್ಷಣೆಯೂ ನನ್ನ ಪ್ರಾಣರಕ್ಷಣೆಯೂ ಇವೆರಡೂ ಆಗುವುದೆಂದು ಇಲ್ಲಿಗೆ ಬಂದೆನು. ನಿಮ್ಮ ತೋಟದ ಕೊನೆಯಲ್ಲಿ—ಎಂದರೆ, ಗಂಗಾ ತೀರಕ್ಕೆ ಸೇರಿದ ಹಾಗೆ ಒಂದು ಸಣ್ಣ ಹರಕಲ ಮನೆಯಿರುವುದಷ್ಟೇ. ಅಲ್ಲಿ ವಾಸವಾಗಿರುವುದಕ್ಕೆ ಅಪ್ಪಣೆ ಕೊಟ್ಟಲ್ಲಿ, ಅನಾಥೆಯನ್ನು ಸಂರಕ್ಷಿಸಿದ ಪುಣ್ಯವು ನಿಮಗೆ ಬರುವುದು. ನಾನು ಆ ಕುಟೀರ ದಲ್ಲಿದ್ದುಕೊಂಡು ನಿತ್ಯವೂ ಮೂರು ಸಲ ಸ್ನಾನ ಮಾಡುವೆನು. ಉಳಿದ ಕಾಲದ ಲ್ಲೆಲ್ಲಾ ಹರಿನಾಮವನ್ನು ಸ್ಮರಿಸುತ್ತಾ ಕಾಲ ಕಳೆವೆನು.

ಪದ್ಮಾವತಿಯು ತನ್ನ ಕಥೆಯನ್ನು ಹೇಳುತ್ತಾ ಹೇಳುತ್ತಾ ಕೆಲವು ವೇಳೆ ಅತ್ತಳು, ಕೆಲವು ವೇಳೆ ಕಣ್ಣುಗಳಲ್ಲಿ ನೀರು ತಂದುಕೊಂಡಳು, ಕೆಲವು ವೇಳೆ ಹೆದರಿ ನಡುಗಿದಳು, ಕೆಲವು ವೇಳೆ ಗದ್ಗದ ಸ್ವರದಿಂದ ಮಾತನಾಡಿದಳು. ಸ್ತ್ರೀಯರ ಈ ಚಾತುರ್ಯವನ್ನು ಅರಿವುದು ಗಂಡಸರಿಗೆ ಸಾಧ್ಯವಲ್ಲ. ಸರಳ ಸ್ವಭಾವವುಳ್ಳ ಸ್ವರ್ಣಕುಮಾರಿಯು ಈ ಕತೆಯನ್ನು ಕೇಳಿ ಕಾತರಗೊಂಡಳು. ಕುಮಾರಿಯು ವ್ಯಸನದಿಂದ ಕೊಂಚ ಹೊತ್ತು ನೀರವವಾಗಿದ್ದು ಬಳಿಕ, "ಪದ್ಮಮ್ಮನವರೆ! ನೀವು ಇಲ್ಲಿ ಆವುದಕ್ಕೂ ವ್ಯಸನಪಡಬೇಕಾದುದಿಲ್ಲ. ಕೈಕಾಲುಗಳನ್ನು ತೊಳೆದುಕೊಂಡು ಕೊಂಚ ವಿಶ್ರಾಂತಿಯನ್ನು ತೆಗೆದುಕೊಳ್ಳಿರಿ. ನನ್ನ ತಂದೆಯು ಬಂದ ಕೂಡಲೆ ನಿಮಗೆ ಆ ಮನೆಯನ್ನು ವಾಸಕ್ಕಾಗಿ ಏರ್ಪಡಿಸಿ ಕೊಡುವೆನು," ಎಂದು ನುಡಿದಳು.

ಅಷ್ಟು ಹೊತ್ತಿಗೆ ದಾಸಿಯೊಬ್ಬಳು ಬಂದು ಕೈಕಾಲು ತೊಳೆದುಕೊಳ್ಳುವುದಕ್ಕಾಗಿ ಪದ್ಮಾವತಿಯನ್ನು ಕರೆದುಕೊಂಡು ಹೋದಳು. ಪದ್ಮಾವತಿಯು ಮನೆಯೊಳಗೆ ಹೋದ ಕೂಡಲೆ, ಗ್ರಾಮಾಂತರಕ್ಕೆ ಹೋಗಿದ್ದ ಚೌಧುರಿಯು ಮನೆಗೆ ಬಂದು ಕುಮಾರಿಯನ್ನು ನೋಡಿದನು. ಕುಮಾರಿಯು ಪದ್ಮಾವತಿಯ ಕಥೆಯನ್ನು ತಂದೆಗೆ ತಿಳಿಯಪಡಿಸಿ ಗಂಗಾತೀರದ ಗುಡಿಸಲನ್ನು ಅವಳ ವಾಸಕ್ಕಾಗಿ ಏರ್ಪಡಿಸಿಕೊಡುವುದಕ್ಕಾದೀತೇ ಎಂದು ಕೇಳಿದಳು. ಚೌಧುರಿಯು ಮುಗುಳು ನಗೆಯನ್ನು ನಕ್ಕು, "ಮಗು, ಇದೆಲ್ಲವೂ ನಿನ್ನ ಸಂಪತ್ತು. ನಾನು ನಿನಗಾಗಿ ಕಾರ್ಯನಿರ್ವಾಹಕನಾಗಿರುವೆನು. ನನ್ನನ್ನು ನೀನು ಕೇಳುವದೇನಿದೆ? ನಿನಗೆ ಇಷ್ಟ ಬಂದರೆ ಕೊಡಬಹುದು," ಎಂದು ಹೇಳಿದನು. ಪದ್ಮಾವತಿಗಾಗಿ ಆ ಕುಟೀರವು ಸಿದ್ಧಪಡಿಸಲ್ಪಟ್ಟಿತು. ಅಲ್ಲಿ ಪದ್ಮಾವತಿಯು ವಾಸಮಾಡತೊಡಗಿದಳು. ಒಂದು ನೆಗ್ಗಿದ ಕೊಡ. ಎರಡು ಒಡಕು ಪಾತ್ರೆಗಳು, ಒಂದು ಹರಕು ಚಾಪೆ, ಒಂದು ಮುರಕು ಮಣೆ, ಬಡತನದ ಎರಡು ಕೊಳಕು ಸೀರೆಗಳು, ಕಮಲ ಬೀಜಗಳ ಒಂದು ಜಪಸರ, ರಾತ್ರಿಯಲ್ಲಿ ಹೊದೆಯುವುದಕ್ಕೆ ಬಗೆಬಗೆಯ ಬಣ್ಣದ ಅದೊಂದು ಬೊಂತೆ, ಇವೇ ಆಕೆಯ ಸಂಸಾರಸಾಮುಗ್ರಿಗಳಾಗಿದ್ದುವು. ಇದನ್ನು ನೋಡಿ ದೇವದುರ್ಗದವರೆಲ್ಲರೂ ಆಶ್ಚರ್ಯಪಡುತಿದ್ದರು.

ಪದ್ಮಾವತಿಯು ತನ್ನ ವಿನಯಾನುಸರಣೆಯಿಂದ ಅಂತಃಪುರದ ಮಹಿಳೆಯರೊಡನೆ ಕ್ರಮ ಕ್ರಮವಾಗಿ ಪರಿಚಯವನ್ನುಂಟುಮಾಡಿ ಕೊಂಡಳು. ಆಕೆಯ ತ್ರಿಕಾಲಸ್ನಾನ ಮತ್ತು ಹರಿನಾಮಸಂಕೀರ್ತನೆಗಳು ಇವುಗಳನ್ನು ನೋಡಿ ಎಲ್ಲರೂ ಆಕೆಯಲ್ಲಿ ಭಕ್ತಿ ವಿಶ್ವಾಸಗಳನ್ನು ತೋರಿಸಲಾರಂಭಿಸಿದರು. ಇದರಿಂದ ಪದ್ಮಾವತಿಗೆ ದೇವದುರ್ಗದಲ್ಲಿ ಗೌರವವೇರ್ಪಟ್ಟಿತು. ಸ್ವರ್ಣ

ಕುಮಾರಿಯೂ ಆಕೆಯಲ್ಲಿ ದಯೆತೋರಿಸತೊಡಗಿದಳು; ಪದ್ಮಾವತಿಯ ಧರ್ಮನಿಷ್ಠೆಗೂ ಕಠೋರ ಬ್ರಹ್ಮಚರ್ಯೆಗೂ ಬೆರಗಾಗಿ ಕುಮಾರಿಯು ಆಕೆಯ ವಿಷಯದಲ್ಲಿ ಭಯಭಕ್ತಿಗಳನ್ನೂ ತೋರ್ಪಡಿಸಲಾರಂಭಿಸಿದಳು. ಇದರ ಫಲಿತಾಂಶವೇನೆಂದರೆ—ಪದ್ಮಾವತಿಯು ಹಗಲಲ್ಲಿ ಆವಾಗಲೂ ಕುಮಾರಿಯೊಡನೆಯೇ ಇರುವಳು, ಅವಳೊಡನೆಯೇ ಮಾತನಾಡುವಳು, ಅವಳೊಡನೆಯೇ ಸಂಚರಿಸುವಳು. ಕುಮಾರಿಯೂ ಎಡೆಬಿಡದೆ ಆಕೆಯೊಡನೆ ಸಾಮಾಜಿಕವಾದ, ಸಾಂಸಾರಿಕವಾದ ಮಾತುಗಳನ್ನಾಡುವಳು, ಸಮಯಸಂದರ್ಭಗಳಲ್ಲಿ ಆಕೆಯ ಸಲಹೆಯಂತೆ ಕೆಲಸ ಮಾಡುವಳು. ಪರಸ್ಪರ ಸ್ನೇಹವು ಈ ರೀತಿಯಾಗಿದ್ದರೂ ಸ್ವರ್ಣಕುಮಾರಿಯು ಪದ್ಮಾವತಿಯನ್ನು ಸಂಪೂರ್ಣಭಾವದಿಂದ ಪ್ರೀತಿಸುವುದಕ್ಕಾಗಲಿಲ್ಲ. ಇದಕ್ಕೆ ಕಾರಣವೇನಿರಬಹುದೆಂದು ಸ್ವರ್ಣಕುಮಾರಿಯು ಒಂದು ದಿನ ಚಿಂತಿಸಿ ನೋಡಿದಳು. ಆ ಚಿಂತೆಯ ಪರಿಪಾಟಿಯು ಈ ರೀತಿಯಾಗಿದ್ದಿತು:-

"ಪದ್ಮಾವತಿಯಲ್ಲಿ ಅನೇಕ ಗುಣಗಳಿವೆ. ಆ ಯುವತಿಯು ಧರ್ಮಪರಾಯಣೆ ಮತ್ತು ಕಠೋರ ಬ್ರಹ್ಮಚಾರಿಣಿ. ನನ್ನಲ್ಲಿ ಆಕೆಗೆ ಪರಮ ವಿಶ್ವಾಸ, ಆದರೂ ಆಕೆಯಲ್ಲಿ ನನಗೆ ಸಹಜವಾದ ಪ್ರೀತಿಯು ಹುಟ್ಟದಿರಲು ಕಾರಣವೇನು? ನಾನು ಆಕೆಯನ್ನು ಪ್ರೀತಿಸುವುದಕ್ಕೆ ಹೊರಟಾಗಲೆಲ್ಲಾ ಆವುದೋ ಭಾವವು ನನ್ನ ಮನದಲ್ಲಿ ಅಂಕುರಿಸಿ ನನ್ನನ್ನು ಅಡ್ಡಗಿಸುತ್ತಿರುವುದು. ಆಕೆಯು ದರಿದ್ರಳೆಂದು ನನಗೆ ಹೀಗೆಲ್ಲಾ ಆಗುವುದೇ? ನಾನು ಆವಾಗಲೂ ದರಿದ್ರರನ್ನು ತಿರಸ್ಕರಿಸಿದವಳಲ್ಲಾ. ದರಿದ್ರರಲ್ಲಿ ನನಗೆ ತುಂಬಾ ಪ್ರೀತಿ. ಹಾಗಾದರೆ ಹೀಗಾಗುವುದಕ್ಕೆ ಕಾರಣವೇನು? ಇದರಲ್ಲಿ ಏನು ಚಮತ್ಕಾರವಿದ್ದೀತು?"

ಸ್ವರ್ಣಕುಮಾರಿಯು ಈ ರೀತಿಯಾಗಿ ಆಲೋಚನೆಮಾಡಿದಳು, ಆದರೆ ಅವಳಿಗೆ ಆವ ಕಾರಣವೂ ಗೊತ್ತಾಗಲಿಲ್ಲ. ಅವಳಿಗೆ ಗೊತ್ತಾಗುವುದಕ್ಕೆ ಕಾರಣವೂ ಇರಲಿಲ್ಲ. ಸ್ವರ್ಣಕುಮಾರಿಯು ಇನ್ನೂ ಚಿಕ್ಕ ಹುಡುಗಿ, ಆದರಲ್ಲಿಯೂ ಲೋಕಾನುಭವವಿಲ್ಲದ ಹೆಂಗುಸು; ಎಂದ ಮೇಲೆ ಕುಮಾರಿಗೆ ಜನರ ಸ್ವಭಾವವು ಹೇಗೆ ಗೊತ್ತಾದೀತು? ಯುವತಿಯಾದ ಪದ್ಮಾವತಿಯ ಕಣ್ಣುಗಳಲ್ಲಿ ಎಂತಹ ತೀಕ್ಷ್ಣವಾದ ಕಟಾಕ್ಷಗಳು ನರ್ತನಮಾಡುತ್ತಿದ್ದುವೋ ಅಂತಹ ಕಟಾಕ್ಷಗಳ ಅತ್ಯದ್ಭುತವಾದ ಶಕ್ತಿವಿಶೇಷವನ್ನು ಸರಳಬಾಲೆಯಾದ ಕುಮಾರಿಯು ತಿಳಿಯುವುದಕ್ಕೆ ಸಾಧ್ಯವೇ? ಮೂರು ಲೋಕವನ್ನೂ ಪದತಲದಲ್ಲಿಟ್ಟುಕೊಳ್ಳಲು ಸಮರ್ಥವಾದ ಯುವತಿಯ ವಚನವಿನ್ಯಾಸ ವೈಖರಿಯನ್ನು ಸ್ವರ್ಣಕುಮಾರಿಯು ಎಷ್ಟು ಜನ್ಮ ತಪಸ್ಸು ಮಾಡಿದರೆ ತಾನೇ ಪಡೆಯಬಲ್ಲಳು? ಒಬ್ಬೊಬ್ಬರಲ್ಲಿ ಒಂದೊಂದು ಶಕ್ತಿಯುಂಟು. ಒಬ್ಬರ ಶಕ್ತಿಯು ಮತ್ತೊಬ್ಬರಿಗೆ ಬರುವುದು

ಕಂಡು ಕೇಳಿದ ವಿಷಯುವಲ್ಲ. ಪದ್ಮಾವತಿಯಲ್ಲಿ ಸರ್ವಜನ ಮನೋಮೋಹಕ ವಾದ ಚಾತುರ್ಯವುಂಟು; ಸ್ವರ್ಣಕುಮಾರಿಯಲ್ಲಿ ಸರ್ವಜನವಶೀಕಾರ ವಿದ್ಯೆ ಯೆನ್ನಿಸಿದ ಸಾರಳ್ಯವುಂಟು. ಇವೆರಡೂ ಒಂದೆಡೆಯಲ್ಲಿ ಸೇರುವುದು ಅತಿ ಪ್ರಯಾ ಸವು. ಬೆಳಕಿನಲ್ಲಿ ಕತ್ತಲೆಯನ್ನೂ, ಕತ್ತಲೆಯಲ್ಲಿ ಬೆಳಕನ್ನೂ ಆರಾದರು ನೋಡಿರುವುದಾದರೆ, ಅಂತಹವರು ಚತುರತೆಯಲ್ಲಿ ಸರಳತೆಯನ್ನೂ ಸರಳತೆಯಲ್ಲಿ ಚತುರತೆಯನ್ನೂ ಕಾಣುವರು. ನಮಗಾದರೋ ಇವೆರಡೂ ಭಿನ್ನಭಾವಗಳಾ ಗಿಯೇ ತೋರುವುವು. ನಮ್ಮಂತೆಯೇ ಸ್ವರ್ಣಕುಮಾರಿಗೂ ತೋರಿತಾದುದರಿಂದ, ಆಕೆಯು ಪದ್ಮಾವತಿಯನ್ನು ಪೂರ್ಣಾಂತಃಕರಣದಿಂದ ಪ್ರೀತಿಸಲು ಸಾಧ್ಯವಾಗ ಲಿಲ್ಲ. ಪದ್ಮಾವತಿಯು ಎಷ್ಟೇ ಸವ್ಯವಹಾರ ಮಾಡಲಿ, ಇತರರ ದುಃಖದಲ್ಲಿ ಎಷ್ಟೇ ದುಃಖಪಡಲಿ, ಇದೆಲ್ಲವೂ ಚಾತುರ್ಯಮೂಲಕವಾದುದರಿಂದ ಕೃತ್ರಿಮವೆದಿಸು ವುದು. ಈ ಕೃತ್ರಿಮ ಸ್ವಭಾವಕ್ಕೂ ಸ್ವರ್ಣಕುಮಾರಿಯ ಸರಳ ಸ್ವಭಾವಕ್ಕೂ ಆವ ಬಗೆಯ ಹೊದ್ದಿಕೆಯೂ ಇರುವುದಿಲ್ಲ. ಅದುಕಾರಣ ಇವರಿಬ್ಬರಿಗೂ ಅಂತರಂಗ ಶುದ್ಧಿಯಿರಲಿಲ್ಲ. ಲೋಕಕ್ಕಾಗಿ ಬಹಿರಂಗದಲ್ಲಿ ಪ್ರೀತಿವಿಶ್ವಾಸ ಗಳನ್ನು ತೋರಿಸಲೇ ಬೇಕಾಗುವುದು. ಇದು ಕಾರ್ಯಕಾರಿಯಾಗಲಾರದು.

ಬಹಿರಂಗದಲ್ಲಿ ಪದ್ಮಾವತಿಯೂ ಪ್ರೀತಿಸುವಳು, ಸ್ವರ್ಣಕುಮಾರಿಯೂ ಪ್ರೀತಿಸುವಳು. ಇಬ್ಬರೂ ಒಬ್ಬರನ್ನೊಬ್ಬರು ಎಡೆಬಿಡದೇ ಕೂಡಿರುವರು. ಇಬ್ಬರೂ ಅಂತರಂಗದಲ್ಲಿಯೂ ಮಾತನಾಡುವರು, ಬಹಿರಂಗದಲ್ಲಿಯೂ ಮಾತ ನಾಡುವರು. ಪದ್ಮಾವತಿಯು ಸ್ವರ್ಣಕುಮಾರಿಗೆ ಆಗಿಂದಾಗ ಸಲಹೆಗಳನ್ನು ಕೊಡುವಳಲ್ಲದೆ, ಲೋಕಾನುಭವಗಳನ್ನುಂಟುಮಾಡಿಕೊಡುವಳು. ಸ್ವರ್ಣ ಕುಮಾರಿಯು ಒಂದೊಂದು ವೇಳೆ ಸಹಜರೀತಿಯಿಂದ ತನ್ನ ಮನೋಭಿಪ್ರಾಯ ಗಳನ್ನು ಪದ್ಮಾವತಿಗೆ ತಿಳಿಸಿಬಿಡುವಳು. ಹೀಗೆಯೇ ಕೆಲವು ದಿನಗಳು ಕಳೆ ಯುತ್ತಾ ಬಂದುವು.

ಒಂದಾನೊಂದು ದಿನ ಸ್ವರ್ಣಕುಮಾರಿಯು ಗಂಗಾಸ್ನಾನ ಮಾಡಿಕೊಂಡು ಹಿಂತಿರುಗಿ ಮನೆಗೆ ಬರುವಾಗ ಪದ್ಮಾವತಿಯ ಕುಟೀರದ ಬಳಿಗೆ ಬಂದಳು. ಪದ್ಮಾವತಿಯು ಸಡಗರದಿಂದ ಮುರುಕು ಮಣೆಯನ್ನು ತಂದಿಟ್ಟು ಆಸನವನ್ನು ಅಲಂಕರಿಸಬೇಕೆಂದು ಸ್ವರ್ಣಕುಮಾರಿಯನ್ನು ಬೆಸಗೊಂಡಳು.

ಸ್ವರ್ಣ—ಇದೆಂತಹ ಹೊಸ ಆದರ?

ಪದ್ಮಾ—ಹೊಸ ಆದರವೆಂಥದು? ಮನೆಗೆ ಬಂದವರಿಗೆ ನನ್ನ ಯೋಗ್ಯ ತೆಗೆ ತಕ್ಕ ಮರ್ಯಾದೆ. ಬಡವಳಿಗೆ ಮುರುಕು ಮಣೆಯಲ್ಲದೆ ಇನ್ನೇನಿರುವುದು?

ಸ್ವರ್ಣ—ಆದರವೆಂಬುದು ಮನಸ್ಸಿನ ಸಾಮಗ್ರಿಯೇ ಹೊರತು ಹೊರಗಣ ಸಾಮಗ್ರಿಯಲ್ಲ. ನನಗೆ ನಿನ್ನ ಆದರವೇ ಸಾಕು. ಮಣೆಯ ಮೇಲೆ ಕೂಡುವುದರಿಂದ ಹೆಚ್ಚಿನ ಗೌರವವೇನೂ ಇರುವುದಿಲ್ಲ. ನಾನು ನಿಂತಿರುವೆನು. ಅಪ್ಪಣೆಯಾಗಲಿ.

ಪದ್ಮಾ—ಮಹಾರಾಣಿ! ಇಂದು ನಾನೇ ಧನ್ಯೆ. ಇಂದಿಗೆ ನನ್ನ ಹರಿನಾಮಸ್ಮರಣೆಯು ಫಲಿಸಿತು.

ಸ್ವರ್ಣ—ಪದ್ಮಾಬಾಯಿ! ಹಾಗೆಂದರೇನು?

ಪದ್ಮಾ—ಭಾಗ್ಯಲಕ್ಷ್ಮಿಯಾದ ನೀನು ಬಿಕಾರಿಯ ಮನೆಗೆ ಬಂದುದೇ ಹರಿನಾಮಸ್ಮರಣೆಯ ಮಹಾ ಫಲವು. ದರಿದ್ರರು ಆವಾಗಲೂ ಭಾಗ್ಯಲಕ್ಷ್ಮಿಯ ಕೃಪಾಕಟಾಕ್ಷವನ್ನು ಬಯಸುತ್ತಿರುವರು. ಇಂದೇ ನನ್ನ ದಾರಿದ್ರ್ಯವು ದೂರವಾಯಿತು. ನಾನೇ ಧನ್ಯೆ, ನಾನೇ ಮಾನ್ಯೆ; ಮಹಾರಾಣಿ! ಕೂಡೋಣವಾಗಲಿ.

ಸ್ವರ್ಣ—ಇದೇನು, ಎಂದೂ ಇಲ್ಲದ ಸ್ತೋತ್ರಭಾಗ? ನಿಮ್ಮ ಸರಸಾಲಾಪಕ್ಕೆ ಇದು ಕಾಲವಲ್ಲ. ಎಲ್ಲದಕ್ಕೂ ಕಾಲಾಕಾಲವುಂಟು. ಹೊಸ ಸಮಾಚಾರವೇನು?

ಪದ್ಮಾ—ಹೊಸ ಸಮಾಚಾರವೇ? ಹಾಗಾದರೆ ಹೇಳುವೆನು, ಕೇಳು. ಕಲಕಲನಾದಿನಿಯಾದ ಗಂಗಾಮಾತೆಯು ಇಂದು ಅಪೂರ್ವ ಶೋಭಾರಾಶಿಯನ್ನು ತಳೆದು ಆನಂದದಿಂದ ಪತಿಗೃಹಾಭಿಮುಖವಾಗಿ ತೆರಳುತ್ತಿರುವಳು.

ಸ್ವರ್ಣ—ಇದು ಇವತ್ತಿಗೆ ಹೊಸ ವಿಷಯವಲ್ಲ.

ಪದ್ಮಾ—ಸ್ತ್ರೀಯಾದವಳು ಪ್ರತಿಕ್ಷಣದಲ್ಲಿಯೂ ಗಂಡನ ವಿಷಯದಲ್ಲಿ ಇಷ್ಟು ಪ್ರೀತಿಯನ್ನಿಟ್ಟಿರುವುದು ಹೊಸ ವಿಷಯವಲ್ಲದೇ ಏನು? ಈಗಣ ಕಾಲದಲ್ಲಿ ಹೆಂಗುಸರು ಗಂಡನ ಮನೆಯೆಂದರೆ ಹಾವಿನ ಹುತ್ತವೆಂದೂ, ಸಿಂಹದ ಗುಹೆಯೆಂದೂ, ನರಕದ ಕೂಪವೆಂದೂ ತಿಳಿದಿರುವರು. ಹೆಂಗುಸು ಗಂಡನ ಮನೆಗೆ ಹೋಗಬೇಕಾದರೆ ಅವಳ ಗೋಳು ಹೇಳತೀರದು. ಈಗಣ ವಿದ್ಯಾವತಿಯರು ಗಂಡನನ್ನು ಪ್ರಾಣಗಂಡವೆಂದು ಭಾವಿಸಿರುವರು. ತಾಯಿ! ಗಂಗಾಮಾತೆಯಂತಹ ಪತಿಪರಾಯಣೆಯರು ಲೋಕದಲ್ಲಿ ದೊರೆವುದೇ ಅತಿ ದುರ್ಲಭವು.

ಸ್ವರ್ಣ—ಪದ್ಮಾಬಾಯಿ! ನಿಮ್ಮ ಅಕಾಂಡತಾಂಡವವೆನಿಸಿದ ಮಾತಿಗೆ ಅರ್ಥವೇ ಆಗುವುದಿಲ್ಲ. ಈ ವಿಷಯವು ನಿಮಗೆ ಜ್ಞಾಪಕಕ್ಕೆ ಬರಲು ಕಾರಣವೇನು?

ಪದ್ಮಾ—ರಾಣಿ! ನಾನು ಏನ ಹೇಳಲಿ! ಮೂರು ಹೊತ್ತು ಸ್ನಾನ, ಐದು ಹೊತ್ತು ಜಪ, ಒಂದು ಹೊತ್ತು ಊಟ, ಏನ ಮಾಡಿದರೂ ಹುಳಿ ಉಪ್ಪು ತಿನ್ನುವ ಶರೀರ. ನಿಮ್ಮನ್ನು ನೋಡಿದ ಕೂಡಲೆ ನನ್ನ ಮನೋಮೋಹನರಾದ ಯಜಮಾನರ ಸ್ಮರಣೆ ಬಂದಿತು. ಇದಕ್ಕೆ ಕಾರಣವೇನೋ ನನಗೊಂದೂ ಗೊತ್ತಿಲ್ಲ.

ಸ್ವರ್ಣಕುಮಾರಿಯು 'ಮೋಹನ' ಎಂಬ ಶಬ್ದವನ್ನು ಕೇಳಿದ ಕೂಡಲೆ ಕಳವಳಗೊಂಡವಳಾಗಿ ಕಣ್ಣುಗಳಲ್ಲಿ ಒಂದೆರಡು ತೊಟ್ಟು ನೀರನ್ನು ತಂದು ಕೊಂಡಳು. ಇದನ್ನು ಕಂಡು ಪದ್ಮಾಬಾಯಿಯು ಇಂತೆಂದಳು.

ಪದ್ಮಾ—ಅಮ್ಮಾ ತಾಯಿ! ನೀವೂ ಮೋಹನನ್ನು ಜ್ಞಾಪಿಸಿಕೊಂಡಂತಿದೆ. ನಿಮ್ಮ ಮೋಹನನ ವಿಚಾರವೇನಾದರೂ ತಿಳಿದು ಬಂದಿರುವುದೇ?

ಸ್ವರ್ಣ—(ಅಪ್ರತಿಭಳಾಗಿ) ಬಾಯಿಯವರೆ! ಹಠಾತ್ತಾಗಿ ಈ ವಿಷಯವು ಜ್ಞಾಪಕಕ್ಕೆ ಬರಲು ಕಾರಣವೇನು? ನಿಮಗೆ ಈ ಸಂಗತಿಯು ಹೇಗೆ ಗೊತ್ತಾ ಯಿತು?

ಪದ್ಮಾ—ನನಗೆ ಗೊತ್ತಾಗಲು ಕಾರಣವೇನೇ! ನೀವೇ ಇದೆಲ್ಲವನ್ನೂ ಅಂದೇ ತಿಳಿಸಿದ್ದಿರಲ್ಲವೇ? ಅದನ್ನೇ ನಾನು ಈಗ ಕೇಳಿದುದು.

ಸ್ವರ್ಣ—ನಿಮಗೆ ಎಲ್ಲವೂ ಮೊದಲಿನಿಂದಲೂ ಗೊತ್ತೇ ಇರಬೇಕು. ನಿಮ್ಮ ಮುಖ ನೋಡಿದರೆ ತಿಳಿಯುವುದು. ನೀವು ಆ ವಿಚಾರವನ್ನು ತಿಳಿಸುವ ವರೆಗೂ ನಾನು ನಿಮ್ಮನ್ನು ಬಿಡುವುದಿಲ್ಲ. ನೀವು ಈಗಲೇ ನನಗೆ ತಿಳಿಸಬೇಕು.

ಪದ್ಮಾ—ಬಿಕಾರಿಯಾದ ಬಡ ಹೆಂಗುಸಿಗೇನು ಗೊತ್ತಾದೀತು?

ಸ್ವರ್ಣ—ನಿಮಗೆ ಎಲ್ಲವೂ ಗೊತ್ತು. ನೀವು ಬಹು ದೇಶಗಳನ್ನು ಸುತ್ತಿಕೊಂಡು ಇಲ್ಲಿಗೆ ಬಂದಿರುವಿರಿ. ಜೀವನಕ್ಕಾಗಿ ದೇಶದೇಶಗಳನ್ನು ಅಲೆ ಯುವವರಿಗೆ ಅನೇಕ ಸಂಗತಿಗಳು ಗೊತ್ತಾಗುವ ಸಂಭವವುಂಟು. ನೀವು ಆ ವಿಚಾರವನ್ನು ನನಗೆ ಮುಚ್ಚುಮರೆಯಿಲ್ಲದೆ ತಿಳಿಸಲೇ ಬೇಕು.

ಪದ್ಮಾ—ಹಾಗಾದರೆ ನನಗೆ ಗೊತ್ತಿರುವುದನ್ನಾದರೂ ತಿಳಿಸುವೆನು. ನಾನು ಪತಿಯನ್ನು ಸುಡುಗಾಡಿನಲ್ಲಿ ಬಿಟ್ಟು ಕೆಲವು ತಿಂಗಳ ಮೇಲೆ ವಿದ್ಯಾನಗರಕ್ಕೆ ಬಂದು ಅಲ್ಲಿ ಒಂದೆರಡು ತಿಂಗಳ ವರೆಗೂ ಭಿಕ್ಷೆಯೆತ್ತಿ ಜೀವನ ಮಾಡಿಕೊಂಡಿದ್ದೆನು. ಆಗ ನಾನು ಮದನಕುಮಾರ ಮಿತ್ರನೆಂಬ ಯುವಕನೊಬ್ಬನನ್ನು ಪದೇಪದೇ

ನೋಡುತಿದ್ದೆನು. ಆತನು ಕಂಡಕಂಡವರಲ್ಲಿ 'ಕುಮಾರಿ, ಕುಮಾರಿ' ಎಂದು ಹೇಳಿಕೊಂಡು ಹಂಬಲಿಸುತ್ತಿದ್ದುದನ್ನು ನಾನು ಕೇಳಿರುವೆನು. ಆತನು ನಿಮ್ಮ ಮೋಹನನೇನಾದರೂ ಆಗಿರಬಹುದೇ ? ಎಂದು ನಾನು ವಿಚಾರಿಸಿದೇನೇ ಹೊರತು ಇನ್ನೇನೂ ಇಲ್ಲ. ಲೋಕದಲ್ಲಿ ಎಷ್ಟೋ ಜನರು 'ಮೋಹನ' ಎಂಬ ಹೆಸರನ್ನಿಟ್ಟುಕೊಂಡಿರುವರು. ನಾನು ನೋಡಿದ ಮೋಹನನು ಹೊಟ್ಟೆಗಿಲ್ಲದ ಬಡಪಾಯಿ. ಅವನು ನಿಮ್ಮ ಮೋಹನನಾಗಿರಲಿಕ್ಕಿಲ್ಲ. ಈಗ ಆ ಮಾತನ್ನು ಕಟ್ಟಿಕೊಂಡು ನಮಗಾಗುವುದೇನು ? ತಾಯೆ ! ಹೊತ್ತಾಯಿತು. ನೀವು ಮನೆಗೆ ಹೊರಡೋಣವಾಗಲಿ ; ನಾನೂ ಸ್ನಾನಕ್ಕೆ ಹೊರಡುವೆನು. ನನಗಿನ್ನೂ ಬಹಳ ಕೆಲಸವಿರುವುದು.

ಮೋಹನಕುಮಾರ ಮಿತ್ರ ! ಕುಮಾರಿ, ಕುಮಾರಿ, ಎಂದು ಹಂಬಲಿಸುತ್ತಿರುವನು ! ಈ ಮಾತನ್ನು ಕೇಳಿದ ಕೂಡಲೆ ಸ್ವರ್ಣಕುಮಾರಿಗೆ ಸಂದೇಹವು ಇಮ್ಮಡಿಯಾಯಿತು. ಕೈಕಾಲುಗಳಲ್ಲಿ ತ್ರಾಣವೇ ಇಲ್ಲದೆ ಆಕೆಯು ಹಾಗೆಯೇ ಹೊಸಲಿನ ಮೇಲೆ ಕುಳಿತುಬಿಟ್ಟಳು. ಪದ್ಮಾವತಿಯು ಇದನ್ನು ನೋಡಿ "ಅಲ್ಲಿ ಕೂಡಬಾರದು, ಅಲ್ಲಿ ಕೂಡಬಾರದು ; ಈ ಮಣೆಯ ಮೇಲೆ ಕೂಡೋಣವಾಗಲಿ," ಎಂದು ಪ್ರಾರ್ಥಿಸಿದಳು. ಕುಮಾರಿಯು ಈ ಮಾತಿಗೆ ಗಮನ ಕೊಡದೆ, "ಪದ್ಮಾವತಿಯಮ್ಮ ! ನೀವು ಆತನ ವಿಚಾರವಾಗಿಯಾದರೂ ಏನ ಬಲ್ಲಿರಿ ? ನನಗೆ ಒಂದೂ ಬಿಡದಂತೆ ತಿಳಿಸಬೇಕು. ನನ್ನ ಹೆಸರು ಹೇಳಿಕೊಂಡು ತಿರುಗುತ್ತಿರುವುದರಿಂದ, ಆತನೇ ನನ್ನ ಹೃದಯಾಧಿದೇವತೆಯಾದ ಮೋಹನ ಕುಮಾರನು," ಎಂದು ನಾಚುಗೆಯಿಂದ ತಿಳಿಯಪಡಿಸಿದಳು.

ಪದ್ಮಾ—ತಾಯಿ ! ಇದೆಂತಹ ಹುಚ್ಚು ! ಎಷ್ಟೋ ಜನ ಮೋಹನರಿರುವರು. ಕುಮಾರಿಯೆಂಬ ಹೆಸರಿಗೆ ತಾನೇ ದಾರಿದ್ರ್ಯವೇನು ? ಕುಸುಮ ಕುಮಾರಿ, ವಸಂತ ಕುಮಾರಿ, ಉಮಾ ಕುಮಾರಿ, ರಮಾ ಕುಮಾರಿ, ಲಲಿತ ಕುಮಾರಿ, ಕಮಲ ಕುಮಾರಿ, ಸರಳ ಕುಮಾರಿ, ಎಂದು ಎಷ್ಟೋ ಸುಕುಮಾರಿಯರಾದ ಕುಮಾರಿಯರಿರುವರು. ಹೀಗಿರುವಲ್ಲಿ ಆತನೇ ನಿಮ್ಮ ಮೋಹನನೆಂದು ಹೇಗೆ ಹೇಳುವುದಕ್ಕಾದೀತು ? ನಾನು ಆರ ಮನೆಯಲ್ಲಿ ಆಶ್ರಯವನ್ನು ಪಡೆದಿದ್ದೆನೋ, ಆ ಮನೆಯ ಒಂದು ಕೋಣೆಯಲ್ಲಿ ಮೋಹನನೆಂಬ ಯುವಕನೊಬ್ಬನು ಬಾಡಿಗೆಗೆ ಇರುತಿದ್ದನು. ಆತನು ಎಂದಿಗಾದರೂ ನಿಮ್ಮ ಮೋಹನಕುಮಾರನಾದಾನೇ !

ಸ್ವರ್ಣ—ಅವನು ಆರೇ ಆಗಲಿ, ಅವನ ವಿಷಯವಾಗಿ ನಿಮಗೆ ತಿಳಿದಿರುವುದೆಲ್ಲವನ್ನೂ ತಿಳಿಸಿರಿ. ನಿಮಗೆ ನನ್ನ ಮೋಹನನ ವಿಚಾರವೆಲ್ಲವೂ ಚೆನ್ನಾಗಿಯೂ ಗೊತ್ತು.

ಪದ್ಮಾ—ತಾಯಿ! ನಿಮಗೆ ಹೇಗೆ ಗೊತ್ತು?

ಸ್ವರ್ಣ—ಅದನ್ನು ನಾನು ಈಗ ಹೇಳಲಾರೆ.

ಪದ್ಮಾ—(ವಿಷಣ್ಣಭಾವದಿಂದ) ಮಹಾರಾಣಿಯಮ್ಮ! ಆತನ ವಿಚಾರವು ಹೇಳಕೂಡದಾಗಿದೆ. ಅದನ್ನು ಕೇಳುವುದರಿಂದ ಸಂತೋಷವಾಗಲಾರದು. ನಾನು ಹೇಳುವ ಮೋಹನನಿಗೆ ಭಯಂಕರವಾದ ಸಿಡಬು ಎದ್ದಿತು. ಆಗ ಆತನ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುವುದಕ್ಕೂ ಆರೂ ಹತ್ತಿರ ಬರಲೊಲ್ಲರು. ಅದು ಅಂಟುರೋಗವೆಂದು ಎಲ್ಲರೂ ಹೆದರಿ ಹೆದರಿ ದೂರ ಸರಿದರು. ಆತನ ಸಂಕಟವನ್ನು ನೋಡಿ ನನ್ನ ಮನಸ್ಸು ಕರಗಿ ನೀರಾಗಿ ಹೋಯಿತು. ನಾನು ಗಂಡನನ್ನು ಕಳೆದುಕೊಂಡ ಬಳಿಕ ಮರಣಕ್ಕೆ ಅಂಜತಕ್ಕವಳಾಗಿರಲಿಲ್ಲವಾದುದರಿಂದ, ಆತನ ಸೇವೆಯಲ್ಲಿ ನಿಂತೆನು. ಆತನು ರೋಗದ ಯಾತನೆಯಿಂದ ಆಗಿಂದಾಗ ಅಸ್ಪಷ್ಟವಾದ ಭಾಷೆಯಲ್ಲಿ, 'ರಾಯಪೇಟೆ, ಸರಕಾರವಾಡಿ, ಗೋವಿಂದ ಚಂದ್ರಚೌಧುರಿ, ಸ್ವರ್ಣಕುಮಾರಿ' ಮುಂತಾದ ಹೆಸರನ್ನು ಎತ್ತಿ ಏನೇನೋ ಮಾತನಾಡಿದನು. ಆಗ ನನಗೆ ಇದರ ಮರ್ಮವಾವುದೂ ಗೊತ್ತಾಗಲಿಲ್ಲ. ಗೊತ್ತಿದ್ದಿದ್ದರೆ ಆ ವಿಷಯವೇ ಬೇರೆಯಾಗಿರುತ್ತಿದ್ದಿತು.

ಸ್ವರ್ಣ—ಮುಂದೇನಾಯಿತು? ಕೊನೆಗೆ ರೋಗವು ವಾಸಿಯಾಯಿತಷ್ಟೇ?

ಪದ್ಮಾ—(ಸಂಕಟದಿಂದ ಕಣ್ಣೀರು ಗರೆಯುತ್ತಾ) ತಾಯೆ! ಅದು ವಾಸಿಯಾಗತಕ್ಕ ರೋಗವಾಗಿರಲಿಲ್ಲವಮ್ಮಾ!

ಸ್ವರ್ಣಕುಮಾರಿಯು ಈ ಮಾತನ್ನು ಕೇಳಿದ ಕೂಡಲೆ ಎದೆಯೊಡೆದವಳಾಗಿ "ಹಾ, ದಯಾದರಿದ್ರನಾದ ವಿಧಿಯೇ!" ಎಂದು ವಿಕಟವಾದ ನುಡಿಯನ್ನು ನುಡಿದು ಅಲ್ಲಿಂದೆದ್ದು ದಡಬಡನೆ ಮನೆಯ ಕಡೆಗೆ ತಿರುಗಿದಳು. ಸ್ವರ್ಣಕುಮಾರಿಯು ಮನೆಗೆ ಬಂದವಳು ತನ್ನ ಕೋಣೆಗೆ ಹೋಗಿ ಬಾಗಿಲನ್ನು ಹಾಕಿಕೊಂಡು ಮಲಗಿದಳು. "ಕುಮಾರಿಯು ಊಟಮಾಡದೆ ಕೋಣೆಯ ಬಾಗಿಲನ್ನು ಹಾಕಿಕೊಂಡು ಮಲಗಿರುವಳು," ಎಂದು ಕೇಳಿ ಚೌಧುರಿಯು ಕಾರಣವನ್ನು ಕೇಳುವುದಕ್ಕಾಗಿ ಆಕೆಯ ಬಳಿಗೈತಂದನು. ಸ್ವರ್ಣಕುಮಾರಿಯು ನಿಟ್ಟುಸಿರು ಬಿಡುತ್ತಾ ಪದ್ಮಾವತಿಯು ಹೇಳಿದ ಮಾತೆಲ್ಲವನ್ನೂ ಒಂದೊಂದಾಗಿ ತಿಳಿಸಿದಳು. ಇದನ್ನು ಕೇಳಿದ ಕೂಡಲೆ ಚೌಧುರಿಯ ತಲೆಯ ಮೇಲೆ ಸಿಡಿಲು ಬಿಡಿದಂತಾಯಿತು. ಸ್ವರ್ಣಕುಮಾರಿಯು, "ತನ್ನ ಬಾಲ್ಯದೋಷದಿಂದ ಮೋಹನನು ಓಡಿಹೋದನೆಂದೂ, ಓಡಿಹೋದುದರಿಂದ ಅವನಿಗೆ ಅಕಾಲಮರಣವುಂಟಾಯಿತೆಂದೂ," ತಿಳಿದು ಹೇಳಲಸದಳವಾದ ಸಂಕಟದಿಂದ ತಲ್ಲಣಿಸಿ ಹೋದಳು. ಕುಮಾರಿಗೆ

ಊಟ ಬೇಕಾಗಿರಲಿಲ್ಲ, ಉಪಚಾರಬೇಕಾಗಿರಲಿಲ್ಲ, ಸಂಪತ್ತು ಬೇಕಾಗಿರಲಿಲ್ಲ, ದಾಸದಾಸಿಯರು ಬೇಕಾಗಿರಲಿಲ್ಲ, ಆರೊಡನೆಯೂ ಮಾತುಬೇಕಾಗಿರಲಿಲ್ಲ. ಆದರೂ ಧನವಂತರ ಮನೆಯಲ್ಲಿ ಹೀಗಿರಲು ಸಾಧ್ಯವಾದುದಲ್ಲ. ಶಾರೀರಕವಾದ ರೋಗವೇ ಆಗಲಿ, ಮಾನಸಿಕವಾದ ವ್ಯಸನವೇ ಆಗಲಿ, ಕೊಂಚ ಮಟ್ಟಿಗೆ ಏನಾದರೂ ಸಂಭವಿಸಿದಲ್ಲಿ ಜನರ ಹಾವಳಿಯಂತೂ ಹೇಳಲೇ ಕೆಲಸವಿಲ್ಲ. ಅವರು ತಮ್ಮ ಉಪಚಾರದಿಂದ ಇದ್ದ ರೋಗವನ್ನು ಹೆಚ್ಚಿಸುವುದಲ್ಲದೆ, ಇಲ್ಲದ ರೋಗವನ್ನೂ ಉಂಟುಮಾಡಿಬಿಡುವರು. ದೊಡ್ಡ ಮನೆತನದಲ್ಲಿ ಇದೊಂದು ಅನರ್ಥ ಪರಂಪರೆ. ರೋಗಕ್ಕಿಂತಲೂ ಇದೇ ಬಲವತ್ತರವಾದುದು. ರೋಗವನ್ನಾದರೂ ಸಮಾಧಾನಸ್ಥಿತಿಗೆ ತರಬಹುದು ; ಇದನ್ನು ತರುವುದು ಅತಿಪ್ರಯಾಸ ಸಾಧ್ಯವು.

ಸ್ವರ್ಣಕುಮಾರಿಯು ಇದಾವುದಕ್ಕೂ ಆಸ್ಪದಕೊಡದೆ ತನ್ನ ಸಂಕಟವನ್ನು ತಾನೇಅನುಭವಿಸುತ್ತಾ ಕೊರಗಿ ಕೊರಗಿ ದಿನದಿನಕ್ಕೆ ಕೃಶವಾಗುತ ಬಂದಳು.

